ದರ್ಶಯೇ ದ್ವಿಜಸೂನೂಂಸ್ತೇ ಮಾವಜ್ಞಾತ್ಮಾನಮಾತ್ಮನಾ ।
ಯೇ ತೇ ನಃ ಕೀರ್ತಿಂ ವಿಮಲಾಂ ಮನುಷ್ಯಾಃ ಸ್ಥಾಪಯಿಷ್ಯಂತಿ ॥ ೪೬ ॥

ಇತಿ ಸಂಭಾಷ್ಯ ಭಗವಾನರ್ಜುನೇನ ಸಹೇಶ್ವರಃ ।
ದಿವ್ಯಂ ಸ್ವರಥಮಾಸ್ಥಾಯ ಪ್ರತೀಚೀಂ ದಿಶಮಾವಿಶತ್ ॥ ೪೭ ॥

ಸಪ್ತ ದ್ವೀಪಾನ್ ಸಪ್ತ ಸಿಂಧೂನ್ ಸಪ್ತಸಪ್ತಗಿರೀನಥ ।
ಲೋಕಾಲೋಕಂ ತಥಾತೀತ್ಯ ವಿವೇಶ ಸುಮಹತ್ತಮಃ ॥ ೪೮ ॥

ತತ್ರಾಶ್ವಾಃ ಶೈಬ್ಯಸುಗ್ರೀವಮೇಘಪುಷ್ಪಬಲಾಹಕಾಃ ।
ತಮಸಿ ಭ್ರಷ್ಟಗತಯೋ ಬಭೂವುರ್ಭರತರ್ಷಭ ॥ ೪೯ ॥

ತಾನ್ ದೃಷ್ಟ್ವಾ ಭಗವಾನ್ ಕೃಷ್ಣೋ ಮಹಾಯೋಗೇಶ್ವರೇಶ್ವರಃ ।
ಸಹಸ್ರಾದಿತ್ಯಸಂಕಾಶಂ ಸ್ವಚಕ್ರಂ ಪ್ರಾಹಿಣೋತ್ಪುರಃ ॥ ೫೦ ॥

ತಮಃ ಸುಘೋರಂ ಗಹನಂ ಕೃತಂ ಮಹದ್
ವಿದಾರಯದ್ಭೂರಿತರೇಣ ರೋಚಿಷಾ ।
ಮನೋಜವಂ ನಿರ್ವಿವಿಶೇ ಸುದರ್ಶನಂ
ಗುಣಚ್ಯುತೋ ರಾಮಶರೋ ಯಥಾ ಚಮೂಃ ॥ ೫೧ ॥

ದ್ವಾರೇಣ ಚಕ್ರಾನುಪಥೇನ ತತ್ತಮಃ
ಪರಂ ಪರಂ ಜ್ಯೋತಿರನಂತಪಾರಮ್ ।
ಸಮಶ್ನುವಾನಂ ಪ್ರಸಮೀಕ್ಷ್ಯ ಫಾಲ್ಗುನಃ
ಪ್ರತಾಡಿತಾಕ್ಷೋಽಪಿದಧೇಽಕ್ಷಿಣೀ ಉಭೇ ॥ ೫೨ ॥

ತತಃ ಪ್ರವಿಷ್ಟಃ ಸಲಿಲಂ ನಭಸ್ವತಾ
ಬಲೀಯಸೈಜದ್ಬೃಹದೂರ್ಮಿಭೂಷಣಮ್ ।
ತತ್ರಾದ್ಭುತಂ ವೈ ಭವನಂ ದ್ಯುಮತ್ತಮಂ
ಭ್ರಾಜನ್ಮಣಿಸ್ತಂಭಸಹಸ್ರಶೋಭಿತಮ್ ॥ ೫೩ ॥

ತಸ್ಮಿನ್ ಮಹಾಭೀಮಮನಂತಮದ್ಭುತಂ
ಸಹಸ್ರಮೂರ್ಧನ್ಯಫಣಾಮಣಿದ್ಯುಭಿಃ ।
ವಿಭ್ರಾಜಮಾನಂ ದ್ವಿಗುಣೋಲ್ಬಣೇಕ್ಷಣಂ
ಸಿತಾಚಲಾಭಂ ಶಿತಿಕಂಠಜಿಹ್ವಮ್ ॥ ೫೪ ॥

ನೀನು ಹಳಿದುಕೊಳ್ಳಬೇಡ. ನಾನು ನಿನಗೆ ಬ್ರಾಹ್ಮಣನ ಎಲ್ಲ ಬಾಲಕರನ್ನು ತೋರಿಸಿಕೊಡುತ್ತೇನೆ. ಇಂದು ನಿನ್ನನ್ನು ನಿಂದಿಸುವವರೇ ನಾಳೆ ನಿನ್ನ ಕೀರ್ತಿಯನ್ನು ಲೋಕದಲ್ಲಿ ಕೊಂಡಾಡುವರು. ॥ ೪೬ ॥

ಸರ್ವೇಶ್ವರನಾದ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಹೇಳಿ ಅವನೊಡನೆ ದಿವ್ಯವಾದ ರಥದಲ್ಲಿ ಕುಳಿತು ಪಶ್ಚಿಮ ದಿಕ್ಕಿನ ಕಡೆಗೆ ಪ್ರಯಾಣ ಹೊಟನು. ॥ ೪೭ ॥ ಅವರು ಏಳೇಳು ಪರ್ವತಗಳಿದ್ದ ಏಳು ದ್ವೀಪಗಳನ್ನು, ಏಳು ಸಮುದ್ರಗಳನ್ನೂ, ಲೋಕಾಲೋಕವೆಂಬ ಪರ್ವತವನ್ನು ದಾಟಿ ಗಾಢಾಂಧಕಾರವನ್ನು ಪ್ರವೇಶಿಸಿದರು. ॥ ೪೮ ॥ ಪರೀಕ್ಷಿತನೇ! ಶ್ರೀಕೃಷ್ಣನ ರಥಕ್ಕೆ ಹೂಡಿದ್ದ ಶೈಬ್ಯ, ಸುಗ್ರೀವ, ಮೇಘಪುಷ್ಪ ಬಲಾಹಕಗಳೆಂಬ ನಾಲ್ಕು ಕುದುರೆಗಳು ಆ ಗಾಂಢಾಂಧಕಾರದಲ್ಲಿ ದಾರಿತಪ್ಪಿ ಏನೂ ತೋಚದೆ ಯದ್ವಾ ತದ್ವಾ ಹೋಗತೊಡಗಿದವು. ॥ ೪೯ ॥ ಯೋಗೇಶ್ವರರಿಗೂ ಈಶ್ವರನಾದ ಭಗವಾನ್ ಶ್ರೀಕೃಷ್ಣನು ಕುದುರೆಗಳ ಈ ಸ್ಥಿತಿಯನ್ನು ಕಂಡು ಸಾವಿರಾರು ಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳ ತನ್ನ ಸುದರ್ಶನಕ್ಕೆ ಮುಂದೆ ಹೋಗುವಂತೆ ಆಜ್ಞಾಪಿಸಿದನು. ॥ ೫೦ ॥ ಸುದರ್ಶನ ಚಕ್ರವು ತನ್ನ ಜ್ಯೋತಿರ್ಮಯ ತೇಜದಿಂದ ಸಾಕ್ಷಾತ್ ಭಗವಂತನಿಂದಲೇ ಉತ್ಪನ್ನವಾದ ಗಾಢಾಂಧಕಾರವನ್ನು ಸೀಳುತ್ತಾ ಭಗವಾನ್ ರಾಮನ ಬಾಣವು ರಾಕ್ಷಸ ಸೈನ್ಯವನ್ನು ಹೊಕ್ಕು ಧ್ವಂಸ ಮಾಡುವಂತೆ ಮನಸ್ಸಿನ ವೇಗಕ್ಕಿಂತಲೂ ತೀವ್ರವಾದ ವೇಗದಿಂದ ಮುಂದರಿಯಿತು. ॥ ೫೧ ॥

ಈ ಪ್ರಕಾರವಾಗಿ ಸುದರ್ಶನ ಚಕ್ರವು ತೋರಿದ ದಾರಿಯಿಂದ ಮುಂದೆ ಹೋಗುತ್ತಾ ರಥವು ಅಂಧಕಾರದ ಕೊನೆಯ ತುದಿಗೆ ತಲುಪಿತು. ಆ ಅಂಧಕಾರದ ಆಚೆ ಸರ್ವಶ್ರೇಷ್ಠ ಪರಮಜ್ಯೋತಿಯು ಎಲ್ಲೆಡೆ ಬೆಳಗುತ್ತಿತ್ತು. ಅದನ್ನು ನೋಡಿ ಅರ್ಜುನನ ಕಣ್ಣುಗಳು ಕೋರೈಸಿದಂತಾಗಿ ಅವನು ತನ್ನ ಕಣ್ಣುಗಳನ್ನು ಮುಚ್ಚಿಕೊಂಡನು. ॥೫೨॥ ಅನಂತರ ಭಗವಂತನ ರಥವು ದಿವ್ಯ ಜಲರಾಶಿಯಲ್ಲಿ ಪ್ರವೇಶಿಸಿತು. ಅತ್ಯಂತ ಬಲಿಷ್ಠವಾದ ಬಿರುಗಾಳಿಯು ಬೀಸುತ್ತಿದ್ದರಿಂದ ಆ ನೀರಿನಲ್ಲಿ ದೊಡ್ಡ-ದೊಡ್ಡ ಅಲೆಗಳು ಏಳುತ್ತಿದ್ದವು. ಅವು ಜಲರಾಶಿಗೆ ಭೂಷಣಪ್ರಾಯವಾಗಿ ಕಾಣುತ್ತಿದ್ದವು. ಅಲ್ಲಿ ಅತ್ಯಂತ ಸುಂದರವಾದ ಒಂದು ಭವನವಿತ್ತು. ಅದರಲ್ಲಿ ಮಣಿಗಳ ಸಾವಿರಾರು ಕಂಬಗಳು ಹೊಳೆಯುತ್ತಾ ಅದರ ಶೋಭೆಯನ್ನು ಹೆಚ್ಚಿಸಿದ್ದವು. ಹಾಗೂ ಅದರ ಸುತ್ತಲೂ ಉಜ್ವಲ ಜ್ಯೋತಿಯು ಹರಡಿತ್ತು. ॥ ೫೩ ॥ ಅದೇ ಭವನದಲ್ಲಿ ಭಗವಾನ್ ಆದಿಶೇಷನು ವಿರಾಜಮಾನನಾಗಿದ್ದನು. ಅವನ ಶರೀರವು ಅತ್ಯಂತ ಭಯಾನಕವೂ, ಅದ್ಭುತವೂ ಆಗಿತ್ತು. ಅವನಿಗೆ ಸಾವಿರ ಹೆಡೆಗಳಿದ್ದು ಪ್ರತಿಯೊಂದರಲ್ಲಿಯೂ ಸುಂದರ ಮಣಿಗಳು ಹೊಳೆಯುತ್ತಿದ್ದವು. ಪ್ರತಿಯೊಂದು ಹೆಡೆಗೂ ಭಯಂಕರವಾದ ಎರಡೆರಡು ಕಣ್ಣುಗಳಿದ್ದವು. ಅವನ ಶರೀರವೆಲ್ಲವೂ ಕೈಲಾಸದಂತೆ ಬೆಳ್ಳಗಿದ್ದು, ಕಂಠ ಮತ್ತು ನಾಲಗೆಗಳು ನೀಲವಾಗಿದ್ದವು. ॥ ೫೪ ॥ ಆ ಆದಿಶೇಷನನ್ನೇ ಸುಖಮಯವಾದ

ದದರ್ಶ ತದ್ಭೋಗಸುಖಾಸನಂ ವಿಭುಂ
ಮಹಾನುಭಾವಂ ಪುರುಷೋತ್ತಮೋತ್ತಮಮ್ ।
ಸಾಂದ್ರಾಂಬುದಾಭಂ ಸುಪಿಶಂಗವಾಸಸಂ
ಪ್ರಸನ್ನವಕ್ತ್ರಂ ರುಚಿರಾಯತೇಕ್ಷಣಮ್ ॥ ೫೫ ॥

ಮಹಾಮಣಿವ್ರಾತಕಿರೀಟಕುಂಡಲ-
ಪ್ರಭಾಪರಿಕ್ಷಿಪ್ತಸಹಸ್ರಕುಂತಲಮ್ ।
ಪ್ರಲಂಬಚಾರ್ವಷ್ಟಭುಜಂ ಸಕೌಸ್ತುಭಂ
ಶ್ರೀವತ್ಸಲಕ್ಷ್ಮಂ ವನಮಾಲಯಾ ವೃತಮ್ ॥ ೫೬ ॥

ಸುನಂದನಂದಪ್ರಮುಖೈಃ ಸ್ವಪಾರ್ಷದೈಃ
ಚಕ್ರಾದಿಭಿರ್ಮೂರ್ತಿಧರೈರ್ನಿಜಾಯುಧೈಃ ।
ಪುಷ್ಟ್ಯಾ ಶ್ರಿಯಾ ಕೀರ್ತ್ಯಜಯಾಖಿಲರ್ದ್ಧಿಭಿಃ
ನಿಷೇವ್ಯಮಾಣಂ ಪರಮೇಷ್ಠಿನಾಂ ಪತಿಮ್ ॥ ೫೭ ॥

ವವಂದ ಆತ್ಮಾನಮನಂತಮಚ್ಯುತೋ
ಜಿಷ್ಣುಶ್ಚ ತದ್ದರ್ಶನಜಾತಸಾಧ್ವಸಃ ।
ತಾವಾಹ ಭೂಮಾ ಪರಮೇಷ್ಠಿನಾಂ ಪ್ರಭು-
ರ್ಬದ್ಧಾಂಜಲೀ ಸಸ್ಮಿತಮೂರ್ಜಯಾ ಗಿರಾ ॥ ೫೮ ॥

ದ್ವಿಜಾತ್ಮಜಾ ಮೇ ಯುವಯೋರ್ದಿದೃಕ್ಷುಣಾ
ಮಯೋಪನೀತಾ ಭುವಿ ಧರ್ಮಗುಪ್ತಯೇ ।
ಕಲಾವತೀರ್ಣಾವವನೇರ್ಭರಾಸುರಾನ್
ಹತ್ವೇಹ ಭೂಯಸ್ತ್ವರಯೇತಮಂತಿ ಮೇ ॥ ೫೯ ॥

ಪೂರ್ಣಕಾಮಾವಪಿ ಯುವಾಂ ನರನಾರಾಯಣಾವೃಷೀ ।
ಧರ್ಮಮಾಚರತಾಂ ಸ್ಥಿತ್ಯೈ ಋಷಭೌ ಲೋಕಸಂಗ್ರಹಮ್
॥ ೬೦ ॥

ಇತ್ಯಾದಿಷ್ಟೌ ಭಗವತಾ ತೌ ಕೃಷ್ಣೌ ಪರಮೇಷ್ಠಿನಾ ।
ಓಮಿತ್ಯಾನಮ್ಯ ಭೂಮಾನಮಾದಾಯ ದ್ವಿಜದಾರಕಾನ್
॥ ೬೧ ॥

ನ್ಯವರ್ತತಾಂ ಸ್ವಕಂ ಧಾಮ ಸಂಪ್ರಹೃಷ್ಟೌ ಯಥಾಗತಮ್ ।
ವಿಪ್ರಾಯ ದದತುಃ ಪುತ್ರಾನ್ ಯಥಾರೂಪಂ ಯಥಾವಯಃ
॥ ೬೨ ॥

ಹಾಸಿಗೆಯನ್ನಾಗಿಸಿಕೊಂಡು ಸರ್ವವ್ಯಾಪಕನೂ, ಅತ್ಯಂತ ಪ್ರಭಾವಶಾಲಿಯೂ ಆದ ಪುರುಷೋತ್ತಮನು ಪವಡಿಸಿರುವುದನ್ನು ಅರ್ಜುನನು ನೋಡಿದನು. ಆ ಪುರುಷೋತ್ತಮನು ನೀಲಮೇಘಶ್ಯಾಮನಾಗಿದ್ದನು. ಸುಂದರವಾದ ಪೀತಾಂಬರವನ್ನು ಉಟ್ಟಿದ್ದನು. ಪ್ರಸನ್ನವದನನಾಗಿದ್ದನು. ಸುಂದರವೂ ವಿಶಾಲವೂ ಆದ ಕಣ್ಣುಗಳನ್ನು ಹೊಂದಿದ್ದನು. ॥ ೫೫ ॥ ಭಗವಂತನ ಸಾವಿರಾರು ಮುಂಗುರುಳುಗಳು ಮಹಾಮಣಿಗಳ ರಾಶಿಯಿಂದ ಸಿದ್ಧಗೊಳಿಸಿದ ಕಿರೀಟ-ಕುಂಡಲಗಳ ಕಾಂತಿಯಿಂದ ರಾರಾಜಿಸುತ್ತಿದ್ದವು. ನೀಳವಾದ ಅಷ್ಟಭುಜಗಳಿದ್ದವು. ಕೊರಳಲ್ಲಿ ಕೌಸ್ತುಭ ಮಣಿಯಿದ್ದು, ವಕ್ಷಸ್ಥಳದಲ್ಲಿ ಶ್ರೀವತ್ಸಲಾಂಛನವು ಶೋಭಿಸುತ್ತಿತ್ತು. ಅವನು ವನಮಾಲೆಯಿಂದ ಸಮಲಂಕೃತನಾಗಿದ್ದನು. ॥ ೫೬ ॥ ನಂದ, ಸುನಂದ ಮುಂತಾದ ಪಾರ್ಷದರೂ, ಚಕ್ರ-ಸುದರ್ಶನ ಮುಂತಾದ ಆಯುಧಗಳು ಮೂರ್ತಿಮಂತರಾಗಿ, ಪುಷ್ಟಿ-ಶ್ರೀ ಕೀರ್ತಿ-ಅಜಾ ಎಂಬ ನಾಲ್ಕು ಶಕ್ತಿಗಳೂ, ಸಮಸ್ತ ಋದ್ಧಿಗಳೂ, ಬ್ರಹ್ಮಾದಿಲೋಕಪಾಲರು ಜಗದೀಶ್ವರನಾದ ಭಗವಂತನನ್ನು ಸೇವಿಸುತ್ತಿರುವುದನ್ನು ಅರ್ಜುನನು ನೋಡಿದನು. ॥ ೫೭ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ತನ್ನದೇ ಸ್ವರೂಪವಾದ ಅನಂತ ಭಗವಂತನಿಗೆ ವಂದಿಸಿದನು. ಅರ್ಜುನನು ಅವನ ದರ್ಶನದಿಂದ ಸ್ವಲ್ಪ ಭಯಗೊಂಡಿದ್ದನು. ಶ್ರೀಕೃಷ್ಣನು ವಂದಿಸಿದ ಬಳಿಕ ಅವನೂ ಭಗವಂತನಿಗೆ ನಮಸ್ಕರಿಸಿದನು. ಕೈಗಳನ್ನು ಜೋಡಿಸಿಕೊಂಡು ನಿಂತಿದ್ದ ಶ್ರೀಕೃಷ್ಣಾರ್ಜುನರನ್ನು ಕುರಿತು ಪರಬ್ರಹ್ಮಸ್ವರೂಪನೂ, ಲೋಕಪಾಲರೆಲ್ಲರ ಪ್ರಭುವೂ ಆದ ಪುರುಷೋತ್ತಮನು ಮೇಘಗಂಭೀರವಾಣಿಯಿಂದ ಈ ಮಾತನ್ನು ಹೇಳಿದನು - ॥ ೫೮ ॥

ಕೃಷ್ಣಾರ್ಜುನರೇ ! ನಿಮ್ಮಿಬ್ಬರನ್ನು ನೋಡುವ ಸಲುವಾಗಿಯೇ ಬ್ರಾಹ್ಮಣ ಬಾಲಕರನ್ನು ನನ್ನ ಬಳಿಗೆ ಕರೆತಂದಿರುವೆನು. ನೀವಿಬ್ಬರೂ ಧರ್ಮದ ರಕ್ಷಣೆಗಾಗಿಯೇ ನನ್ನ ಕಲಾಂಶಗಳಿಂದ ಭೂಮಿಯಲ್ಲಿ ಅವತರಿಸಿರುವಿರಿ. ಪೃಥಿವಿಗೆ ಭಾರರೂಪವಾದ ದೈತ್ಯರೆಲ್ಲರನ್ನು ಸಂಹರಿಸಿ ನೀವಿಬ್ಬರೂ ಶೀಘ್ರಾತಿಶೀಘ್ರವಾಗಿ ನನ್ನ ಬಳಿಗೆ ಮರಳಿ ಬನ್ನಿರಿ. ॥ ೫೯ ॥ ನೀವಿಬ್ಬರೂ ಋಷಿಶ್ರೇಷ್ಠರಾದ ನರ-ನಾರಾಯಣರೇ ಆಗಿರುವಿರಿ. ನೀವು ಪೂರ್ಣಕಾಮರೂ, ಸರ್ವಶ್ರೇಷ್ಠರೂ, ಆಗಿದ್ದರೂ ಜಗತ್ತಿನ ಸ್ಥಿತಿ ಮತ್ತು ಲೋಕಸಂಗ್ರಹಕ್ಕಾಗಿ ಧರ್ಮವನ್ನು ಆಚರಿಸುತ್ತಾ ಇರಿ. ॥ ೬೦ ॥

ಪರಬ್ರಹ್ಮಸ್ವರೂಪನಾದ ಪುರುಷೋತ್ತಮನು ಕೃಷ್ಣಾರ್ಜುನರಿಗೆ ಹೀಗೆ ಆದೇಶವನ್ನು ನೀಡಲು, ಅವರು ಅದನ್ನು ಸ್ವೀಕರಿಸಿ ಅವನಿಗೆ ನಮಸ್ಕಾರಮಾಡಿ ಅತ್ಯಂತ ಆನಂದದಿಂದ ಬ್ರಾಹ್ಮಣಬಾಲಕರನ್ನು ಕರೆದುಕೊಂಡು ಬಂದ ದಾರಿಯಿಂದಲೇ ದ್ವಾರಕೆಗೆ ಮರಳಿದರು. ಬ್ರಾಹ್ಮಣನ ಬಾಲಕರು ತಮ್ಮ-ತಮ್ಮ ವಯಸ್ಸಿಗೆ ಅನುಗುಣವಾದ ರೂಪವುಳ್ಳವರಾಗಿಯೂ, ಆಕೃತಿಯುಳ್ಳವರಾಗಿಯೂ ಇದ್ದರು. ಭಗವಾನ್ ಶ್ರೀಕೃಷ್ಣ ಮತ್ತು ಅರ್ಜುನರು ಅವರನ್ನು ಬ್ರಾಹ್ಮಣನಿಗೆ ಒಪ್ಪಿಸಿದರು. ॥ ೬೧-೬೨ ॥

ನಿಶಾಮ್ಯ ವೈಷ್ಣವಂ ಧಾಮ ಪಾರ್ಥಃ ಪರಮವಿಸ್ಮಿತಃ ।
ಯತ್ಕಿಂಚಿತ್ಪೌರುಷಂ ಪುಂಸಾಂ ಮೇನೇ ಕೃಷ್ಣಾನುಕಂಪಿತಮ್ ॥ ೬೩ ॥

ಭಗವಾನ್ ವಿಷ್ಣುವಿನ ಆ ಪರಮ ಧಾಮವನ್ನು ನೋಡಿದ ಅರ್ಜುನನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ. ಜೀವರಲ್ಲಿರುವ ಬಲ-ಪೌರುಷಗಳೆಲ್ಲವೂ ಭಗವಾನ್ ಶ್ರೀಕೃಷ್ಣನ ಕೃಪೆಯ ಫಲವೇ ಆಗಿದೆ ಎಂದು ಅವನು ಅರಿತು ಕೊಂಡನು. ॥ ೬೩ ॥

ಇತೀದೃಶಾನ್ಯನೇಕಾನಿ ವೀರ್ಯಾಣೀಹ ಪ್ರದರ್ಶಯನ್ ।
ಬುಭುಜೇ ವಿಷಯಾನ್ ಗ್ರಾಮ್ಯಾನೀಜೇ ಚಾತ್ಯೂರ್ಜಿತೈರ್ಮಖೈಃ ॥ ೬೪ ॥

ಪರೀಕ್ಷಿತನೇ ! ಭಗವಂತನು ಇಂತಹ ಅನೇಕ ಐಶ್ವರ್ಯಯುಕ್ತವೂ, ವೀರ್ಯ-ಶೌರ್ಯಗಳಿಂದಲೂ ಪರಿ ಪೂರ್ಣವಾದ ಲೀಲೆಗಳನ್ನು ಮಾಡಿದನು. ಲೌಕಿಕದೃಷ್ಟಿಯಲ್ಲಿ ಸಾಮಾನ್ಯ ಜನರಂತೆ ಸಾಂಸಾರಿಕ ವಿಷಯಗಳನ್ನು ಅನುಭವಿಸಿದನು ಮತ್ತು ದೊಡ್ಡ-ದೊಡ್ಡ ಮಹಾರಾಜರಂತೆ ಶ್ರೇಷ್ಠವಾದ ಯಜ್ಞಗಳನ್ನು ಮಾಡಿದನು. ॥ ೬೪ ॥

ಪ್ರವವರ್ಷಾಖಿಲಾನ್ ಕಾಮಾನ್ ಪ್ರಜಾಸು ಬ್ರಾಹ್ಮಣಾದಿಷು ।
ಯಥಾಕಾಲಂ ಯಥೈವೇಂದ್ರೋ ಭಗವಾನ್ ಶ್ರೈಷ್ಠ್ಯಮಾಸ್ಥಿತಃ ॥ ೬೫ ॥

ಭಗವಾನ್ ಶ್ರೀಕೃಷ್ಣನು ಆದರ್ಶ ಮಹಾಪುರುಷರಂತೆಯೇ ಆಚರಣೆ ಮಾಡುತ್ತಾ ಬ್ರಾಹ್ಮಣರೇ ಮೊದಲಾದ ಎಲ್ಲ ಪ್ರಜಾಜನರ ಸಮಸ್ತ ಮನೋರಥಗಳನ್ನು ಇಂದ್ರನು ಪ್ರಜೆಗಳಿಗೆ ಸಮಯಕ್ಕೆ ಸರಿಯಾಗಿ ಮಳೆಸುರಿಸುವಂತೆ ಪೂರ್ಣಗೊಳಿಸಿದನು. ॥ ೬೫ ॥

ಹತ್ವಾ ನೃಪಾನಧರ್ಮಿಷ್ಠಾನ್ ಘಾತಯಿತ್ವಾರ್ಜುನಾದಿಭಿಃ ।
ಅಂಜಸಾ ವರ್ತಯಾಮಾಸ ಧರ್ಮಂ ಧರ್ಮಸುತಾದಿಭಿಃ ॥ ೬೬ ॥

ಅವನು ಬಹಳಷ್ಟು ಅಧರ್ಮಿಗಳಾದ ರಾಜನನ್ನು ತಾನೇ ಸಂಹರಿಸಿದನು ಮತ್ತು ಅನೇಕರನ್ನು ಅರ್ಜುನಾದಿಗಳಿಂದ ಕೊಲ್ಲಿಸಿದನು. ಈ ಪ್ರಕಾರವಾಗಿ ಧರ್ಮರಾಜ ಯುಧಿಷ್ಠಿರಾದಿ ಧಾರ್ಮಿಕ ರಾಜರುಗಳಿಂದ ಅವನು ಅನಾಯಾಸವಾಗಿಯೇ ಸಮಸ್ತ ಪೃಥಿವಿಯಲ್ಲಿ ಧರ್ಮ ಮರ್ಯಾದೆಯನ್ನು ಸ್ಥಾಪಿಸಿದನು. ॥ ೬೬ ॥

ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೮೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ದ್ವಿಜಕುಮಾರಾನಯನಂ ನಾಮ ಏಕೋನನವತಿತಮೋಽಧ್ಯಾಯಃ ॥ ೮೯ ॥

# ತೊಂಭತ್ತನೆಯ ಅಧ್ಯಾಯ

## ಭಗವಾನ್ ಶ್ರೀಕೃಷ್ಣನ ಲೀಲಾವಿಹಾರ ವರ್ಣನೆ

ಶ್ರೀಶುಕ ಉವಾಚ

ಸುಖಂ ಸ್ವಪುರ್ಯಾಂ ನಿವಸನ್ ದ್ವಾರಕಾಯಾಂ ಶ್ರಿಯಃ ಪತಿಃ ।
ಸರ್ವಸಂಪತ್ಸಮೃದ್ಧಾಯಾಂ ಜುಷ್ಟಾಯಾಂ ವೃಷ್ಣಿಪುಂಗವೈಃ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ ! ಶ್ರಿಯಃಪತಿಯಾದ ಶ್ರೀಕೃಷ್ಣನು ಸಕಲ ವಿಧವಾದ ಸಂಪತ್ತುಗಳಿಂದಲೂ ಸಮೃದ್ಧವಾಗಿದ್ದ ತನ್ನ ದ್ವಾರಕೆಯಲ್ಲಿ ಯಾದವ ಶ್ರೇಷ್ಠರಿಂದ ಪರಿವೃತನಾಗಿ ಸುಖದಿಂದ ವಾಸಮಾಡಿಕೊಂಡಿದ್ದನು. ॥ ೧ ॥

ಸ್ತ್ರೀಭಿಶ್ಚೋತ್ತಮವೇಷಾಭಿರ್ನವಯೌವನಕಾಂತಿಭಿಃ ।
ಕಂದುಕಾದಿಭಿರ್ಹರ್ಮ್ಯೇಷು ಕ್ರೀಡಂತೀಭಿಸ್ತಡಿದ್ದ್ಯುಭಿಃ ॥ ೨ ॥

ನವಯೌವನ ಕಾಂತಿಯಿಂದ ಬೆಳಗುತ್ತಿದ್ದ, ಶ್ರೇಷ್ಠವಾದ ವೇಷ ಭೂಷಣಗಳನ್ನು ಧರಿಸಿದ್ದ, ಮಿಂಚಿನಂತೆ ಕಾಂತಿಯುಳ್ಳವರಾಗಿದ್ದು ಅಂತಃಪುರದಲ್ಲಿ ಚೆಂಡಾಟಗಳನ್ನಾಡುತ್ತಿದ್ದ ಶ್ರೀಕೃಷ್ಣನ ಪ್ರೇಯಸಿಯರಿಂದ ದ್ವಾರಕೆಯು ಬೆಳಗುತ್ತಿತ್ತು. ॥ ೨ ॥

ನಿತ್ಯಂ ಸಂಕುಲಮಾರ್ಗಾಯಾಂ ಮದಚ್ಯುದ್ಭಿರ್ಮತಂಗಜೈಃ ।
ಸ್ವಲಂಕೃತೈರ್ಭಟೈರಶ್ವೈ ರಥೈಶ್ಚ ಕನಕೋಜ್ಜ್ವಲೈಃ ॥ ೩ ॥

ದ್ವಾರಕೆಯ ಬೀದಿಗಳು ಮದೋದಕವನ್ನು ಸುರಿಸುತ್ತಿದ್ದ ಮಹಾಗಜಗಳಿಂದಲೂ, ವಸ್ತ್ರಾಭರಣಗಳಿಂದ ಸಮಲಂಕೃತರಾದ ಭಟರಿಂದಲೂ, ಶ್ರೇಷ್ಠವಾದ ಕುದುರೆಗಳಿಂದಲೂ, ಕನಕಾಲಂಕಾರಭೂಷಿತವಾದ ರಥಗಳಿಂದಲೂ ನಿಬಿಡವಾಗಿದ್ದವು. ॥ ೩ ॥ ಅಲ್ಲಿ ಅಡಿಗಡಿಗೂ ಉದ್ಯಾನಗಳೂ

ಉದ್ಯಾನೋಪವನಾಢ್ಯಾಯಾಂ ಪುಷ್ಪಿತದ್ರುಮರಾಜಿಷು ।
ನಿರ್ವಿಶದ್ ಭೃಂಗವಿಹಗೈರ್ನಾದಿತಾಯಾಂ ಸಮಂತತಃ ॥ ೪ ॥

ರೇಮೇ ಷೋಡಶಸಾಹಸ್ರಪತ್ನೀನಾಮೇಕವಲ್ಲಭಃ ।
ತಾವದ್ವಿಚಿತ್ರರೂಪೋಽಸೌ ತದ್ಗೃಹೇಷು ಮಹರ್ದ್ಧಿಷು ॥ ೫ ॥

ಪ್ರೋತ್ಫುಲ್ಲೋತ್ಪಲಕಲ್ಹಾರಕುಮುದಾಂಭೋಜರೇಣುಭಿಃ ।
ವಾಸಿತಾಮಲತೋಯೇಷು ಕೂಜದ್ದ್ವಿಜಕುಲೇಷು ಚ ॥ ೬ ॥

ವಿಜಹಾರ ವಿಗಾಹ್ಯಾಂಭೋ ಹ್ರದಿನೀಷು ಮಹೋದಯಃ ।
ಕುಚಕುಂಕುಮಲಿಪ್ತಾಂಗಃ ಪರಿರಬ್ಧಶ್ಚ ಯೋಷಿತಾಮ್ ॥ ೭ ॥

ಉಪಗೀಯಮಾನೋ ಗಂಧರ್ವೈರ್ಮೃದಂಗಪಣವಾನಕಾನ್ ।
ವಾದಯದ್ಭಿರ್ಮುದಾ ವೀಣಾಂ ಸೂತಮಾಗಧವಂದಿಭಿಃ ॥ ೮ ॥

ಸಿಚ್ಯಮಾನೋಽಚ್ಯುತಸ್ತಾಭಿರ್ಹಸಂತೀಭಿಃ ಸ್ಮ ರೇಚಕೈಃ ।
ಪ್ರತಿಷಿಂಚನ್ವಿಚಿಕ್ರೀಡೇ ಯಕ್ಷೀಭಿರ್ಯಕ್ಷರಾಡಿವ ॥ ೯ ॥

ತಾಃ ಕ್ಲಿನ್ನವಸ್ತ್ರ ವಿವೃತೋರುಕುಚಪ್ರದೇಶಾಃ
ಸಿಂಚಂತ್ಯ ಉದ್ಧೃತಬೃಹತ್ಕಬರಪ್ರಸೂನಾಃ ।
ಕಾಂತಂ ಸ್ಮ ರೇಚಕಜಿಹೀರಷಯೋಪಗುಹ್ಯ
ಜಾತಸ್ಮರೋತ್ಸವಲಸದ್ವದನಾ ವಿರೇಜುಃ ॥ ೧೦ ॥

ಕೃಷ್ಣಸ್ತು ತತ್ಸ್ತನವಿಷಜ್ಜಿತಕುಂಕುಮಸ್ರಕ್
ಕ್ರೀಡಾಭಿಷಂಗಧುತಕುಂತಲವೃಂದಬಂಧಃ ।
ಸಿಂಚನ್ಮುಹುರ್ಯುವತಿಭಿಃ ಪ್ರತಿಷಿಚ್ಯಮಾನೋ
ರೇಮೇ ಕರೇಣುಭಿರಿವೇಭಪತಿಃ ಪರೀತಃ ॥ ೧೧ ॥

ಹೂದೋಟಗಳೂ, ತೋಪುಗಳೂ ಇದ್ದುವು. ಅವುಗಳಲ್ಲಿನ ಮರ ಗಿಡ ಬಳ್ಳಿಗಳು ಹೂವುಗಳಿಂದ ಸಮಲಂಕೃತವಾಗಿದ್ದು ದುಂಬಿಗಳೂ, ಹಕ್ಕಿಗಳೂ ಕುಳಿತು ಇಂಪಾಗಿ ಹಾಡುತ್ತಿದ್ದವು. ॥ ೪ ॥ ಭಗವಾನ್ ಶ್ರೀಕೃಷ್ಣನು ಹದಿನಾರು ಸಾವಿರಕ್ಕಿಂತಲೂ ಅಧಿಕವಾದ ಪತ್ನಿಯರಿಗೆ ಏಕಮಾತ್ರ ವಲ್ಲಭನಾಗಿದ್ದನು. ಪ್ರಭುವಿನ ಪತ್ನಿಯರ ಪ್ರತ್ಯೇಕ ಪ್ರತ್ಯೇಕವಾದ ಅರಮನೆಗಳೂ ಐಶ್ವರ್ಯದಿಂದ ಸಮೃದ್ಧವಾಗಿದ್ದವು. ಎಷ್ಟು ಸಂಖ್ಯೆಯಲ್ಲಿ ಪತ್ನಿಯರಿದ್ದರೋ ಶ್ರೀಕೃಷ್ಣನು ಅಷ್ಟೇ ಸಂಖ್ಯೆಯಲ್ಲಿ ಅದ್ಭುತ ರೂಪಗಳನ್ನು ಧರಿಸಿ ಅವರೊಂದಿಗೆ ವಿಹರಿಸುತ್ತಿದ್ದನು. ॥ ೫ ॥ ಎಲ್ಲ ಪತ್ನಿಯರ ಅರಮನೆಗಳಲ್ಲಿಯೂ ಸುಂದರವಾದ ಸರೋವರ ಗಳಿದ್ದವು. ಅವುಗಳಲ್ಲಿದ್ದ ನಿರ್ಮಲವಾದ ನೀರು ನೈದಿಲೆ, ಕೆಂದಾವರೆ, ಬಿಳಿನೈದಿಲೆ, ಶತಪತ್ರ ಮುಂತಾದ ಬಗೆ-ಬಗೆಯ ಕಮಲ ಪುಷ್ಪಗಳ ಪರಾಗದಿಂದ ಸುಗಂಧಿತವಾಗಿತ್ತು. ಆ ಸರೋವರಗಳಲ್ಲಿ ಹಂಸ, ಸಾರಸ ಮುಂತಾದ ಜಲಚರ ಪಕ್ಷಿಗಳು ನಲಿದಾಡುತ್ತಿದ್ದವು. ಭಗವಾನ್ ಶ್ರೀಕೃಷ್ಣನು ಅಂತಹ ಸುಂದರವಾದ ಸರೋವರ ಗಳಲ್ಲಿಯೂ, ಕೆಲವೊಮ್ಮೆ ನದಿಗಳಲ್ಲಿಯೂ ತನ್ನ ಪತ್ನಿಯರೊಡನೆ ಜಲಕ್ರೀಡೆಯಾಡುವನು. ಮಹಾನುಭಾವನಾದ ಶ್ರೀಕೃಷ್ಣನು ಹಾಗೆ ಜಲಕ್ರೀಡೆಯಾಡುತ್ತಿದ್ದಾಗ ಪತ್ನಿಯರಿಂದ ಆಲಿಂಗಿಸಲ್ಪಟ್ಟು ಅವರ ಕುಚಕುಂಕುಮಗಂಧಗಳಿಂದ ಲಿಪ್ತವಾದ ವಕ್ಷಸ್ಥಳದಿಂದ ಕೂಡಿ ಬಹಳವಾಗಿ ಶೋಭಿಸುತ್ತಿದ್ದನು. ॥ ೬-೭ ॥ ಆ ಸಮಯದಲ್ಲಿ ಗಂಧರ್ವರು ಶ್ರೀಕೃಷ್ಣನ ಧರ್ಮ-ಕೀರ್ತಿಗಳನ್ನು ಗಾನಮಾಡುತ್ತಿದ್ದರು. ಸೂತ-ಮಾಗಧ-ವಂದಿಗಳು ಆನಂದತುಂದಿಲರಾಗಿ ವೀಣಾ, ಮೃದಂಗ, ಮದ್ದಳೆಗಳನ್ನು ನುಡಿಸುತ್ತಿದ್ದರು. ॥ ೮ ॥

ಶ್ರೀಕೃಷ್ಣನ ಪತ್ನಿಯರು ಕಿಲ-ಕಿಲನೆ ನಗುತ್ತಾ ಅವನ ಸುತ್ತಲೂ ನಿಂತು ನೀರ್ಕೋವಿಯಿಂದ ಶ್ರೀಕೃಷ್ಣನ ಮೇಲೆ ನೀರು ಸುರಿಸುವರು. ಇದಕ್ಕೆ ಪ್ರತಿಯಾಗಿ ಶ್ರೀಕೃಷ್ಣನು ಅವರ ಮೇಲೆ ರಭಸದಿಂದ ನೀರುಗ್ಗುತ್ತಾ ಯಕ್ಷಸ್ತ್ರೀಯರೊಡನೆ ಯಕ್ಷರು ಜಲಕ್ರೀಡೆಯಾಡು ವಂತೆ ನೀರಾಟವಾಡುತ್ತಿದ್ದನು. ॥ ೯ ॥ ನೀರಿನ ಎರಚಾಟದಿಂದ ಲಲನೆಯರ ವಸ್ತ್ರಗಳು ನೆನೆಯುತ್ತಿದ್ದವು. ಅವರ ದೊಡ್ಡ-ದೊಡ್ಡ ಮುಡಿಗಳಿಂದ ಪುಷ್ಪಗಳು ಉದುರುತ್ತಿದ್ದವು. ಕೃಷ್ಣನಿಂದ ನೀರನ್ನು ಸುರಿಸಲ್ಪಡುತ್ತಿದ್ದ ಜೀರ್ಕೋವಿಯನ್ನು ಕಿತ್ತುಕೊಳ್ಳುವ ನೆಪದಿಂದ ಪ್ರಮದೆಯರು ಪುರುಷೋತ್ತಮನನ್ನು ಆಲಿಂಗಿಸಿಕೊಳ್ಳುತ್ತಿದ್ದರು. ಅವನ ಸ್ಪರ್ಶದಿಂದ ಪತ್ನಿಯರ ಹೃದಯದಲ್ಲಿ ಪ್ರೇಮ-ಭಾವದ ಅಭಿವೃದ್ಧಿಯಾಗುತ್ತಿತ್ತು. ಅದರಿಂದ ಅವರ ಮುಖಕಮಲಗಳು ವಿಕಸಿತವಾಗಿ ಅವರ ಶೋಭೆಯು ಇನ್ನೂ ಹೆಚ್ಚುತ್ತಿತ್ತು. ॥ ೧೦ ॥ ಆ ಸಮಯದಲ್ಲಿ ಶ್ರೀಕೃಷ್ಣನ ವನಮಾಲೆಯು ಆ ರಾಣಿಯರ ವಕ್ಷಸ್ಥಳಕ್ಕೆ ಹಚ್ಚಿಕೊಂಡ ಕುಂಕುಮಕೇಸರಿಯ ಬಣ್ಣದಿಂದ ಕೆಂಪಾಗುತ್ತಿತ್ತು. ನೀರಾಟದ ಸಂಭ್ರಮದಲ್ಲಿ ಶ್ರೀಕೃಷ್ಣನ ಗುಂಗುರು ಕೂದಲುಗಳು ಕೆದರಿ ತಲೆಯಸುತ್ತಲೂ ಹರಡಿಕೊಂಡಿದ್ದವು. ಅವನು ತನ್ನ ರಾಣಿಯರನ್ನು ಮೇಲಿಂದ ಮೇಲೆ ನೀರಿನಿಂದ ನೆನೆಸಿ ಬಿಡುತ್ತಿದ್ದರೆ, ಅವರೂ ಶ್ರೀಕೃಷ್ಣನನ್ನು ನೆನೆಸಿಬಿಡುತ್ತಿದ್ದರು. ಗಜ ರಾಜನು ಹೆಣ್ಣಾನೆಗಳೊಡನೆ ಸುತ್ತುವರಿದು ಜಲಕ್ರೀಡೆಯಾಡು ವಂತೆ ಶ್ರೀಕೃಷ್ಣನು ಪತ್ನಿಯರೊಡನೆ ವಿಹರಿಸಿದನು. ॥ ೧೧ ॥

ನಟಾನಾಂ ನರ್ತಕೀನಾಂ ಚ ಗೀತವಾದ್ಯೋಪಜೀವಿನಾಮ್ ।
ಕ್ರೀಡಾಲಂಕಾರವಾಸಾಂಸಿ ಕೃಷ್ಣೋಽದಾತ್ತಸ್ಯ ಚ ಸ್ತ್ರಿಯಃ ॥ ೧೨ ॥

ಕೃಷ್ಣಸ್ಯೈವಂ ವಿಹರತೋ ಗತ್ಯಾಲಾಪೇಕ್ಷಿತಸ್ಮಿತೈಃ ।
ನರ್ಮಕ್ಷ್ವೇಲಿಪರಿಷ್ವಂಗೈಃ ಸ್ತ್ರೀಣಾಂ ಕಿಲ ಹೃತಾ ಧಿಯಃ ॥ ೧೩ ॥

ಊಚುರ್ಮುಕುಂದೈಕಧಿಯೋಽಗಿರ ಉನ್ಮತ್ತವಜ್ಜಡಮ್ ।
ಚಿಂತಯಂತ್ಯೋಽರವಿಂದಾಕ್ಷಂ ತಾನಿ ಮೇ ಗದತಃ ಶೃಣು ॥ ೧೪ ॥

ಮಹಿಷ್ಯ ಊಚುಃ

ಕುರರಿ ವಿಲಪಸಿ ತ್ವಂ ವೀತನಿದ್ರಾ ನ ಶೇಷೇ
ಸ್ವಪಿತಿ ಜಗತಿ ರಾತ್ರ್ಯಾಮೀಶ್ವರೋ ಗುಪ್ತಬೋಧಃ ।
ವಯಮಿವ ಸಖಿ ಕಚ್ಚಿದ್ಗಾಢನಿರ್ಭಿನ್ನಚೇತಾ
ನಲಿನನಯನಹಾಸೋದಾರಲೀಲೇಕ್ಷಿತೇನ ॥ ೧೫ ॥

ನೇತ್ರೇ ನಿಮೀಲಯಸಿ ನಕ್ತಮದೃಷ್ಟಬಂಧು-
ಸ್ತ್ವಂ ರೋರವೀಷಿ ಕರುಣಂ ಬತ ಚಕ್ರವಾಕಿ ।
ದಾಸ್ಯಂ ಗತಾ ವಯಮಿವಾಚ್ಯುತಪಾದಜುಷ್ಟಾಂ
ಕಿಂ ವಾ ಸ್ರಜಂ ಸ್ಪೃಹಯಸೇ ಕಬರೇಣ ವೋಢುಮ್ ॥ ೧೬ ॥

ಭೋ ಭೋಃ ಸದಾ ನಿಷ್ಟನಸೇ ಉದನ್ವ-
ನ್ನಲಬ್ಧನಿದ್ರೋಽಧಿಗತಪ್ರಜಾಗರಃ ।
ಕಿಂ ವಾ ಮುಕುಂದಾಪಹೃತಾತ್ಮಲಾಂಛನಃ
ಪ್ರಾಪ್ತಾಂ ದಶಾಂ ತ್ವಂ ಚ ಗತೋ ದುರತ್ಯಯಾಮ್ ॥ ೧೭ ॥

ಭಗವಾನ್ ಶ್ರೀಕೃಷ್ಣನ ಮತ್ತು ಅವರ ಪತ್ನಿಯರು ಕ್ರೀಡೆಯಾಡಿದ ಬಳಿಕ ತಮ್ಮ-ತಮ್ಮ ವಸ್ತ್ರಾಭರಣಗಳನ್ನು ಕಳಚಿ ಗೀತ-ವಾದ್ಯಗಳಿಂದಲೇ ಜೀವನ ನಿರ್ವಹಿಸುತ್ತಿದ್ದ ನಟ-ನರ್ತಕಿಯರಿಗೆ ಕೊಡುತ್ತಿದ್ದರು. ॥ ೧೨ ॥ ಪರೀಕ್ಷಿತನೇ ! ಈ ರೀತಿಯಿಂದ ಶ್ರೀಕೃಷ್ಣನು ಅವರೊಡನೆ ವಿಹರಿಸುತ್ತಿದ್ದನು. ಶ್ರೀಕೃಷ್ಣನು ಪ್ರಿಯ ವಿಲಾಸಗಳಿಂದಲೂ, ಮಂದಗಮನದಿಂದಲೂ, ಕಿರುನಗೆಯಿಂದಲೂ, ಪರಿಹಾಸೋಕ್ತಿಗಳಿಂದಲೂ, ಕಡೆಗಣ್ಣ ನೋಟದಿಂದಲೂ, ಆಲಿಂಗನ ಚುಂಬನಾದಿಗಳಿಂದಲೂ ಸ್ತ್ರೀಯರ ಮನಸ್ಸನ್ನು ಸಂಪೂರ್ಣವಾಗಿ ಅಪಹರಿಸಿ ಬಿಟ್ಟಿದ್ದನು. ॥ ೧೩ ॥ ರಾಣಿಯರಿಗೆ ಜೀವನ ಸರ್ವಸ್ವವೂ ಏಕಮಾತ್ರ ಹೃದಯೇಶ್ವರನಾದ ಶ್ರೀಕೃಷ್ಣನೇ ಆಗಿದ್ದನು. ಅವರು ಕೆಲವು ವೇಳೆ ಯಾರೊಂದಿಗೂ ಮಾತನ್ನಾಡದೆ ಮೌನವಾಗಿ ಕಮಲನಯನ ಶ್ಯಾಮಸುಂದರನ ಧ್ಯಾನದಲ್ಲೇ ತಲ್ಲೀನರಾಗುತ್ತಿದ್ದರು. ಕೆಲವೊಮ್ಮೆ ಉನ್ಮತ್ತರಂತೆ ಮಾತುಗಳನ್ನಾಡುವರು. ಕೆಲವೊಮ್ಮೆ ಶ್ರೀಕೃಷ್ಣನ ಸನಿಹದಲ್ಲೇ ಇದ್ದರೂ ಪ್ರೇಮೋನ್ಮಾದದ ಕಾರಣ ಅವನ ವಿರಹವನ್ನು ಅನುಭವಿಸುತ್ತಿದ್ದರು ಮತ್ತು ಏನೇನೋ ಮಾತನಾಡುತ್ತಿದ್ದರು. ಮಹಾರಾಜಾ ! ಅವರಾಡುತ್ತಿದ್ದ ಮಾತುಗಳನ್ನು ಯಥಾವತ್ತಾಗಿ ಹೇಳುತ್ತೇನೆ, ಕೇಳು. ॥ ೧೪ ॥

**ರಾಣಿಯರು ಹೇಳುತ್ತಾರೆ** - ಎಲೈ ಕುಕರ ಪಕ್ಷಿಯೇ ! ಸರ್ವೇಶ್ವರನಾದ ಶ್ರೀಕೃಷ್ಣನು ಬಾಹ್ಯ ವಿಷಯಗಳನ್ನು ಮರೆತು ಈ ರಾತ್ರಿಯಲ್ಲಿ ಸುಖವಾಗಿ ನಿದ್ರಿಸುತ್ತಿದ್ದಾನೆ. ನೀನಾದರೋ ನಿದ್ರಿಸುತ್ತಿಲ್ಲ, ಮಾತ್ರವಲ್ಲ ಅಳುತ್ತಿರುವೆ. ಇದರಿಂದ ಪ್ರಭುವಿನ ನಿದ್ರೆಗೆ ಭಂಗವುಂಟಾಗದೇ ? ಸಖಿಯೇ ! ಕಮಲಾಕ್ಷನಾದ ಶ್ರೀಕೃಷ್ಣನ ಉದಾರವಾದ ಲೀಲಾಕಟಾಕ್ಷವೀಕ್ಷಣದಿಂದ ನನ್ನಂತೆಯೇ ನಿನ್ನ ಮನಸ್ಸು ಕದಡಿ ಹೋಗಿದೆಯೇ ? ॥ ೧೫ ॥

ಚಕ್ರವಾಕ ಪಕ್ಷಿಯೇ ! ನೀನೇಕೆ ರಾತ್ರಿಯಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡಿರುವೆ ? ನಿನ್ನ ಪತಿಯು ದೇಶಾಂತರಕ್ಕೇನಾದರೂ ಹೋಗಿರುವನೇ ? ಇದರಿಂದಲೇ ನೀನು ಕರುಣಾಜನಕವಾದ ಸ್ವರದಲ್ಲಿ ಕೂಗಿಕೊಳ್ಳುತ್ತಿರುವೆಯಾ ? ಅಯ್ಯೋ ಪಾಪ ! ನೀನು ಬಹಳದುಃಖಿಯಾಗಿರುವೆ. ಅಥವಾ ನಮ್ಮಂತೆಯೇ ನಿನ್ನ ಹೃದಯದಲ್ಲಿ ಭಗವಂತನ ದಾಸೀಭಾವವು ಜಾಗ್ರತವಾಗಿದೆಯೇ ? ಈ ಕಾರಣದಿಂದಲೇ ನೀನು ಅವನ ಚರಣಗಳಲ್ಲಿ ಏರಿಸಿರುವ ಪುಷ್ಪಮಾಲೆಯನ್ನು ನಿನ್ನ ತುರುಬಿನಲ್ಲಿ ಧರಿಸಲು ಅಪೇಕ್ಷಿಸುತ್ತಿರುವೆಯಾ ? ॥ ೧೬ ॥

ಎಲೈ ಸಮುದ್ರವೇ ! ನೀನು ನಿರಂತರ ಭೋರ್ಗರೆಯುತ್ತಲೇ ಇರುವೆಯಲ್ಲ ! ನಿನಗೆ ನಿದ್ದೆ ಬರುವುದಿಲ್ಲವೇ ? ನಿನಗೆ ನಿದ್ರೆ ಬಾರದಿರುವ ರೋಗವೇನಾದರೂ ಉಂಟಾಗಿದೆಯೇ ? ಆದರೆ ಹಾಗಲ್ಲ, ನಿನಗೆ ಪ್ರಿಯನಾದ ಶ್ಯಾಮಸುಂದರನು ನಿನ್ನ ಧೈರ್ಯ, ಗಾಂಭೀರ್ಯ ಮೊದಲಾದ ಸ್ವಾಭಾವಿಕ ಗುಣಗಳನ್ನು ಕಿತ್ತು ಕೊಂಡಿರುವನು. ಇದರಿಂದ ನೀನು ನಮ್ಮಂತೆಯೇ ಯಾವುದೇ ಔಷಧಿಯೇ ಇಲ್ಲದ ರೋಗಕ್ಕೆ ತುತ್ತಾಗಿರುವಂತೆ ಕಾಣುತ್ತದೆ. ॥ ೧೭ ॥

ಎಲೈ ಚಂದ್ರನೇ ! ನೀನು ಬಲವಾದ ಕ್ಷಯರೋಗದಿಂದ ಪೀಡಿತನಾಗಿರುವೆ. ಆದರಿಂದಲೇ ಅತ್ಯಂತ ದುರ್ಬಲನಾಗಿರುವೆ. ಅಯ್ಯೋ ! ರಾಮ, ರಾಮ ! ಈಗ ನೀನು ನಿನ್ನ ಕಿರಣಗಳಿಂದ

ತ್ವಂ ಯಕ್ಷ್ಮಣಾ ಬಲವತಾಸಿ ಗೃಹೀತ ಇಂದೋ
ಕ್ಷೀಣಸ್ತಮೋ ನ ನಿಜದೀಧಿತಿಭಿಃ ಕ್ಷಿಣೋಷಿ ।
ಕಚ್ಚಿನ್ಮುಕುಂದಗದಿತಾನಿ ಯಥಾ ವಯಂ ತ್ವಂ
ವಿಸ್ಮೃತ್ಯ ಭೋಃ ಸ್ಥಗಿತಗೀರುಪಲಕ್ಷ್ಯಸೇ ನಃ ॥ ೧೮ ॥

ಕಿಂ ತ್ವಾಚರಿತಮಸ್ಮಾಭಿರ್ಮಲಯಾನಿಲ ತೇಽಪ್ರಿಯಮ್ ।
ಗೋವಿಂದಾಪಾಂಗನಿರ್ಭಿನ್ನೇ ಹೃದೀರಯಸಿ ನಃ ಸ್ಮರಮ್ ॥ ೧೯ ॥

ಮೇಘ ಶ್ರೀಮಂಸ್ತ್ವಮಸಿ ದಯಿತೋ ಯಾದವೇಂದ್ರಸ್ಯ ನೂನಂ
ಶ್ರೀವತ್ಸಾಂಕಂ ವಯಮಿವ ಭವಾನ್ ಧ್ಯಾಯತಿ ಪ್ರೇಮಬದ್ಧಃ ।
ಅತ್ಯುತ್ಕಂಠಃ ಶಬಲಹೃದಯೋಽಸ್ಮದ್ವಿಧೋ ಬಾಷ್ಪಧಾರಾಃ
ಸ್ಮೃತ್ವಾ ಸ್ಮೃತ್ವಾ ವಿಸೃಜಸಿ ಮುಹುರ್ದುಃಖದಸ್ತತ್ಪ್ರಸಂಗಃ ॥ ೨೦ ॥

ಪ್ರಿಯರಾವಪದಾನಿ ಭಾಷಸೇಮೃತ-
ಸಂಜೀವಿಕಯಾನಯಾ ಗಿರಾ ।
ಕರವಾಣಿ ಕಿಮದ್ಯ ತೇ ಪ್ರಿಯಂ
ವದ ಮೇ ವಲ್ಗಿತಕಂಠ ಕೋಕಿಲ ॥ ೨೧ ॥

ನ ಚಲಸಿ ನ ವದಸ್ಯುದಾರಬುದ್ಧೇ
ಕ್ಷಿತಿಧರ ಚಿಂತಯಸೇ ಮಹಾಂತಮರ್ಥಮ್ ।
ಅಪಿ ಬತ ವಸುದೇವನಂದನಾಂಘ್ರಿಂ
ವಯಮಿವ ಕಾಮಯಸೇ ಸ್ತನೈರ್ವಿಧರ್ತುಮ್ ॥ ೨೨ ॥

ಶುಷ್ಯದ್ಧ್ರದಾಃ ಕರ್ಶಿತಾ ಬತ ಸಿಂಧುಪತ್ನ್ಯಃ
ಸಂಪ್ರತ್ಯಪಾಸ್ತಕಮಲಶ್ರಿಯ ಇಷ್ಟಭರ್ತುಃ ।
ಯದ್ವದ್ವಯಂ ಮಧುಪತೇಃ ಪ್ರಣಯಾವಲೋಕಮ್
ಅಪ್ರಾಪ್ಯ ಮುಷ್ಟಹೃದಯಾಃ ಪುರುಕರ್ಶಿತಾಃ ಸ್ಮ ॥ ೨೩ ॥

ಕತ್ತಲೆಯನ್ನು ಓಡಿಸಲು ಅಸಮರ್ಥನಾಗಿರುವೆ. ನಮ್ಮ ಪ್ರಿಯ ಶ್ಯಾಮಸುಂದರನ ಮಧುರವಾದ ರಹಸ್ಯವಾದ ಮಾತುಗಳನ್ನು ಮರೆತು ಅದನ್ನೇ ಪುನಃ ಸ್ಮರಿಸುತ್ತಾ ನೀನು ಕ್ಷೀಣನೂ, ಮೌನಿಯೂ ಆಗಿರಬಹುದೇ ? ॥ ೧೮ ॥

ಎಲೈ ಮಲಯಾನಿಲವೇ ! ನಮ್ಮ ಹೃದಯದಲ್ಲಿ ಸುಪ್ತವಾಗಿದ್ದ ಕಾಮವನ್ನು ಬಡಿದೆಬ್ಬಿಸುತ್ತಿರುವೆಯಲ್ಲ ! ನಾವೇನು ನಿನಗೆ ಅಪರಾಧ ವೆಸಗಿದ್ದೇವೆ ? ಅಯ್ಯಾ ! ಭಗವಂತನ ಕಟಾಕ್ಷ-ವೀಕ್ಷಣದಿಂದ ನಮ್ಮ ಹೃದಯಗಳು ಮೊದಲೇ ಘಾಸಿಗೊಂಡಿವೆ. ಇದನ್ನು ತಿಳಿಯದೆ ಪುನಃ ನಮ್ಮನ್ನು ಏಕೆ ಸತಾಯಿಸುತ್ತಿರುವೆ ? ॥ ೧೯ ॥

ಶ್ರೀಮಂತನಾದ ಮೇಘರಾಜನೇ ! ನೀನು ಶ್ಯಾಮಲವರ್ಣ ದವನಾದ್ದರಿಂದ ಮೇಘಶ್ಯಾಮನಾದ ನಮ್ಮ ಪ್ರಿಯತಮನಿಗೆ ಅತ್ಯಂತ ಪ್ರಿಯನಾಗಿರುವೆ. ಅದರಿಂದಲೇ ನೀನು ನಮ್ಮಂತೆಯೇ ಪ್ರೇಮಪಾಶದಲ್ಲಿ ಬಿದ್ದು ಅವನನ್ನು ಧ್ಯಾನಮಾಡುತ್ತಿರುವೆ. ನೋಡು ! ನೋಡು ! ನಿನ್ನ ಹೃದಯವು ಚಿಂತೆಯಿಂದ ತುಂಬಿ ಹೋಗಿದೆ. ನೀನು ಅವನಿಗಾಗಿ ಅತ್ಯಂತ ಉತ್ಕಂಠಿತನಾಗಿರುವೆ. ಅದಕ್ಕೆಂದೇ ಪದೇ-ಪದೇ ಅವನನ್ನು ನೆನೆಯುತ್ತಾ ನಮ್ಮಂತೆಯೇ ಕಣ್ಣೀರ ಧಾರೆಗಳನ್ನು ಸುರಿಸುತ್ತಿರುವೆ. ಶ್ಯಾಮಘನ ! ನಿಜ ವಾಗಿಯೂ ಘನಶ್ಯಾಮನಲ್ಲಿ ಸಂಬಂಧ ಬೆಳೆಸುವುದೆಂದರೆ ದುಃಖ ಗಳಿಗೆ ಆಮಂತ್ರಣ ಕೊಟ್ಟಂತೆಯೇ ಸರಿ. ॥ ೨೦ ॥

ಎಲೈ ಕೋಗಿಲೆಯೇ ! ನೀನು ರಮಣೀಯವಾದ ಕಂಠ ಮಾಧುರ್ಯದಿಂದ ಕೂಡಿರುವೆ. ನಮ್ಮ ಪ್ರಿಯಕರ ಶ್ರೀಕೃಷ್ಣ ನಂತೆಯೇ ನೀನು ಕೂಡ ಮೃದುಮಧುರವಾದ, ಸತ್ತವರನ್ನೂ ಬದುಕಿಸುವ ಮಾಧರ್ಯದಿಂದ ಕೂಡಿರುವ ಮಾತುಗಳನ್ನೇ ಆಡುತ್ತಿರುವೆ. ಈಗ ನಿನಗೆ ಪ್ರಿಯವಾದ ಯಾವ ಕಾರ್ಯವನ್ನು ಮಾಡಿಕೊಡಲಿ ? ಹೇಳು. ॥ ೨೧ ॥

ಉದಾರ ಬುದ್ಧಿಯುಳ್ಳ ಕ್ಷಿತಿಧರನೇ ! ಪರ್ವತವೇ ! ನೀನು ಚಲಿಸುವುದಿಲ್ಲ, ಮಾತನಾಡುವುದೂ ಇಲ್ಲ, ಯಾವುದೋ ಗಂಭೀರ ವಾದ ವಿಷಯವನ್ನು ಕುರಿತು ಆಲೋಚಿಸುತ್ತಿರುವಂತೆ ಕಾಣುತ್ತಿ ರುವೆ. ನಾವು ನಮ್ಮ ಸ್ತನಗಳಿಂದ ಧರಿಸಲು ಬಯಸುವ ವಾಸು ದೇವನ ಚರಣಾರವಿಂದಗಳನ್ನು ನಿನ್ನ ಶಿಖರಗಳಿಂದೇನಾದರೂ ಧರಿಸಲು ಅಪೇಕ್ಷಿಸುತ್ತಿರುವೆಯಾ ? ಅದನ್ನೇ ಗಾಢವಾಗಿ ಯೋಚಿಸು ತ್ತಿರುವೆಯಾ ? ಹೇಳು. ॥ ೨೨ ॥

ಎಲೈ ಸಮುದ್ರಪತ್ನಿಯರಾದ ನದಿಗಳೇ ! ಇದು ಗ್ರೀಷ್ಮಋತು. ನಿಮ್ಮ ಮಡುಗಳೆಲ್ಲ ಒಣಗಿ ಹೋಗಿವೆ. ನಿಮ್ಮಲ್ಲಿ ಅರಳಿದ ಕಮಲ ಗಳ ಸೌಂದರ್ಯವು ಕಂಡುಬರುವುದಿಲ್ಲ. ನೀವು ಬಹಳ ಸೊರಗಿ ದ್ದೀರಿ. ನಾವು ನಮ್ಮ ಪ್ರಿಯತಮ ಶ್ಯಾಮಸುಂದರನ ಪ್ರೇಮ ತುಂಬಿದ ಓರೆನೋಟವನ್ನು ಪಡೆಯದೆ ನಮ್ಮ ಹೃದಯಗಳು ಬರಿದಾಗಿ ಅತ್ಯಂತ ಸೊರಗಿ ಹೋಗಿದ್ದೇವೆ. ಹಾಗೆಯೇ ನೀವು ಕೂಡ ಮೇಘಗಳ ಮೂಲಕ ನಿಮ್ಮ ಪ್ರಿಯಕರ ಸಮುದ್ರದ ನೀರು ಪಡೆಯದೆ ಹೀಗೆ ದೀನರಾಗಿದ್ದೀರಿ ಎಂದು ತೋರುತ್ತದೆ. ॥ ೨೩. ॥

ಎಲೈ ಹಂಸವೇ ! ಬಾ ! ಬಾ ! ನಿನಗೆ ಸ್ವಾಗತ ಬಯಸುತ್ತೇವೆ. ಈ ಪೀಠದಲ್ಲಿ ಕುಳಿತುಕೋ. ಸ್ವಲ್ಪ ಹಾಲು ಕುಡಿ. ಪ್ರಿಯ ಹಂಸವೇ ! ಶ್ಯಾಮಸುಂದರನ ಸಮಾಚಾರವನ್ನು ಹೇಳು. ನೀನು ಅವನ

ಹಂಸ ಸ್ವಾಗತಮಾಸ್ಯತಾಂ ಪಿಬ ಪಯೋ
ಬ್ರೂಹ್ಯಂಗ ಶೌರೇಃ ಕಥಾಂ
ದೂತಂ ತ್ವಾಂ ನು ವಿದಾಮ ಕಚ್ಚಿದಜಿತಃ
ಸ್ವಸ್ತ್ಯಾಸ್ತ ಉಕ್ತಂ ಪುರಾ ।
ಕಿಂ ವಾ ನಶ್ಚಲಸೌಹೃದಃ ಸ್ಮರತಿ ತಂ
ಕಸ್ಮಾದ್ಭಜಾಮೋ ವಯಂ
ಕ್ಷೌದ್ರಾಲಾಪಯ ಕಾಮದಂ ಶ್ರಿಯಮೃತೇ
ಸೈವೈಕನಿಷ್ಠಾ ಸ್ತ್ರಿಯಾಂ ॥ ೨೪ ॥

ದೂತನಾಗಿರುವೆ ಎಂದೇ ನಾವು ಭಾವಿಸುತ್ತೇವೆ. ಯಾರಿಗೂ ವಶನಾಗದಿರುವ ಶ್ಯಾಮಸುಂದರನು ಕುಶಲನಾಗಿರುವನಲ್ಲ? ಅಯ್ಯಾ! ಅವನ ಸ್ನೇಹ ಬಹಳ ಅಸ್ಥಿರ ಹಾಗೂ ಕ್ಷಣಭಂಗುರ. ನೀವೇ ನನಗೆ ಪರಮಪ್ರಿಯರು ಎಂದು ಅವನು ನಮಗೆ ಹೇಳಿದ್ದನು. ಏನು ಅದು ಅವನಿಗೆ ಸ್ಮರಣೆಯಲ್ಲಿದೆಯೇ? ನೀನೇ ಹೇಳು. ಹೋಗು! ಹೋಗು! ನಾವು ನಿನ್ನ ಅನುನಯ-ವಿನಯವನ್ನು ಕೇಳುವುದಿಲ್ಲ. ಅವನೇ ನಮ್ಮನ್ನು ಲಕ್ಷಿಸುವುದಿಲ್ಲವಾದರೆ ನಾವಾದರೂ ಅವನ ಹಿಂದೆ ಏಕೆ ಬೀಳಬೇಕು? ಕ್ಷುದ್ರನಾದ ದೂತನೇ! ನಾವು ಅವನ ಬಳಿಗೆ ಹೋಗುವುದಿಲ್ಲ. ಏನು ಹೇಳಿದ ಅವನು? ನಮ್ಮ ಇಚ್ಛೆಯನ್ನು ಪೂರ್ಣಗೊಳಿಸಲು ಅವನು ಬರಲು ಇಚ್ಛಿಸುವನೇ? ಸರಿ! ಹಾಗಾದರೆ ಅವನನ್ನು ಕರಕೊಂಡು ಬಾ. ಅವನೊಡನೆ ಮಾತನಾಡಲು ಅವಕಾಶಮಾಡಿಕೊಡು. ಆದರೆ ಲಕ್ಷ್ಮಿಯನ್ನು ಎಲ್ಲಾದರು ಜೊತೆಗೆ ಕರೆದುಕೊಂಡು ಬರುವುದು ಬೇಡ. ಹಾಗೇನೆ ಅವನು ಲಕ್ಷ್ಮಿಯನ್ನು ಬಿಟ್ಟು ಇಲ್ಲಿಗೆ ಬರಲು ಇಚ್ಛಿಸುವುದಿಲ್ಲವೇ? ಇದೆಂತಹ ಮಾತು? ಏನು ಸ್ತ್ರೀಯರಲ್ಲಿ ಲಕ್ಷ್ಮಿಯೊಬ್ಬಳಿಗೇ ಭಗವಂತನಲ್ಲಿ ಪ್ರೇಮವಿರುವುದೇ? ಏನು ನಮ್ಮಲ್ಲಿ ಯಾರೂ ಅಂತಹವರಿಲ್ಲವೇ? ॥ ೨೪ ॥

*ಶ್ರೀಶುಕ ಉವಾಚ*

ಇತೀದೃಶೇನ ಭಾವೇನ ಕೃಷ್ಣೇ ಯೋಗೇಶ್ವರೇಶ್ವರೇ ।
ಕ್ರಿಯಮಾಣೇನ ಮಾಧವ್ಯೋ ಲೇಭಿರೇ ಪರಮಾಂ ಗತಿಮ್
॥ ೨೫ ॥

ಶ್ರೀಶುಕಮಹಾಮುನಿಗಳು ಹೇಳಿದರು - ಪರೀಕ್ಷಿತನೇ! ಶ್ರೀಕೃಷ್ಣನ ಪತ್ನಿಯರು ಯೋಗೇಶ್ವರನಾದ ಭಗವಂತನಲ್ಲಿ ಇಂತಹ ಅನನ್ಯವಾದ ಪ್ರೇಮಭಾವವನ್ನು ಇಟ್ಟಿದ್ದರು. ಅದರಿಂದಲೇ ಅವರು ಪರಮಪದವನ್ನು ಪಡೆದುಕೊಂಡರು. ॥ ೨೫ ॥

ಶ್ರುತಮಾತ್ರೋಽಪಿ ಯಃ ಸ್ತ್ರೀಣಾಂ ಪ್ರಸಹ್ಯಾಕರ್ಷತೇ ಮನಃ ।
ಉರುಗಾಯೋರುಗೀತೋ ವಾ ಪಶ್ಯಂತೀನಾಂ ಕುತಃ ಪುನಃ
॥ ೨೬ ॥

ಭಗವಾನ್ ಶ್ರೀಕೃಷ್ಣನ ಅನಂತ ಲೀಲೆಗಳು ವಿವಿಧ ಪ್ರಕಾರದಿಂದ, ಅನೇಕ ಗೀತಗಳಿಂದ ಹಾಡಲ್ಪಟ್ಟಿವೆ. ಅವನ್ನು ಕೇಳಿದ ಮಾತ್ರದಿಂದಲೇ ಸ್ತ್ರೀಯರ ಮನಸ್ಸು ಬಲವಂತವಾಗಿ ಅವನೆಡೆಗೆ ಆಕರ್ಷಿಸಲ್ಪಡುವಷ್ಟು ಮಧುರವೂ, ಮನೋಹರವು ಆಗಿವೆ. ಹಾಗಿರುವಾಗ ಅವನನ್ನು ಕಣ್ಣಾರೆಕಂಡ ಸ್ತ್ರೀಯರ ವಿಷಯದಲ್ಲಿ ಹೇಳುವುದೇನಿದೆ? ॥ ೨೬ ॥

ಯಾಃ ಸಂಪರ್ಯಚರನ್ಪ್ರೇಮ್ಣಾ ಪಾದಸಂವಾಹನಾದಿಭಿಃ ।
ಜಗದ್ಗುರುಂ ಭರ್ತೃಬುದ್ಧ್ಯಾ ತಾಸಾಂ ಕಿಂ ವರ್ಣ್ಯತೇ ತಪಃ
॥ ೨೭ ॥

ಜಗದ್ಗುರು ಭಗವಾನ್ ಶ್ರೀಕೃಷ್ಣನನ್ನೇ ಪತಿಯೆಂದು ಭಾವಿಸಿದ ಸೌಭಾಗ್ಯವತಿಯರು ಅವನಿಗೆ ಪರಮಪ್ರೇಮದಿಂದ ಸ್ನಾನಮಾಡಿಸುವುದು, ಚರಣಗಳನ್ನು ಒತ್ತುವುದು, ಊಟಮಾಡಿಸುವುದು, ಮುಂತಾದ ಅನೇಕ ವಿಧದಿಂದ ಸೇವೆ ಮಾಡಿದರು. ಅವರ ತಪಸ್ಸನ್ನು ಯಾರು ತಾನೇ ವರ್ಣಿಸಬಲ್ಲರು? ॥ ೨೭ ॥

ಏವಂ ವೇದೋದಿತಂ ಧರ್ಮಮನುತಿಷ್ಠನ್ ಸತಾಂ ಗತಿಃ ।
ಗೃಹಂ ಧರ್ಮಾರ್ಥಕಾಮಾನಾಂ ಮುಹುಶ್ಚಾದರ್ಶಯತ್ಪದಮ್
॥ ೨೮ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಸತ್ಪುರುಷರಿಗೆ ಏಕಮಾತ್ರ ಆಶ್ರಯನಾಗಿರುವನು. ಅವನು ವೇದೋಕ್ತ ಧರ್ಮವನ್ನು ಪದೇ-ಪದೇ ಆಚರಿಸಿ - ಮನೆಯೇ, ಧರ್ಮ, ಅರ್ಥ, ಕಾಮ ಇವುಗಳನ್ನು ಸಾಧಿಸುವ ಸ್ಥಳವಾಗಿದೆ ಎಂದು ಜನರಿಗೆ ತೋರಿಸಿಕೊಟ್ಟಿರುವನು. ॥ ೨೮ ॥

ಆಸ್ಥಿತಸ್ಯ ಪರಂ ಧರ್ಮಂ ಕೃಷ್ಣಸ್ಯ ಗೃಹಮೇಧಿನಾಮ್ ।
ಆಸನ್ ಷೋಡಶಸಾಹಸ್ರಂ ಮಹಿಷ್ಯಶ್ಚ ಶತಾಧಿಕಮ್
॥ ೨೯ ॥

ಇದಕ್ಕಾಗಿಯೇ ಅವನು ಗೃಹಸ್ಥೋಚಿತವಾದ ಶ್ರೇಷ್ಠಧರ್ಮವನ್ನು ಆಶ್ರಯಿಸಿ ವ್ಯವಹರಿಸುತ್ತಿದ್ದನು. ಪರೀಕ್ಷಿತನೇ! ಅವನ ರಾಣಿಯರ ಸಂಖ್ಯೆ ಹದಿನಾರುಸಾವಿರದ ಒಂದುನೂರ ಎಂಟು ಇತ್ತು ಎಂದು ನಾನು ಮೊದಲೇ ನಿನಗೆ ಹೇಳಿರುವೆನು. ॥ ೨೯ ॥

ತಾಸಾಂ ಸ್ತ್ರೀರತ್ನಭೂತಾನಾಮಷ್ಟೌ ಯಾಃ ಪ್ರಾಗುದಾಹೃತಾಃ ।
ರುಕ್ಮಿಣೀಪ್ರಮುಖಾ ರಾಜನ್ಸ್ತತ್ಪುತ್ರಾಶ್ಚಾನುಪೂರ್ವಶಃ
॥ ೩೦ ॥

ಅಂತಹ ಶ್ರೇಷ್ಠ ಸ್ತ್ರೀಯರಲ್ಲಿ ರುಕ್ಮಿಣಿಯೇ ಮೊದಲಾದ ಎಂಟು ಜನ ಪಟ್ಟದರಸಿಯರು ಮತ್ತು ಅವರ ಪುತ್ರರ ಕುರಿತು ನಾನು ಮೊದಲೇ ಕ್ರಮವಾಗಿ ವರ್ಣಿಸಿರುವೆನು. ॥ ೩೦ ॥

ಏಕೈಕಸ್ಯಾಂ ದಶ ದಶ ಕೃಷ್ಣೋಽಜೀಜನದಾತ್ಮಜಾನ್ ।
ಯಾವತ್ಯ ಆತ್ಮನೋ ಭಾರ್ಯಾ ಅಮೋಘಗತಿರೀಶ್ವರಃ
॥ ೩೧ ॥

ತೇಷಾಮುದ್ದಾಮವೀರ್ಯಾಣಾಮಷ್ಟಾದಶ ಮಹಾರಥಾಃ ।
ಆಸನ್ನುದಾರಯಶಸಸ್ತೇಷಾಂ ನಾಮಾನಿ ಮೇ ಶೃಣು
॥ ೩೨ ॥

ಪ್ರದ್ಯುಮ್ನಶ್ಚಾನಿರುದ್ಧಶ್ಚ ದೀಪ್ತಿಮಾನ್ ಭಾನುರೇವ ಚ ।
ಸಾಂಬೋ ಮಧುರ್ಬೃಹದ್ಭಾನುಶ್ಚಿತ್ರಭಾನುರ್ವೃಕೋಽರುಣಃ
॥ ೩೩ ॥

ಪುಷ್ಕರೋ ವೇದಬಾಹುಶ್ಚ ಶ್ರುತದೇವಃ ಸುನಂದನಃ ।
ಚಿತ್ರಬಾಹುರ್ವಿರೂಪಶ್ಚ ಕವಿರ್ನ್ಯಗ್ರೋಧ ಏವ ಚ
॥ ೩೪ ॥

ಏತೇಷಾಮಪಿ ರಾಜೇಂದ್ರ ತನುಜಾನಾಂ ಮಧುದ್ವಿಷಃ ।
ಪ್ರದ್ಯುಮ್ನ ಆಸೀತ್ಪ್ರಥಮಃ ಪಿತೃವದ್ರುಕ್ಮಿಣೀಸುತಃ
॥ ೩೫ ॥

ಸ ರುಕ್ಮಿಣೋ ದುಹಿತರಮುಪಯೇಮೇ ಮಹಾರಥಃ ।
ತಸ್ಮಾತ್ಸುತೋಽನಿರುದ್ಧೋಽಭೂನ್ನಾಗಾಯುತಬಲಾನ್ವಿತಃ
॥ ೩೬ ॥

ಸ ಚಾಪಿ ರುಕ್ಮಿಣಃ ಪೌತ್ರೀಂ ದೌಹಿತ್ರೋ ಜಗೃಹೇ ತತಃ ।
ವಜ್ರಸ್ತಸ್ಯಾಭವದ್ಯಸ್ತು ಮೌಸಲಾದವಶೇಷಿತಃ
॥ ೩೭ ॥

ಪ್ರತಿಬಾಹುರಭೂತ್ತಸ್ಮಾತ್ ಸುಬಾಹುಸ್ತಸ್ಯ ಚಾತ್ಮಜಃ ।
ಸುಬಾಹೋಃ ಶಾಂತಸೇನೋಽಭೂಚ್ಛತಸೇನಸ್ತು ತತ್ಸುತಃ
॥ ೩೮ ॥

ನ ಹ್ಯೇತಸ್ಮಿನ್ಕುಲೇ ಜಾತಾ ಅಧನಾ ಅಬಹುಪ್ರಜಾಃ ।
ಅಲ್ಪಾಯುಷೋಽಲ್ಪವೀರ್ಯಾಶ್ಚ ಅಬ್ರಹ್ಮಣ್ಯಾಶ್ಚ ಜಜ್ಞಿರೇ
॥ ೩೯ ॥

ಯದುವಂಶಪ್ರಸೂತಾನಾಂ ಪುಂಸಾಂ ವಿಖ್ಯಾತಕರ್ಮಣಾಮ್ ।
ಸಂಖ್ಯಾ ನ ಶಕ್ಯತೇ ಕರ್ತುಮಪಿ ವರ್ಷಾಯುತೈರ್ನೃಪ
॥ ೪೦ ॥

ತಿಸ್ರಃ ಕೋಟ್ಯಃ ಸಹಸ್ರಾಣಾಮಷ್ಟಾಶೀತಿಶತಾನಿ ಚ ।
ಆಸನ್ ಯದುಕುಲಾಚಾರ್ಯಾಃ ಕುಮಾರಾಣಾಮಿತಿ ಶ್ರುತಮ್
॥ ೪೧ ॥

ಸಂಖ್ಯಾನಂ ಯಾದವಾನಾಂ ಕಃ ಕರಿಷ್ಯತಿ ಮಹಾತ್ಮನಾಮ್ ।
ಯತ್ರಾಯುತಾನಾಮಯುತಲಕ್ಷೇಣಾಸ್ತೇ ಸ ಆಹುಕಃ
॥ ೪೨ ॥

ದೇವಾಸುರಾಹವಹತಾ ದೈತೇಯಾ ಯೇ ಸುದಾರುಣಾಃ ।
ತೇ ಚೋತ್ಪನ್ನಾ ಮನುಷ್ಯೇಷು ಪ್ರಜಾ ದೃಪ್ತಾ ಬಬಾಧಿರೇ
॥ ೪೩ ॥

ಇವರಲ್ಲದೆ ಇತರ ಶ್ರೀಕೃಷ್ಣನ ಪತ್ನಿಯರಲ್ಲಿ ಪ್ರತಿಯೊಬ್ಬಳಲ್ಲಿಯೂ ಹತ್ತ-ಹತ್ತು ಪುತ್ರರು ಇದ್ದರು. ಇದೇನೋ ಆಶ್ಚರ್ಯದಸಂಗತಿಯಲ್ಲ. ಏಕೆಂದರೆ ಭಗವಂತನು ಸರ್ವಶಕ್ತನೂ, ಸತ್ಯಸಂಕಲ್ಪನೂ ಆಗಿರುವನು. ॥ ೩೧ ॥ ಭಗವಂತನ ಪರಮ ಪರಾಕ್ರಮಿ ಪುತ್ರರಲ್ಲಿ ಹದಿನೆಂಟು ಮಂದಿ ಮಹಾರಥರೇ ಆಗಿದ್ದರು. ಅವರ ಕೀರ್ತಿಯೂ ಇಡೀ ಜಗತ್ತಿನಲ್ಲಿ ಹರಡಿತ್ತು. ಅವರ ಹೆಸರು ಇಂತಿದೆ. ॥ ೩೨ ॥ ಪ್ರದ್ಯುಮ್ನ, ಅನಿರುದ್ಧ, ದೀಪ್ತಿಮಂತ, ಭಾನು, ಸಾಂಬ, ಮಧು, ಬೃಹದ್ಭಾನು, ಚಿತ್ರಭಾನು, ವೃಕ, ಅರುಣ, ಪುಷ್ಕರ, ವೇದಬಾಹು, ಶ್ರುತದೇವ, ಸುನಂದನ, ಚಿತ್ರಬಾಹು, ವಿರೂಪ, ಕವಿ ಮತ್ತು ನ್ಯಗ್ರೋಧ. ॥ ೩೩-೩೪ ॥ ರಾಜೇಂದ್ರನೇ! ಭಗವಾನ್ ಶ್ರೀಕೃಷ್ಣನ ಈ ಪುತ್ರರಲ್ಲಿ ರುಕ್ಮಿಣಿನಂದನ ಪ್ರದ್ಯುಮ್ನನೇ ಸರ್ವಶ್ರೇಷ್ಠನಾಗಿದ್ದನು. ಅವನು ಸರ್ವಗುಣಗಳಲ್ಲಿ ತಂದೆಯಂತೆಯೇ ಇದ್ದನು. ॥ ೩೫ ॥ ಮಹಾರಥಿ ಪ್ರದ್ಯುಮ್ನನು ರುಕ್ಮಿಯ ಮಗಳೊಂದಿಗೆ ವಿವಾಹವಾಗಿದ್ದನು. ಆಕೆಯ ಗರ್ಭದಲ್ಲಿ ಹತ್ತು ಸಾವಿರ ಆನೆಗಳ ಬಲವುಳ್ಳ ಅನಿರುದ್ಧನು ಹುಟ್ಟಿದನು. ॥ ೩೬ ॥ ಅನಿರುದ್ಧನು ರುಕ್ಮಿಯ ಮೊಮ್ಮಗಳನ್ನು ವಿವಾಹವಾಗಿ ಅವಳಲ್ಲಿ ವಜ್ರನಾಭನೆಂಬ ಮಗನನ್ನು ಪಡೆದನು. ಬ್ರಾಹ್ಮಣರ ಶಾಪದಿಂದ ಯದುವಂಶವು ನಾಶವಾಗಿ ಹೋದ ಬಳಿಕ ಏಕಮಾತ್ರ ವಜ್ರನಾಭನು ಉಳಿದಿದ್ದನು. ॥ ೩೭ ॥

ವಜ್ರನಾಭನ ಪುತ್ರನು ಪ್ರತಿಬಾಹು, ಪ್ರತಿಬಾಹುವಿಗೆ ಸುಬಾಹು, ಸುಬಾಹುವಿಗೆ ಶಾಂತಸೇನ ಮತ್ತು ಶಾಂತಸೇನನಿಗೆ ಶತಸೇನ ಹುಟ್ಟಿದನು. ॥ ೩೮ ॥ ಪರೀಕ್ಷಿತನೇ! ಈ ವಂಶದಲ್ಲಿ ಸಂತಾನವಿಲ್ಲದವನೂ, ನಿರ್ಧನನೂ, ಅಲ್ಪಾಯುವೂ ಅಲ್ಪವೀರ್ಯನೂ ಯಾರೂ ಇರಲಿಲ್ಲ. ಅವರೆಲ್ಲರೂ ಬ್ರಾಹ್ಮಣ ಭಕ್ತರಾಗಿದ್ದರು. ॥ ೩೯ ॥ ಪರೀಕ್ಷಿತನೇ! ಯದುವಂಶದಲ್ಲಿ ಆಗಿಹೋದ ಇಂತಿಂತಹ ಯಶಸ್ವಿಗಳ, ಪರಾಕ್ರಮಿಗಳ ಗಣನೆಯು ಸಾವಿರಾರು ವರ್ಷಗಳಲ್ಲಿಯೂ ಮುಗಿಯಲಾರದು. ॥ ೪೦ ॥ ಯದುವಂಶದಲ್ಲಿ ಬಾಲಕರಿಗೆ ಕಲಿಸಲು ಮೂರು ಕೋಟಿ ಎಂಭತ್ತೆಂಟು ಲಕ್ಷ ಆಚಾರ್ಯರಿದ್ದರೆಂದು ನಾನು ಕೇಳಿದ್ದೆ. ॥ ೪೧ ॥ ಇಂತಹ ಸ್ಥಿತಿಯಲ್ಲಿ ಮಹಾತ್ಮರಾದ ಯದುವಂಶಿಯರ ಸಂಖ್ಯೆಯನ್ನಾದರೋ ಹೇಗೆ ಹೇಳಬಹುದಾಗಿದೆ. ಮಹಾರಾಜನಾದ ಉಗ್ರಸೇನನೊಡನೆ ಅಂದಾಜು ಒಂದು ನೀಲ (ಒಂದು ಅಂಕೆ ಬರೆದು ಹದಿಮೂರು ಸೊನ್ನೆ ಬರೆಯಬೇಕು.) ಸೈನಿಕರಿದ್ದರು. ॥ ೪೨ ॥

ಪರೀಕ್ಷಿತನೇ! ಹಿಂದೆ ನಡೆದ ದೇವಾಸುರರ ಸಂಗ್ರಾಮದಲ್ಲಿ ಅಸಂಖ್ಯಾತ ಭಯಂಕರ ಅಸುರರು ಅಸುನೀಗಿದರು. ಅವರೇ ಈಗ ಮನುಷ್ಯರಾಗಿ ಹುಟ್ಟಿ ಮಹಾಗರ್ವಿಷ್ಠರಾಗಿ ಜನರನ್ನು ಪೀಡಿಸತೊಡಗಿದರು. ॥ ೪೩ ॥ ಅವರನ್ನು ನಿಗ್ರಹಿಸುವ ಸಲುವಾಗಿ ಭಗವಂತನ

ತನ್ನಿಗ್ರಹಾಯ ಹರಿಣಾ ಪ್ರೋಕ್ತಾ ದೇವಾ ಯದೋಃ ಕುಲೇ ।
ಅವತೀರ್ಣಾಃ ಕುಲಶತಂ ತೇಷಾಮೇಕಾಧಿಕಂ ನೃಪ ॥ ೪೪ ॥

ತೇಷಾಂ ಪ್ರಮಾಣಂ ಭಗವಾನ್ ಪ್ರಭುತ್ವೇನಾಭವದ್ಧರಿಃ ।
ಯೇ ಚಾನುವರ್ತಿನಸ್ತಸ್ಯ ವವೃಧುಃ ಸರ್ವಯಾದವಾಃ ॥ ೪೫ ॥

ಶಯ್ಯಾಸನಾಟನಾಲಾಪಕ್ರೀಡಾಸ್ನಾನಾದಿಕರ್ಮಸು ।
ನ ವಿದುಃ ಸಂತಮಾತ್ಮಾನಂ ವೃಷ್ಣಯಃ ಕೃಷ್ಣಚೇತಸಃ ॥ ೪೬ ॥

ತೀರ್ಥಂ ಚಕ್ರೇ ನೃಪೋನಂ ಯದಜನಿ ಯದುಷು ಸ್ವಃಸರಿತ್ಪಾದಶೌಚಂ
ವಿದ್ವಿಟ್ಸ್ನಿಗ್ಧಾಃ ಸ್ವರೂಪಂ ಯಯುರಜಿತಪರಾ ಶ್ರೀರ್ಯದರ್ಥೇಽನ್ಯಯತ್ನಃ ।
ಯನ್ನಾಮಾಮಂಗಲಘ್ನಂ ಶ್ರುತಮಥ ಗದಿತಂ ಯತ್ಕೃತೋ ಗೋತ್ರಧರ್ಮಃ
ಕೃಷ್ಣಸ್ಯೈತನ್ನ ಚಿತ್ರಂ ಕ್ಷಿತಿಭರಹರಣಂ ಕಾಲಚಕ್ರಾಯುಧಸ್ಯ ॥ ೪೭ ॥

ಜಯತಿ ಜನನಿವಾಸೋ ದೇವಕೀಜನ್ಮವಾದೋ
ಯದುವರಪರ್ಷತ್ಸ್ವೈರ್ದೋರ್ಭಿರಸ್ಯನ್ನಧರ್ಮಮ್ ।
ಸ್ಥಿರಚರವೃಜಿನಘ್ನಃ ಸುಸ್ಮಿತಶ್ರೀಮುಖೇನ
ವ್ರಜಪುರವನಿತಾನಾಂ ವರ್ಧಯನ್ಕಾಮದೇವಮ್ ॥ ೪೮ ॥

ಆಜ್ಞೆಯಂತೆ ದೇವತೆಗಳೇ ಯದುವಂಶದಲ್ಲಿ ಅವತರಿಸಿದ್ದರು. ಪರೀಕ್ಷಿತನೇ! ಯದುವಂಶದಲ್ಲಿ ಒಳಭೇದಗಳಾಗಿ ಒಂದುನೂರ ಒಂದು ಕುಲಗಳಿದ್ದವು. ॥ ೪೪ ॥

ಅವರೆಲ್ಲರೂ ಭಗವಾನ್ ಶ್ರೀಕೃಷ್ಣನನ್ನೇ ತಮ್ಮ ಸ್ವಾಮಿಯೆಂದೂ, ಆದರ್ಶನೆಂದೂ ಭಾವಿಸಿದ್ದರು. ಅವನ ಅನುಯಾಯಿಗಳಾದ ಯಾದವರಿಗೆ ಎಲ್ಲ ವಿಧದಿಂದ ಉನ್ನತಿಯಾಯಿತು. ॥ ೪೫ ॥ ಯದುವಂಶೀಯರ ಚಿತ್ತವು ಮಲಗುವಾಗ, ಕುಳಿತಿರುವಾಗ, ಅಡ್ಡಾಡುವಾಗ, ಆಟವಾಡುವಾಗ, ಮಾತನಾಡುವಾಗ, ಸ್ನಾನಮಾಡುವಾಗ ಮೊದಲಾದ ಎಲ್ಲ ಕರ್ಮಗಳಲ್ಲಿ ಭಗವಾನ್ ಶ್ರೀಕೃಷ್ಣನಲ್ಲೇ ನೆಲೆಸಿದ್ದು ತಮ್ಮ ಶರೀರದ ಪ್ರಜ್ಞೆಯು ಇರುತ್ತಿರಲಿಲ್ಲ, ತಮ್ಮ ಶರೀರವು ಏನುಮಾಡುತ್ತಿದೆ ಎಂಬುದೂ ಅವರಿಗೆ ಅರಿವಿರಲಿಲ್ಲ. ಶರೀರದ ಎಲ್ಲ ಕ್ರಿಯೆಗಳು ಯಂತ್ರದಂತೆ ತಾನೇ-ತಾನಾಗಿ ನಡೆಯುತ್ತಿದ್ದವು. ॥ ೪೬ ॥

ಪರೀಕ್ಷಿತನೇ! ವಿಷ್ಣುಪಾದೋದ್ಭವೆಯಾದ ಗಂಗಾದೇವಿಯು ವಿಶ್ವದಲ್ಲೇ ಪವಿತ್ರತಮಳೆಂದು ಪ್ರಸಿದ್ಧಿಯನ್ನು ಹೊಂದಿದ್ದರೂ ಯಾದವಕುಲದಲ್ಲಿ ಶ್ರೀಕೃಷ್ಣನ ಕೀರ್ತಿರೂಪವಾದ ತೀರ್ಥವು ಉದಯಿಸಿದಾಗ ದೇವಗಂಗೆಯ ಮಹಿಮೆಯು ಕಡಿಮೆಯಾಯಿತು. ಶತ್ರು-ಮಿತ್ರರೆಂಬ ಭೇದವೇ ಇಲ್ಲದೆ ಪರಮಪುರುಷನಾದ ಶ್ರೀಕೃಷ್ಣನನ್ನು ಭಜಿಸಿದವರೆಲ್ಲರೂ ಪರಮಪದವನ್ನು ಪಡೆದರು. ಯಾವಳ ಕೃಪಾಕಟಾಕ್ಷವನ್ನು ಸಂಪಾದಿಸಲು ಬ್ರಹ್ಮನೇ ಮೊದಲಾದ ದೇವತೆಗಳು ಯಜ್ಞಮಾಡುವರೋ, ಆಕೆಯೇ ಭಗವಂತನ ಸೇವೆಯಲ್ಲಿ ನಿತ್ಯ-ನಿರಂತರವಾಗಿ ತೊಡಗಿರುವಳು. ಭಗವಂತನ ನಾಮವನ್ನು ಒಂದು ಬಾರಿ ಕೇಳುವುದರಿಂದ, ಉಚ್ಚರಿಸುವುದರಿಂದಲೇ ಸಮಸ್ತ ಅಮಂಗಳಗಳು ನಾಶವಾಗಿ ಹೋಗುತ್ತವೆ. ಋಷಿಗಳ ವಂಶಜರಲ್ಲಿ ಪ್ರಚಲಿತವಾಗಿರುವ ಧರ್ಮಗಳೆಲ್ಲವುಗಳ ಸಂಸ್ಥಾಪಕನು ಭಗವಾನ್ ಶ್ರೀಕೃಷ್ಣನೇ ಆಗಿರುವನು. ಅವನು ತನ್ನ ಕೈಯಲ್ಲಿ ಕಾಲಸ್ವರೂಪವಾದ ಚಕ್ರವನ್ನು ಧರಿಸಿರುವನು. ಪರೀಕ್ಷಿತನೇ! ಇಂತಹ ಸ್ಥಿತಿಯಲ್ಲಿ ಅವನು ಭೂಭಾರ ಹರಣ ಮಾಡಿದುದು ಏನು ತಾನೇ ದೊಡ್ಡ ಮಾತು ? ॥ ೪೭ ॥ ಭಗವಾನ್ ಶ್ರೀಕೃಷ್ಣನೇ ಸಮಸ್ತ ಜೀವರ ಆಶ್ರಯಸ್ಥಾನನಾಗಿದ್ದಾನೆ. ಅವನು ಸದಾ-ಸರ್ವದಾ ಸರ್ವತ್ರ- ವ್ಯಾಪ್ತನಾಗಿದ್ದರೂ ಹೆಸರಿಗಷ್ಟೇ ದೇವಕಿಯ ಗರ್ಭದಲ್ಲಿ ಜನಿಸಿದನು. ಯದುವಂಶದ ವೀರರು ಪಾರ್ಷದರಂತೆ ಅವನ ಸೇವೆ ಮಾಡುತ್ತಾ ಇರುತ್ತಾರೆ. ಅವನು ತನ್ನ ಭುಜಬಲದಿಂದ ಅಧರ್ಮವನ್ನು ನಾಶಗೊಳಿಸಿದನು. ಪರೀಕ್ಷಿತನೇ! ಭಗವಂತನು ಸ್ವಭಾವತಃ ಚರಾಚರ ಜಗತ್ತಿನ ದುಃಖವನ್ನು ಕಳೆಯುತ್ತಿರುವನು. ಅವನ ಮಂದ ಮಧುರವಾದ ಮುಗುಳ್ನಗೆಯಿಂದ ಕೂಡಿದ ಸುಂದರ ಮುಖಾರವಿಂದದಿಂದ ವ್ರಜಸ್ತ್ರೀಯರ ಮತ್ತು ಪುರಸ್ತ್ರೀಯರ ಹೃದಯದಲ್ಲಿ ಪ್ರೇಮಸಂಚಾರವಾಗುತ್ತಿತ್ತು. ವಾಸ್ತವವಾಗಿ ಸಮಸ್ತ ಜಗತ್ತಿನಲ್ಲಿ ಅವನೇ ವಿಜಯಿಯಾಗಿದ್ದಾನೆ. ಅವನಿಗೆ ಜಯವಾಗಲಿ! ಜಯವಾಗಲಿ! ॥ ೪೮ ॥

ಇತ್ಥಂ ಪರಸ್ಯ ನಿಜವರ್ತ್ಮರಿರಕ್ಷಯಾಽಽತ್ತ-
ಲೀಲಾತನೋಸ್ತದನುರೂಪವಿಡಂಬನಾನಿ ।
ಕರ್ಮಾಣಿ ಕರ್ಮಕಷಣಾನಿ ಯದೂತ್ತಮಸ್ಯ
ಶ್ರೂಯಾದಮುಷ್ಯ ಪದಯೋರನುವೃತ್ತಿಮಿಚ್ಛನ್ ॥ ೪೯ ॥

ಪರೀಕ್ಷಿತನೇ! ಪ್ರಕೃತಿಗೆ ಅತೀತನಾದ ಪರಮಾತ್ಮನು ತಾನೇ ಸ್ಥಾಪಿಸಿದ ಧರ್ಮಮರ್ಯಾದೆಯ ರಕ್ಷಣೆಗಾಗಿ ದಿವ್ಯ ಲೀಲಾ ಶರೀರವನ್ನು ಗ್ರಹಣಮಾಡಿ, ಅದಕ್ಕನುರೂಪವಾಗಿ ಅನೇಕ ಅದ್ಭುತ ಚರಿತ್ರಗಳನ್ನು ಅಭಿನಯಿಸಿದನು. ಅವನ ಒಂದೊಂದು ಕರ್ಮವನ್ನು ಸ್ಮರಿಸುವವರ ಕರ್ಮಬಂಧನಗಳು ಕಡಿದುಹೋಗುತ್ತವೆ. ಯದುವಂಶ ಶಿರೋಮಣಿ ಭಗವಾನ್ ಶ್ರೀಕೃಷ್ಣನ ಚರಣಕಮಲಗಳ ಸೇವೆಯ ಅಧಿಕಾರ ಪಡೆಯಬೇಕಿದ್ದರೆ ಅವನ ಲೀಲೆಗಳನ್ನೇ ಶ್ರವಣಿಸಬೇಕು. ॥ ೪೯ ॥ ಪರೀಕ್ಷಿತನೇ! ಮನುಷ್ಯನು ಪ್ರತಿಕ್ಷಣವೂ ಭಗವಾನ್ ಶ್ರೀಕೃಷ್ಣನ ಮನೋಹರವಾದ ಲೀಲಾಕಥೆಗಳನ್ನು ಹೆಚ್ಚೆಚ್ಚು ಶ್ರವಣ, ಕೀರ್ತನೆ, ಚಿಂತನೆ ಮಾಡತೊಡಗಿದಾಗ ಅವನ ಈ ಭಕ್ತಿಯೇ ಅವನನ್ನು ಭಗವಂತನ ಪರಮಧಾಮಕ್ಕೆ ಕೊಂಡೊಯ್ಯುತ್ತದೆ. ಕಾಲನ ಗತಿಯನ್ನು ಮೀರುವುದು ಬಹಳ ಕಷ್ಟವಾಗಿದ್ದರೂ ಭಗವಂತನ ಧಾಮದಲ್ಲಿ ಕಾಲನ ಪ್ರಭಾವ ನಡೆಯುವುದಿಲ್ಲ, ಅದು ಅಲ್ಲಿಗೆ ತಲುಪಲಾರದು. ಅದೇ ಧಾಮದ ಪ್ರಾಪ್ತಿಗಾಗಿ ಅನೇಕ ಸಾಮ್ರಾಟರು ತಮ್ಮ ರಾಜ್ಯಲಕ್ಷ್ಮಿಯನ್ನು ತೊರೆದು ತಪಸ್ಸಿಗಾಗಿ ಅರಣ್ಯಕ್ಕೆ ಹೋದರು. ಅದಕ್ಕಾಗಿ ಮನುಷ್ಯನು ಅವನ ಲೀಲಾ ಕಥೆಗಳನ್ನು ಶ್ರವಣಿಸುತ್ತಲೇ ಇರಬೇಕು. ॥ ೫೦ ॥

ಮರ್ತ್ಯಸ್ತಯಾನುಸವಮೇಧಿತಯಾ ಮುಕುಂದ-
ಶ್ರೀಮತ್ಕಥಾಶ್ರವಣಕೀರ್ತನಚಿಂತಯೈತಿ ।
ತದ್ಧಾಮ ದುಸ್ತರಕೃತಾಂತಜವಾಪವರ್ಗಂ
ಗ್ರಾಮಾದ್ವನಂ ಕ್ಷಿತಿಭುಜೋಽಪಿ ಯಯುರ್ಯದರ್ಥಾಃ ॥ ೫೦ ॥

ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯೦ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಶ್ರೀಕೃಷ್ಣಚರಿತಾನುವರ್ಣನಂ ನಾಮ ನವತಿತಮೋಽಧ್ಯಾಯಃ ॥ ೯೦ ॥

ಹತ್ತನೆಯ ಸ್ಕಂಧದ ಉತ್ತರಾರ್ಧವು ಸಂಪೂರ್ಣವಾಯಿತು.

## ದಶಮ ಸ್ಕಂಧವು ಮುಗಿಯಿತು

ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್



॥ ಓಂ ನಮೋ ಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಏಕಾದಶಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಯದುವಂಶಕ್ಕೆ ಋಷಿಗಳ ಶಾಪ

ಶ್ರೀಬಾದರಾಯಣಿರುವಾಚ

ಕೃತ್ವಾ ದೈತ್ಯವಧಂ ಕೃಷ್ಣಃ ಸರಾಮೋ ಯದುಭಿರ್ವೃತಃ ।
ಭುವೋಽವತಾರಯದ್ಭಾರಂ ಜವಿಷ್ಠಂ ಜನಯನ್ಕಲಿಮ್ ॥ ೧ ॥

ಯೇ ಕೋಪಿತಾಃ ಸುಬಹು ಪಾಂಡುಸುತಾಃ ಸಪತ್ನೈ-
ರ್ದುರ್ದ್ಯೂತಹೇಲನಕಚಗ್ರಹಣಾದಿಭಿಸ್ತಾನ್ ।
ಕೃತ್ವಾ ನಿಮಿತ್ತಮಿತರೇತರತಃ ಸಮೇತಾನ್
ಹತ್ವಾ ನೃಪಾನ್ ನಿರಹರತ್ಕ್ಷಿತಿಭಾರಮೀಶಃ ॥ ೨ ॥

ಭೂಭಾರರಾಜಪೃತನಾ ಯದುಭಿರ್ನಿರಸ್ಯ
ಗುಪ್ತೈಃ ಸ್ವಬಾಹುಭಿರಚಿಂತಯದಪ್ರಮೇಯಃ ।
ಮನ್ಯೇಽವನೇರ್ನನು ಗತೋಽಪ್ಯಗತಂ ಹಿ ಭಾರಂ
ಯದ್ಯಾದವಂ ಕುಲಮಹೋ ಅವಿಷಹ್ಯಮಾಸ್ತೇ ॥ ೩ ॥

ನೈವಾನ್ಯತಃ ಪರಿಭವೋಽಸ್ಯ ಭವೇತ್ ಕಥಂಚಿನ್
ಮತ್ಸಂಶ್ರಯಸ್ಯ ವಿಭವೋನ್ನಹನಸ್ಯ ನಿತ್ಯಮ್ ।
ಅಂತಃಕಲಿಂ ಯದುಕುಲಸ್ಯ ವಿಧಾಯ ವೇಣು-
ಸ್ತಂಬಸ್ಯ ವಹ್ನಿಮಿವ ಶಾಂತಿಮುಪೈಮಿ ಧಾಮ ॥ ೪ ॥

ಏವಂ ವ್ಯವಸಿತೋ ರಾಜನ್ ಸತ್ಯಸಂಕಲ್ಪ ಈಶ್ವರಃ ।
ಶಾಪವ್ಯಾಜೇನ ವಿಪ್ರಾಣಾಂ ಸಂಜಹ್ರೇ ಸ್ವಕುಲಂ ವಿಭುಃ ॥ ೫ ॥

ವ್ಯಾಸನಂದನ ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಬಲರಾಮ ಹಾಗೂ ಬೇರೆ ಯಾದವರೊಂದಿಗೆ ಸೇರಿ ಅನೇಕ ದೈತ್ಯರನ್ನು ಸಂಹರಿಸಿ, ಕೌರವ ಪಾಂಡವರಲ್ಲಿ ಭಾರೀ ಕಲಹವನ್ನು ಉಂಟುಮಾಡಿ ಭೂಭಾರವನ್ನು ಇಳಿಸಿದನು. ॥ ೧ ॥ ಪಾಂಡವರನ್ನು ಅವರ ಶತ್ರುಗಳಾದ ಕೌರವರು ಕಪಟದ್ಯೂತದಿಂದ ಸೋಲಿಸಿ, ದ್ರೌಪದಿಯ ಮಾನ ಭಂಗವೇ ಮೊದಲಾದ ಅತ್ಯಾಚಾರಗಳಿಂದ ಕೆಣಕಿದರು. ಅಂತಹ ಪಾಂಡವರನ್ನು ನಿಮಿತ್ತವಾಗಿಸಿ ಭಗವಾನ್ ಶ್ರೀಕೃಷ್ಣನು ಕೌರವ ಪಾಂಡವರ ಎರಡೂ ಪಕ್ಷದಲ್ಲಿ ಸೇರಿದ ರಾಜರನ್ನು ಪರಸ್ಪರ ಕೊಲ್ಲಿಸಿದನು. ಈ ವಿಧವಾಗಿ ಅವನು ಪೃಥ್ವಿಯ ಭಾರವನ್ನು ಇಳಿಸಿದನು. ॥ ೨ ॥ ಅಪ್ರಮೇಯಸ್ವರೂಪೀ ಭಗವಾನ್ ಶ್ರೀಕೃಷ್ಣನು ತನ್ನ ಬಾಹುಬಲದಿಂದ ರಕ್ಷಿತ ಯಾದವರ ಮೂಲಕ ಕಂಟಕಪ್ರಾಯ ರಾದ ರಾಜರನ್ನು ಅವರ ಸೇನೆಯನ್ನೂ ವಿನಾಶಗೊಳಿಸಿದನು. ಈಗ ಲಾದರೋ ಯಾದವರು ಈ ಭೂಮಿಯಲ್ಲಿ ಇರುವ ಬೇರೆ ಯಾರಿಂದಲೂ ಜಯಿಸಲಾರರು. ಇಂತಹ ಪ್ರಬಲ ಪರಾಕ್ರಮಿ ಯಾದವರು ಭೂಮಂಡಲದಲ್ಲಿ ಜೀವಿಸಿರುವ ತನಕ, ಇಷ್ಟು ಭೂಭಾರ ತಗ್ಗಿದರೂ ಇನ್ನೂ ಪೃಥ್ವಿಯ ಭಾರ ಕಡಿಮೆಯಾಗಿಲ್ಲ ಎಂದೇ ನಾನು ತಿಳಿಯುತ್ತೇನೆ; ಹೀಗೆ ಯೋಚಿಸಿದನು. ॥ ೩ ॥ ನನ್ನ ಆಶ್ರಯದಲ್ಲಿರುವುದರಿಂದ ಈ ಯಾದವರನ್ನು ಬೇರೆ ಯಾರೂ ಪರಾಭವಗೊಳಿಸಲಾರರು. ಇವರು ಪೂರ್ಣವಾಗಿ ಉಚ್ಛೃಂಖಲರಾಗುತ್ತಿದ್ದಾರೆ. ಅಪಾರ ಸಂಪತ್ತು – ವೈಭವದಿಂದಾಗಿ ಇವರು ಯಾರ ಶಾಸನವನ್ನೂ ಲೆಕ್ಕಿಸರು. ಆದ್ದರಿಂದ ಬಿದಿರುಮೇಳೆ ಒಂದಕ್ಕೊಂದರ ಸಂಘರ್ಷದಿಂದ ಉಂಟಾದ ಬೆಂಕಿಯಿಂದ ಬಿದಿರುವನವನ್ನೇ ಸುಡುವಂತೆ ಈ ಯಾದವರಲ್ಲಿ ಪರಸ್ಪರ ಜಗಳ ಉಂಟುಮಾಡಿ ನಾನು ನನ್ನ ಶಾಂತಸ್ವರೂಪ ಪರಮಧಾಮಕ್ಕೆ ತೆರಳುವೆನು. ॥ ೪ ॥ ಎಲೈ ರಾಜನೇ! ಸತ್ಯಸಂಕಲ್ಪ ಸರ್ವ ಸಮರ್ಥ ಭಗವಂತನು ಹೀಗೆ ನಿಶ್ಚಯಿಸಿ, ಆ ಸರ್ವವ್ಯಾಪೀ ಪರಮಾತ್ಮನು ಬ್ರಾಹ್ಮಣರ ಶಾಪವನ್ನು ನಿಮಿತ್ತವಾಗಿಸಿ ತನ್ನ ಕುಲದ ಸಂಹಾರ ಮಾಡಿಸಿದನು. ॥ ೫ ॥

ಸ್ವಮೂರ್ತ್ಯಾ ಲೋಕಲಾವಣ್ಯನಿರ್ಮುಕ್ತ್ಯಾ ಲೋಚನಂ ನೃಣಾಮ್ ।
ಗೀರ್ಭಿಸ್ತಾಃ ಸ್ಮರತಾಂ ಚಿತ್ತಂ ಪದೈಸ್ತಾನೀಕ್ಷತಾಂ ಕ್ರಿಯಾಃ ॥ ೬ ॥

ಆಚ್ಛಿದ್ಯ ಕೀರ್ತಿಂ ಸುಶ್ಲೋಕಾಂ ವಿತತ್ಯ ಹ್ಯಂಜಸಾನು ಕೌ ।
ತಮೋಽನಯಾ ತರಿಷ್ಯಂತೀತ್ಯಗಾತ್ಸ್ವಂ ಪದಮೀಶ್ವರಃ ॥ ೭ ॥

ಭಗವಾನ್ ಶ್ರೀಕೃಷ್ಣನು ಅಖಂಡ ತ್ರಿಲೋಕಕ್ಕೆ ಸೌಂದರ್ಯ, ಮಾಧುರ್ಯವನ್ನು ಕರುಣಿಸುವವನು. ಅವನು ಸೌಂದರ್ಯ ಮಾಧುರ್ಯದ ನಿಧಿಯಾಗಿದ್ದಾನೆ. ಭಗವಂತನ ಶ್ಯಾಮಸುಂದರ ಸ್ವರೂಪವು ಯಾರೇ ಆಗಲೀ ಒಮ್ಮೆ ನೋಡಿದರೆ ಸಾಕು ಅವರ ಕಣ್ಣುಗಳು ಆ ಭಗವಂತನಲ್ಲಿ ಎಂದೆಂದಿಗೂ ನೆಟ್ಟುಹೋಗುವಷ್ಟು ಸುಂದರ, ಮನೋಹರವಾಗಿತ್ತು. ಅವನ ವಾಣಿಯು ಚಿಂತಿಸುವವರ ಚಿತ್ತವು ಮತ್ತೆ ಭಗವಂತನಲ್ಲೇ ಸ್ಥಿರವಾಗಿ ತೊಡಗುವಷ್ಟು ಮಧುರವಾಗಿತ್ತು. ಅವನ ಸುಮಧುರ ಮುರಳಿಯಗಾನ, ತ್ರಿಭಂಗಿ ಲಲಿತ ಭಂಗಿಯು, ಎಲ್ಲ ಪ್ರಾಣಿಗಳು ತಮ್ಮ ಕ್ರಿಯೆಗಳನ್ನು ಮರೆತು, ಕೆಲಸ-ಕಾರ್ಯಗಳನ್ನು ಬಿಟ್ಟು ಅವನೆಡೆಗೆ ಸೆಳೆಯಲ್ಪಡುತ್ತಿದ್ದವು. (ಈ ಪ್ರಕಾರ ಕಣ್ಣುಗಳನ್ನು ಆಕರ್ಷಿಸಿ ಅವರ ಸ್ಥೂಲಶರೀರವನ್ನು, ಚಿತ್ತವನ್ನು ಸೆಳೆದು ಅವರ ಸೂಕ್ಷ್ಮ ಶರೀರವನ್ನು, ಕ್ರಿಯೆಗಳನ್ನು ಆಕೃಷ್ಟವಾಗಿಸಿ, ಕರ್ಮವಾಸನೆಯ ಬೀಜವನ್ನೇ ನಾಶಗೊಳಿಸಿ ಅವರ ಕಾರಣಶರೀರವನ್ನು, ಹೀಗೆ ಎಲ್ಲವನ್ನೂ ತನ್ನತ್ತ ಸೆಳೆದುಕೊಂಡು ಜೀವಿಗಳನ್ನು ಪೂರ್ಣವಾಗಿ ಕರ್ಮಬಂಧನಗಳಿಂದ ಮುಕ್ತವಾಗಿಸುತ್ತಿದ್ದನು.) ಭಗವಂತನು ಈ ಪ್ರಕಾರ ತನ್ನ ಕೀರ್ತಿಯನ್ನು ಭೂಮಂಡಲದಲ್ಲಿ ವಿಸ್ತರಿಸಿದನು. ಆ ಲೀಲೆಗಳನ್ನು ಹಾಡಿ ಕೇಳಿ ಮನುಷ್ಯರು ಅಯಾಸವಿಲ್ಲದೆ ಈ ಅಜ್ಞಾನಾಂಧಕಾರವನ್ನು ದಾಟಿ ಹೋಗುವರು.* ಪರಮ ದಯಾಳು ಭಗವಾನ್ ಶ್ರೀಕೃಷ್ಣನು ಈ ರೀತಿ ತನ್ನ ಪವಿತ್ರ ಯಶಸ್ಸನ್ನು ವಿಸ್ತರಿಸಿ ತನ್ನ ಪರಮಧಾಮಕ್ಕೆ ತೆರಳಿದನು. ॥ ೬-೭ ॥

ರಾಜೋವಾಚ

ಬ್ರಹ್ಮಣ್ಯಾನಾಂ ವದಾನ್ಯಾನಾಂ ನಿತ್ಯಂ ವೃದ್ಧೋಪಸೇವಿನಾಮ್ ।
ವಿಪ್ರಶಾಪಃ ಕಥಮಭೂದ್ವೃಷ್ಣೀನಾಂ ಕೃಷ್ಣಚೇತಸಾಮ್ ॥ ೮ ॥

ಯನ್ನಿಮಿತ್ತಃ ಸ ವೈ ಶಾಪೋ ಯಾದೃಶೋ ದ್ವಿಜಸತ್ತಮ ।
ಕಥಾಮೇಕಾತ್ಮನಾಂ ಭೇದ ಏತತ್ಸರ್ವಂ ವದಸ್ವ ಮೇ ॥ ೯ ॥

**ರಾಜಾ ಪರೀಕ್ಷಿತನು ಕೇಳಿದನು** – ಈ ಯದುವಂಶೀಯರಾದರೋ ಬ್ರಾಹ್ಮಣಭಕ್ತರಾಗಿದ್ದರು. ಉದಾರರಾಗಿದ್ದು ಗುರುಹಿರಿಯರನ್ನು ಆದರಪೂರ್ವಕವಾಗಿ ಸೇವಿಸುವವರಾಗಿದ್ದರು. ಅವರ ಚಿತ್ತ ಸದಾಕಾಲ ಶ್ರೀಕೃಷ್ಣನಲ್ಲೇ ತೊಡಗಿರುತ್ತಿತ್ತು. ಅವರಿಗೆ ಬ್ರಾಹ್ಮಣರ ಶಾಪ ಹೇಗೆ ಉಂಟಾಯಿತು ? ಯಾವ ಕಾರಣದಿಂದ ಶಾಪ ಒದಗಿತು ? ಆ ಶಾಪ ಏನಾಗಿತ್ತು ? ಎಲ್ಲ ಯಾದವರು ಪರಸ್ಪರ ಪ್ರೇಮದಿಂದಲೇ ಕೂಡಿಕೊಂಡಿದ್ದರೂ ಅವರಲ್ಲಿ ಇಂತಹ ಭೇದಭಾವ ಏಕೆ ಉಂಟಾಯಿತು ? ವಿರಸ ಹೇಗೆ ಉಂಟಾಯಿತು ? ಇದೆಲ್ಲವನ್ನು ತಾವು ನನಗೆ ತಿಳಿಸುವ ಕೃಪೆಮಾಡಬೇಕು. ॥ ೮-೯ ॥

ಶ್ರೀಶುಕ ಉವಾಚ

ಬಿಭ್ರದ್ವಪುಃ ಸಕಲಸುಂದರಸನ್ನಿವೇಶಂ
ಕರ್ಮಾಚರನ್ ಭುವಿ ಸುಮಂಗಲಮಾಪ್ತಕಾಮಃ ।
ಆಸ್ಥಾಯ ಧಾಮ ರಮಮಾಣ ಉದಾರಕೀರ್ತಿಃ
ಸಂಹರ್ತುಮೈಚ್ಛತ ಕುಲಂ ಸ್ಥಿತಕೃತ್ಯಶೇಷಃ ॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಭಗವಾನ್ ಶ್ರೀಕೃಷ್ಣನ ಶ್ರೀವಿಗ್ರಹದಲ್ಲಿ ಸಮಸ್ತ ಸೌಂದರ್ಯರೂಪರಾಶಿಯು ರಾರಾಜಿಸುತ್ತಿತ್ತು. ಆ ಪ್ರಭುವು ಈ ಭೂಮಂಡಲದಲ್ಲಿ ಅನೇಕ ಮಂಗಲಮಯ ಶ್ರೇಯಸ್ಕರವಾದ ಕರ್ಮಗಳನ್ನು ಆಚರಿಸಿದನು.

* ಭಗವಂತನು ಎಲ್ಲ ಪ್ರಾಣಿಗಳ ನಿಜವಾದ ಸುಹೃದ್ ಆಗಿದ್ದಾನೆ. ಜೀವಿಗಳ ಉದ್ಧಾರಕ್ಕಾಗಿಯೇ ಅವನು ಅವತಾರ ಲೀಲೆಗಳನ್ನು ನಡೆಸುತ್ತಾನೆ. ಮನುಷ್ಯರು ಭಗವಂತನ ಆ ಲೀಲೆಗಳನ್ನು ಮನನ-ಚಿಂತನ-ಸ್ಮರಣಗೈದು ನಿಜವಾಗಿ ಈ ಮೃತ್ಯುಸಂಸಾರ ಸಾಗರದಿಂದ ದಾಟಿ ಹೋಗುವರು. ಇದರಲ್ಲಿಯೂ ಭಗವಂತನ ಅಸೀಮ ಕೃಪೆಯೇ ತುಂಬಿದೆ. ಆದ್ದರಿಂದ ಭಗವಂತನ ನಾಮದ ಜಪ, ಸ್ವರೂಪದ ಚಿಂತನೆ, ಲೀಲೆಗಳ ಸ್ಮರಣೆ ಮಾಡುವ ಅಭ್ಯಾಸ ಹೆಚ್ಚಿಸಿಕೊಳ್ಳಬೇಕು. ಭಗವಂತನು ಭಗವದ್ಗೀತೆಯಲ್ಲಿ ಹೀಗೆ ಹೇಳಿರುವನು –
**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ । ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥** (ಭಗವದ್ಗೀತೆ – ೧೦/೯)
ನಿರಂತರವಾಗಿ ನನ್ನಲ್ಲಿ ಮನಸ್ಸನ್ನು ತೊಡಗಿಸುವವರು ಮತ್ತು ನನ್ನಲ್ಲೇ ಪ್ರಾಣಗಳನ್ನು ಅರ್ಪಿಸುವ ಭಕ್ತಜನರು, ನನ್ನ ಭಕ್ತಿಯ ಚರ್ಚೆಯ ಮೂಲಕ ತಮ್ಮ ತಮ್ಮಲ್ಲಿ ನನ್ನ ಪ್ರಭಾವವನ್ನು ತಿಳಿಸಿಕೊಡುತ್ತ ಹಾಗೂ ಗುಣ ಮತ್ತು ಪ್ರಭಾವಸಹಿತ ನನ್ನ ಕಥೆಗಳನ್ನು ಹೇಳಿಕೊಳ್ಳುತ್ತಲೇ ನಿರಂತರ ಸಂತುಷ್ಟರಾಗುತ್ತಾರೆ ಮತ್ತು ವಾಸುದೇವನಾದ ನನ್ನಲ್ಲಿಯೇ ರಮಿಸುತ್ತಾರೆ.

ಕರ್ಮಾಣಿ ಪುಣ್ಯನಿವಹಾನಿ ಸುಮಂಗಲಾನಿ
ಗಾಯಜ್ಜಗತ್ಕಲಿಮಲಾಪಹರಾಣಿ ಕೃತ್ವಾ ।
ಕಾಲಾತ್ಮನಾ ನಿವಸತಾ ಯದುದೇವಗೇಹೇ
ಪಿಂಡಾರಕಂ ಸಮಗಮನ್ ಮುನಯೋ ನಿಸೃಷ್ಟಾಃ ॥ ೧೧ ॥

ವಿಶ್ವಾಮಿತ್ರೋಽಸಿತಃ ಕಣ್ವೋ ದುರ್ವಾಸಾ ಭೃಗುರಂಗಿರಾಃ ।
ಕಶ್ಯಪೋ ವಾಮದೇವೋಽತ್ರಿರ್ವಸಿಷ್ಠೋ ನಾರದಾದಯಃ ॥ ೧೨ ॥

ಕ್ರೀಡಂತಸ್ತಾನುಪವ್ರಜ್ಯ ಕುಮಾರಾ ಯದುನಂದನಾಃ ।
ಉಪಸಂಗೃಹ್ಯ ಪಪ್ರಚ್ಛುರವಿನೀತಾ ವಿನೀತವತ್ ॥ ೧೩ ॥

ತೇ ವೇಷಯಿತ್ವಾ ಸ್ತ್ರೀವೇಷೈಃ ಸಾಂಬಂ ಜಾಂಬವತೀಸುತಮ್ ।
ಏಷಾ ಪೃಚ್ಛತಿ ವೋ ವಿಪ್ರಾ ಅಂತರ್ವತ್ನ್ಯಸಿತೇಕ್ಷಣಾ ॥ ೧೪ ॥

ಪ್ರಷ್ಟುಂ ವಿಲಜ್ಜತೀ ಸಾಕ್ಷಾತ್ ಪ್ರಬ್ರೂತಾಮೋಘದರ್ಶನಾಃ ।
ಪ್ರಸೋಷ್ಯಂತೀ ಪುತ್ರಕಾಮಾ ಕಿಂಸ್ವಿತ್ ಸಂಜನಯಿಷ್ಯತಿ ॥ ೧೫ ॥

ಏವಂ ಪ್ರಲಬ್ಧಾ ಮುನಯಸ್ತಾನೂಚುಃ ಕುಪಿತಾ ನೃಪ ।
ಜನಯಿಷ್ಯತಿ ವೋ ಮಂದಾ ಮುಸಲಂ ಕುಲನಾಶನಮ್ ॥ ೧೬ ॥

ತಚ್ಛ್ರುತ್ವಾ ತೇಽತಿಸಂತ್ರಸ್ತಾ ವಿಮುಚ್ಯ ಸಹಸೋದರಮ್ ।
ಸಾಂಬಸ್ಯ ದದೃಶುಸ್ತಸ್ಮಿನ್ ಮುಸಲಂ ಖಲ್ವಯಸ್ಮಯಮ್ ॥ ೧೭ ॥

ಕಿಂ ಕೃತಂ ಮಂದಭಾಗ್ಯೈರ್ನಃ ಕಿಂ ವದಿಷ್ಯಂತಿ ನೋ ಜನಾಃ ।
ಇತಿ ವಿಹ್ವಲಿತಾ ಗೇಹಾನಾದಾಯ ಮುಸಲಂ ಯಯುಃ ॥ ೧೮ ॥

ತಚ್ಚೋಪನೀಯ ಸದಸಿ ಪರಿಮ್ಲಾನಮುಖಶ್ರಿಯಃ ।
ರಾಜ್ಞ ಆವೇದಯಾಂಚಕ್ರುಃ ಸರ್ವಯಾದವಸನ್ನಿಧೌ ॥ ೧೯ ॥

ಅವನು ಸ್ವತಃ ಪೂರ್ಣಕಾಮನಾಗಿದ್ದನು. ತನ್ನ ಪರಮಧಾಮದಲ್ಲಿ ಇದ್ದುಕೊಂಡು ತನ್ನಲ್ಲೇ ರಮಮಾಣನಾದ ಉದಾರಕೀರ್ತಿಯುಳ್ಳ ಪ್ರಭುವು ತನ್ನ ಕುಲದ ಸಂಹಾರಮಾಡಲು ಸಂಕಲ್ಪಿಸಿದನು. ಭೂಭಾರ ಹರಣದಲ್ಲಿ ಇದೊಂದೇ ಕಾರ್ಯ ಉಳಿದಿತ್ತು ಎಂದು ಯೋಚಿಸಿದನು. ॥ ೧೦ ॥ ಭಗವಾನ್ ಶ್ರೀಕೃಷ್ಣನು ಅನೇಕ ಮಂಗಲಮಯ ಮತ್ತು ಪುಣ್ಯಕರ ಕರ್ಮಗಳನ್ನು ಮಾಡಿದನು. ಅದನ್ನು ಕೊಂಡಾಡುವವರ ಎಲ್ಲ ಪಾಪಗಳು ನಾಶವಾಗಿ ಹೋಗುತ್ತವೆ. ಇಂತಹ ಪವಿತ್ರ ಕರ್ಮಗಳನ್ನಾಚರಿಸಿ ಈಗ ಅವನು ಕಾಲರೂಪದಿಂದ ವಸುದೇವನ ಮನೆಯಲ್ಲಿ ವಾಸಿಸುತ್ತಿದ್ದನು. ಆಗಲೇ ಅವನು ಅನೇಕ ಮುನಿಗಳನ್ನು ಪಿಂಡಾರಕ(ಪ್ರಭಾಸ)ಕ್ಷೇತ್ರಕ್ಕೆ ಹೋಗಲು ಪ್ರೇರೇಪಿಸಿದನು. ಭಗವಂತನ ಸಂಕಲ್ಪದಂತೆ ಅವರೆಲ್ಲರೂ ಅಲ್ಲಿಗೆ ತೆರಳಿದರು. ಆ ಮುನಿಗಳಲ್ಲಿ ವಿಶ್ವಾಮಿತ್ರ, ಅಸಿತ, ಕಣ್ವ, ದುರ್ವಾಸ, ಭೃಗು, ಅಂಗಿರಾ, ಕಶ್ಯಪ, ವಾಮದೇವ, ಅತ್ರಿ, ವಸಿಷ್ಠ, ನಾರದ ಮುಂತಾದವರಿದ್ದರು. ॥ ೧೧-೧೨ ॥

ಒಂದು ದಿನ ಕೆಲವು ಯದುವಂಶೀಯ ಕುಮಾರರು ಆಡುತ್ತಾ ಆಡುತ್ತಾ ಅವರ ಬಳಿಗೆ ತಲುಪಿದರು. ಅವರು ಉದ್ಧಟರಾಗಿದ್ದರು, ಆದರೆ ಕೃತಕ ವಿನಯವನ್ನು ತೋರುತ್ತಾ ಮುನಿಗಳಲ್ಲಿ ಪ್ರಶ್ನಿಸಿದರು. ॥ ೧೩ ॥ ಆ ಯದುವಂಶೀ ಬಾಲಕರು ಜಾಂಬವತಿಯ ಪುತ್ರ ಸಾಂಬನಿಗೆ ಸ್ತ್ರೀವೇಷ ತೊಡಿಸಿಕೊಂಡು ಹೋಗಿ ಅವರು ಬ್ರಾಹ್ಮಣರಲ್ಲಿ - ವಿಪ್ರವರ್ಯರೇ! ಈ ವಿಶಾಲಾಕ್ಷಿಯಾದ ಸುಂದರಿಯು ಗರ್ಭವತಿಯಾಗಿರುವಳು. ಇವಳು ಪುತ್ರರತ್ನವನ್ನು ಹಡೆಯಬೇಕೆಂದು ಬಯಸುವಳು. ಸ್ವತಃ ನಿಮ್ಮಲ್ಲಿ ಕೇಳಲು ನಾಚಿಕೊಳ್ಳುತ್ತಿರುವಳು. ನಿಮ್ಮ ಜ್ಞಾನ ಅಮೋಘವಾಗಿದೆ. ಆದ್ದರಿಂದ ಇವಳು ಗಂಡುಹಡೆಯುವಳೋ ಹೆಣ್ಣೋ? ಇದನ್ನು ತಿಳಿಸಿರಿ; ಎಂದು ವಿನಂತಿಸಿ ಕೊಂಡರು. ॥ ೧೪-೧೫ ॥ ರಾಜನೇ! ಈ ವಿಧವಾಗಿ ಆ ಕುಮಾರರು ಮುನಿಗಳಲ್ಲಿ ಒತ್ತಾಯಮಾಡಿದಾಗ, ಮುನಿಗಳು ಕುಪಿತರಾಗಿ ನುಡಿದರು - ಎಲೈ ಮೂರ್ಖರಿರಾ! ಇವನು ನಿಮ್ಮ ಕುಲವನ್ನು ಸಂಹಾರ ಮಾಡುವಂತಹ ಒನಕೆಯನ್ನು ಹಡೆಯುವನು. ॥ ೧೬ ॥ ಇದನ್ನು ಕೇಳಿ ಅವರೆಲ್ಲರೂ ಅತ್ಯಂತ ಭಯಪಟ್ಟರು. ಕೂಡಲೇ ಸಾಂಬನ ಹೊಟ್ಟೆಯನ್ನು ಬಿಚ್ಚಿನೋಡಿದರೆ ನಿಜವಾಗಿಯೇ ಒಂದು ಕಬ್ಬಿಣದ ಒನಕೆಯೇ ಇತ್ತು.* ॥ ೧೭ ॥ ಅವರೆಲ್ಲರೂ ಯೋಚಿಸತೊಡಗಿದರು - ನಮ್ಮಗಳ ಭಾಗ್ಯವೇ ಬಹಳ ಕೆಟ್ಟದಾಗಿದೆ. ನಾವೇನು ಮಾಡಿಬಿಟ್ಟೆವು? ನಮಗೆ ಜನರು ಏನನ್ನುವರು? ಈ ಪ್ರಕಾರ ವ್ಯಾಕುಲರಾಗಿ ಅವರೆಲ್ಲರೂ ಆ ಒನಕೆಯನ್ನು ಎತ್ತಿಕೊಂಡು ಮನೆಗೆ ತೆರಳಿದರು. ॥ ೧೮ ॥ ಆ ಒನಕೆಯನ್ನು ಎಲ್ಲ ಯಾದವರ ಮುಂದಿರಿಸಿ ರಾಜಾ ಉಗ್ರಸೇನನಿಗೆ ಎಲ್ಲ ನಿಜಸಂಗತಿಯನ್ನು ಅರುಹಿದರು. ಆಗ ಅವರೆಲ್ಲರ ಮುಖಗಳು ಬಾಡಿಹೋಗಿದ್ದವು. ॥ ೧೯ ॥

* ಆ ಬಾಲಕರು ಮುನಿಗಳನ್ನು ಮೋಸಮಾಡಲು ಸಾಂಬನ ಹೊಟ್ಟೆಗೆ ಬಟ್ಟೆ ಸುತ್ತಿದ್ದರು. ಆದರೆ ವಿಧಿವಶದಿಂದ ಅದು ಕಬ್ಬಿಣದ ಒನಕೆಯಾಗಿಹೋಯಿತು. ಈ ಪ್ರಕಾರ ತಮ್ಮ ಕೃತ್ಯದ ಕುರಿತು ಪಶ್ಚಾತ್ತಾಪಪಟ್ಟರು.

ಶ್ರುತ್ವಾಽಮೋಘಂ ವಿಪ್ರಶಾಪಂ ದೃಷ್ಟ್ವಾ ಚ ಮುಸಲಂ ನೃಪ ।
ವಿಸ್ಮಿತಾ ಭಯಸಂತ್ರಸ್ತಾ ಬಭೂವುರ್ದ್ವಾರಕೌಕಸಃ ॥ ೨೦ ॥

ಎಲೈ ರಾಜನೇ! ಬ್ರಾಹ್ಮಣರ ಶಾಪವು ಅಮೋಘವಾದುದು. ಎಲ್ಲ ದ್ವಾರಕಾವಾಸಿಗಳು ಬ್ರಾಹ್ಮಣರ ಶಾಪವೃತ್ತಾಂತವನ್ನು ಕೇಳಿ, ಆ ಒನಕೆಯನ್ನು ನೋಡಿ, ಬಹು ವಿಸ್ಮಿತರಾಗಿ, ಭಯದಿಂದ ನಡುಗಿ ಹೋದರು. ॥ ೨೦ ॥ ಯಾದವರ ರಾಜನಾದ ಉಗ್ರಸೇನನು ಆ ಒನಕೆಯನ್ನು ಪುಡಿಮಾಡಿ ಚೂರ್ಣವನ್ನಾಗಿಸಿ, ಅದನ್ನು ಸಮುದ್ರದಲ್ಲಿ ಹಾಕಿಸಿಬಿಟ್ಟನು. ಅದರ ಉಳಿದ ತುದಿಯ ಒಂದು ತುಂಡು ಚೂರಾಗದೆ ಹಾಗೆ ಉಳಿಯಿತು. ಅದನ್ನು ಹಾಗೆಯೇ ಸಮುದ್ರದಲ್ಲಿ ಎಸೆದರು. ॥ ೨೧ ॥

ತಚ್ಚೂರ್ಣಯಿತ್ವಾ ಮುಸಲಂ ಯದುರಾಜಃ ಸ ಆಹುಕಃ ।
ಸಮುದ್ರಸಲಿಲೇ ಪ್ರಾಸ್ಯಲ್ಲೋಹಂ ಚಾಸ್ಯಾವಶೇಷಿತಮ್ ॥ ೨೧ ॥

ಕಶ್ಚಿನ್ಮತ್ಸ್ಯೋಽಗ್ರಸೀಲ್ಲೋಹಂ ಚೂರ್ಣಾನಿ ತರಲೈಸ್ತತಃ ।
ಉಹ್ಯಮಾನಾನಿ ವೇಲಾಯಾಂ ಲಗ್ನಾನ್ಯಾಸನ್ಕಿಲೈರಕಾಃ ॥ ೨೨ ॥

ಕೆಲವು ದಿನಗಳಲ್ಲಿ ಆ ಒನಕೆಯ ಪುಡಿಯು ಸಮುದ್ರದ ಅಲೆಗಳಿಂದಾಗಿ ಸಮುದ್ರತೀರಕ್ಕೆ ಬಂದುಬಿದ್ದಿತು. ಅದರಿಂದ ಐರಕವೆಂಬ ಹುಲ್ಲು ಹುಟ್ಟಿಕೊಂಡಿತು. ತುದಿಯ ಕಬ್ಬಿಣದ ತುಂಡನ್ನು ಮೀನೊಂದು ನುಂಗಿಬಿಟ್ಟಿತು. ॥ ೨೨ ॥ ಆ ಮೀನು ಯಾವನೋ ಬೆಸ್ತನ ಬಲೆಯಲ್ಲಿ ಸಿಕ್ಕಿಬಿತ್ತು. ಓರ್ವ ಬೇಡನು ಆ ಮೀನನ್ನು ಕೊಂಡುಹೋದನು. ಅದರ ಹೊಟ್ಟೆಯಲ್ಲಿ ಅವನಿಗೆ ಕಬ್ಬಿಣದ ಚೂರೊಂದು ದೊರೆಯಿತು. ಅದನ್ನು ಆ ಬೇಡನು ತನ್ನ ಬಾಣದ ತುದಿಗೆ ಜೋಡಿಸಿದನು.* ॥ ೨೩ ॥ ಭಗವಂತನು ಎಲ್ಲವನ್ನು ಬಲ್ಲವನಾಗಿದ್ದಾನೆ. ಅವನು ಸರ್ವಸಮರ್ಥನಾಗಿದ್ದಾನೆ. ಬ್ರಾಹ್ಮಣರ ಶಾಪವನ್ನು ವ್ಯರ್ಥವಾಗಿಸುವ ಸಾಮರ್ಥ್ಯ ಅವನಲ್ಲಿದ್ದರೂ ಆ ಕಾಲಸ್ವರೂಪೀ ಭಗವಂತನು ಬ್ರಾಹ್ಮಣರ ಶಾಪವನ್ನು ಅನುಮೋದಿಸಿದನು. ॥ ೨೪ ॥

ಮತ್ಸ್ಯೋ ಗೃಹೀತೋ ಮತ್ಸ್ಯಘ್ನೈರ್ಜಾಲೇನಾನ್ಯೈಃ ಸಹಾರ್ಣವೇ ।
ತಸ್ಯೋದರಗತಂ ಲೋಹಂ ಸ ಶಲ್ಯೇ ಲುಬ್ಧಕೋಽಕರೋತ್ ॥ ೨೩ ॥

ಭಗವಾನ್ ಜ್ಞಾತಸರ್ವಾರ್ಥ ಈಶ್ವರೋಽಪಿ ತದನ್ಯಥಾ ।
ಕರ್ತುಂ ನೈಚ್ಛದ್ವಿಪ್ರಶಾಪಂ ಕಾಲರೂಪ್ಯನ್ವಮೋದತ ॥ ೨೪ ॥

ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಪ್ರಥಮೋಽಧ್ಯಾಯಃ ॥ ೧ ॥

# ಎರಡನೆಯ ಅಧ್ಯಾಯ

## ವಸುದೇವನ ಬಳಿಗೆ ನಾರದರು ಬರುವುದು, ಅವರಿಗೆ ರಾಜಾ ನಿಮಿ ಹಾಗೂ ಒಂಭತ್ತು ಯೋಗೀಶ್ವರರ ಸಂವಾದವನ್ನು ತಿಳಿಸಿದುದು

*ಶ್ರೀಶುಕ ಉವಾಚ*

ಗೋವಿಂದಭುಜಗುಪ್ತಾಯಾಂ ದ್ವಾರವತ್ಯಾಂ ಕುರೂದ್ವಹ ।
ಅವಾತ್ಸೀನ್ನಾರದೋಽಭೀಕ್ಷ್ಣಂ ಕೃಷ್ಣೋಪಾಸನಲಾಲಸಃ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ –** ಎಲೈ ಕುರುನಂದನಾ! ಭಗವಾನ್ ಶ್ರೀಕೃಷ್ಣನ ಬಾಹುಬಲದಿಂದ ಸಂರಕ್ಷಿತ ದ್ವಾರಕಾಪುರಿಯಲ್ಲಿ ಶ್ರೀಕೃಷ್ಣದರ್ಶನದ ಲಾಲಸೆಯಿಂದ ನಾರದ ಮಹರ್ಷಿಗಳು ಮೇಲಿಂದ ಮೇಲೆ ಬಂದು ತಂಗುತ್ತಿದ್ದರು. ॥ ೧ ॥ ಎಲೈ ರಾಜನೇ! ಬ್ರಹ್ಮಾದಿ ದೇವತೆಗಳ ಉಪಾಸ್ಯನಾದ ಭಗವಂತನ ಚರಣಕಮಲಗಳ ದಿವ್ಯ ಮಧುರ ಮಕರಂದವನ್ನು ಪಾನಮಾಡದವನು, ಭಜಿಸದವನು, ಅವನ ಅಲೌಕಿಕ ರೂಪಮಾಧುರ್ಯವನ್ನು ನೋಡದವನು, ಮಂಗಲಮಯ ಧ್ವನಿಯನ್ನು ಕೇಳದವನು ಯಾರಿರುವನು? ಏಕೆಂದರೆ, ಅವನು ಎಲ್ಲ ಕಡೆಯಿಂದ ಮೃತ್ಯುವಿನಿಂದ ಮುತ್ತಲ್ಪಟ್ಟವನಾಗಿದ್ದಾನೆ. ॥ ೨ ॥

ಕೋ ನು ರಾಜನ್ನಿಂದ್ರಿಯವಾನ್ ಮುಕುಂದಚರಣಾಂಬುಜಮ್ ।
ನ ಭಜೇತ್ ಸರ್ವತೋಮೃತ್ಯುರುಪಾಸ್ಯಮಮರೋತ್ತಮೈಃ ॥ ೨ ॥

* ಮೀನಿನ ಹೊಟ್ಟೆಯಲ್ಲಿ ದೊರೆತಿರುವ ಕಬ್ಬಿಣದ ಚೂರನ್ನು ಬಾಣದ ತುದಿಗೆ ಅಳವಡಿಸಿದರೆ, ಅಸಾಧ್ಯಬೇಟೆಯು ಸುಲಭವಾಗಿ ಸಿಗುತ್ತದೆ. ಆ ಬಾಣವು ಅಮೋಘವಾಗುತ್ತದೆ. ಇದೆಲ್ಲ ನಡೆದ ಘಟನೆಗಳು ಸ್ವಯಂ ಭಗವಂತನ ಇಚ್ಛೆಯೇ ಆಗಿತ್ತು.

ತಮೇಕದಾ ತು ದೇವರ್ಷಿಂ ವಸುದೇವೋ ಗೃಹಾಗತಮ್ ।
ಅರ್ಚಿತಂ ಸುಖಮಾಸೀನಮಭಿವಾದ್ಯೇದಮಬ್ರವೀತ್
॥ ೩ ॥

*ವಸುದೇವ ಉವಾಚ*

ಭಗವನ್ ಭವತೋ ಯಾತ್ರಾ ಸ್ವಸ್ತಯೇ ಸರ್ವದೇಹಿನಾಮ್ ।
ಕೃಪಣಾನಾಂ ಯಥಾ ಪಿತ್ರೋರುತ್ತಮಶ್ಲೋಕವರ್ತ್ಮನಾಮ್
॥ ೪ ॥

ಭೂತಾನಾಂ ದೇವಚರಿತಂ ದುಃಖಾಯ ಚ ಸುಖಾಯ ಚ ।
ಸುಖಾಯೈವ ಹಿ ಸಾಧೂನಾಂ ತ್ವಾದೃಶಾಮಚ್ಯುತಾತ್ಮನಾಮ್
॥ ೫ ॥

ಭಜಂತಿ ಯೇ ಯಥಾ ದೇವಾನ್ದೇವಾ ಅಪಿ ತಥೈವ ತಾನ್ ।
ಛಾಯೇವ ಕರ್ಮಸಚಿವಾಃ ಸಾಧವೋ ದೀನವತ್ಸಲಾಃ
॥ ೬ ॥

ಬ್ರಹ್ಮಂಸ್ತಥಾಪಿ ಪೃಚ್ಛಾಮೋ ಧರ್ಮಾನ್ಭಾಗವತಾಂಸ್ತವ ।
ಯಾಂಛ್ರುತ್ವಾ ಶ್ರದ್ಧಯಾ ಮರ್ತ್ಯೋ ಮುಚ್ಯತೇ ಸರ್ವತೋಭಯಾತ್
॥ ೭ ॥

ಅಹಂ ಕಿಲ ಪುರಾನಂತಂ ಪ್ರಜಾರ್ಥೋ ಭುವಿ ಮುಕ್ತಿದಮ್ ।
ಅಪೂಜಯಂ ನ ಮೋಕ್ಷಾಯ ಮೋಹಿತೋ ದೇವಮಾಯಯಾ
॥ ೮ ॥

ಯಥಾ ವಿಚಿತ್ರವ್ಯಸನಾದ್ಭವದ್ಭಿರ್ವಿಶ್ವತೋಭಯಾತ್ ।
ಮುಚ್ಯೇಮ ಹ್ಯಂಜಸೈವಾದ್ಧಾ ತಥಾ ನಃ ಶಾಧಿ ಸುವ್ರತ
॥ ೯ ॥

*ಶ್ರೀಶುಕ ಉವಾಚ*

ರಾಜನ್ನೇವಂ ಕೃತಪ್ರಶ್ನೋ ವಸುದೇವೇನ ಧೀಮತಾ ।
ಪ್ರೀತಸ್ತಮಾಹ ದೇವರ್ಷಿರ್ಹರೇಃ ಸಂಸ್ಮಾರಿತೋ ಗುಣೈಃ
॥ ೧೦ ॥

*ನಾರದ ಉವಾಚ*

ಸಮ್ಯಗೇತದ್ವ್ಯವಸಿತಂ ಭವತಾ ಸಾತ್ವತರ್ಷಭ ।
ಯತ್ಪೃಚ್ಛಸೇ ಭಾಗವತಾನ್ಧರ್ಮಾಂಸ್ತ್ವಂ ವಿಶ್ವಭಾವನಾನ್
॥ ೧೧ ॥

ಒಮ್ಮೆ ಶ್ರೀನಾರದರು ವಸುದೇವನ ಅರಮನೆಗೆ ಬಂದಿದ್ದರು. ವಸುದೇವನು ಆದರಪೂರ್ವಕ ಅವರನ್ನು ಅಭಿನಂದಿಸಿ, ಸುಖಾಸನದಲ್ಲಿ ಕುಳ್ಳಿರಿಸಿ, ಅವರನ್ನು ಯಥಾವಿಧಿಯಿಂದ ಪೂಜಿಸಿದನು. ಮತ್ತೆ ವಂದಿಸಿಕೊಂಡು ಇಂತೆಂದನು – ॥ ೩ ॥

**ವಸುದೇವನು ಹೇಳಿದನು** – ಮಹಾತ್ಮರಾದ ನಾರದರೇ! ನೀವು ಪುಣ್ಯಶ್ಲೋಕ ಭಗವಂತನ ಮಾರ್ಗಾನುಯಾಯಿಗಳು. ತಮ್ಮ ಸಂಚಾರ (ಯಾತ್ರೆ)ವು ಎಲ್ಲ ಪ್ರಾಣಿಗಳ ಮಂಗಳಕ್ಕಾಗಿಯೇ ಇರುತ್ತದೆ. ತಂದೆ-ತಾಯಿಯವರನ್ನೇ ಅವಲಂಬಿಸಿರುವ ಸಣ್ಣ ಮಕ್ಕಳಿಗೆ ಅವರು ಬಳಿಗೆ ಬಂದಾಗ ಪರಮಹರ್ಷವಾಗುವಂತೆ, ನಿಮ್ಮಂತಹ ಮಹಾಪುರುಷರ ಆಗಮನವು ಎಲ್ಲ ಪ್ರಾಣಿಗಳಿಗೆ ಶ್ರೇಯಸ್ಕರವೇ ಆಗಿರುತ್ತದೆ. ॥ ೪ ॥ ಬೇರೆ ದೇವತೆಗಳ ವ್ಯವಹಾರ ಪ್ರಾಣಿಗಳ ಸುಖಕ್ಕಾಗಿಯೂ, ದುಃಖಕ್ಕಾಗಿಯೂ ಆಗಿರುತ್ತದೆ. (ದೇವತೆಗಳನ್ನು ವಿಧಿವತ್ತಾಗಿ ಪೂಜಿಸಿದರೆ ಸಂತೋಷಗೊಂಡು ಸುಖಕೊಡುತ್ತಾರೆ, ಪೂಜೆಯಲ್ಲಿ ಕೊರತೆಯಾದರೆ, ಸಿಟ್ಟಾಗಿ ದುಃಖವನ್ನೂ ಕೊಡುತ್ತಾರೆ.) ಆದರೆ ನಿಮ್ಮಂತಹ ಮಹಾತ್ಮರ, ಭಗವದ್ಭಕ್ತರ, ಸಂತರ ವ್ಯವಹಾರ ಯಾವಾಗಲೂ ಎಲ್ಲ ಪ್ರಾಣಿಗಳ ಹಿತಕ್ಕಾಗಿಯೇ ಇರುತ್ತದೆ. ॥ ೫ ॥ ಜನರು ದೇವತೆಗಳನ್ನು ಉಪಾಸನೆ ಮಾಡುವ ಭಾವಕ್ಕನುಸಾರ ದೇವತೆಗಳು ಫಲನೀಡುತ್ತಾರೆ. ಅವರು ನೆರಳಿನಂತಿರುತ್ತಾರೆ. ಕರ್ಮಕ್ಕನುಸಾರ ಫಲಕೊಡುತ್ತಾರೆ. ಆದರೆ ಸಾಧು ಮಹಾತ್ಮರ ಸ್ವಭಾವ ದೀನರ ಮೇಲೆ ಅಹೈತುಕವಾಗಿ ಕೃಪೆದೋರುವುದೇ ಆಗಿರುತ್ತದೆ. ॥ ೬ ॥ ಓ ಬ್ರಹ್ಮಸ್ವರೂಪರೇ! ಶ್ರದ್ಧಾಪೂರ್ವಕ ಶ್ರವಣಿಸುವುದರಿಂದ ಮನುಷ್ಯರು ಎಲ್ಲ ವಿಧದ ಭಯದಿಂದ ಮುಕ್ತರಾಗುವಂತಹ, ಭಾಗವತ ಧರ್ಮದ ಕುರಿತು ಈಗ ನಾನು ನಿಮ್ಮಲ್ಲಿ ಕೇಳುತ್ತೇನೆ. ॥ ೭ ॥ ಭಗವಾನ್ ವಿಷ್ಣುವು ಮುಕ್ತಿದಾತನು. ಹಿಂದೆ ನಾನು ಆ ಮೋಕ್ಷದಾತನಾದ ಭಗವಂತನ ಉಪಾಸನೆಯನ್ನು ಮೋಕ್ಷಕ್ಕಾಗಿ ಮಾಡದೆ, ಅವನನ್ನು ನನ್ನ ಪುತ್ರರೂಪದಿಂದ ಪಡೆಯಲು ಮಾಡಿದ್ದೆ, ಏಕೆಂದರೆ, ಆಗ ನಾನು ಅವನ ಮಾಯೆಯಿಂದ ಮೋಹಿತನಾಗಿದ್ದೆ. ॥ ೮ ॥ ಓ ಭಗವನ್ನಿಷ್ಠರೇ! ಪ್ರಪಂಚದ ದುಃಖಗಳೂ ಕೂಡ ಸುಖದಂತೆ ಭಾಸವಾಗುತ್ತವೆ, ಇದೆಂತಹ ವಿಚಿತ್ರವಾದ ವಿಷಯ, ಅದ್ಯಂತ ದುಃಖರೂಪವಾದ ಇಂತಹ ವಿಚಿತ್ರವ್ಯಸನಗಳಿಂದ (ದುಃಖಗಳಿಂದ) ನಾನು ಆಯಾಸವಿಲ್ಲದೆ, ನಿಶ್ಚಿತವಾಗಿ ಮುಕ್ತನಾಗುವಂತಹ ಸರಳವಾದ ಉಪಾಯವನ್ನು ತಿಳಿಸಿರಿ. ॥ ೯ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ರಾಜನೇ! ಬುದ್ಧಿವಂತನಾದ ವಸುದೇವನು ಈ ಪ್ರಕಾರ ಪ್ರಶ್ನಿಸಿದಾಗ, ದೇವರ್ಷಿ ನಾರದರು ಭಗವಂತನ ಅನಂತಕಲ್ಯಾಣಗುಣಗಳನ್ನು ಸ್ಮರಿಸುತ್ತಾ ತನ್ಮಯರಾದರು. ಪ್ರೇಮಾನಂದದಲ್ಲಿ ಮಗ್ನರಾಗಿ ನುಡಿಯತೊಡಗಿದರು. ॥ ೧೦ ॥

**ಶ್ರೀನಾರದರು ಹೇಳುತ್ತಾರೆ** – ಓ ಯದುವಂಶ ಶಿರೋಮಣಿ! ನೀನು ಇಡೀ ವಿಶ್ವದ ಕಲ್ಯಾಣ ಮಾಡುವಂತಹ ಭಾಗವತ ಧರ್ಮದ ಕುರಿತು ಕೇಳುತ್ತಿರುವೆ. ಈ ನಿನ್ನ ನಿಶ್ಚಯವು ಬಹಳ ಸರಿಯಾಗಿದೆ. ॥ ೧೧ ॥

ಶ್ರುತೋಽನುಪಠಿತೋ ಧ್ಯಾತ ಆದೃತೋ ವಾನುಮೋದಿತಃ।
ಸದ್ಯಃ ಪುನಾತಿ ಸದ್ಧರ್ಮೋ ದೇವವಿಶ್ವದ್ರುಹೋಽಪಿ ಹಿ
॥ ೧೨ ॥

ತ್ವಯಾ ಪರಮಕಲ್ಯಾಣಃ ಪುಣ್ಯಶ್ರವಣಕೀರ್ತನಃ।
ಸ್ಮಾರಿತೋ ಭಗವಾನದ್ಯ ದೇವೋ ನಾರಾಯಣೋ ಮಮ
॥ ೧೩ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್।
ಆರ್ಷಭಾಣಾಂ ಚ ಸಂವಾದಂ ವಿದೇಹಸ್ಯ ಮಹಾತ್ಮನಃ
॥ ೧೪ ॥

ಪ್ರಿಯವ್ರತೋ ನಾಮ ಸುತೋ ಮನೋಃ ಸ್ವಾಯಂಭುವಸ್ಯ ಯಃ।
ತಸ್ಯಾಗ್ನೀಧ್ರಸ್ತತೋ ನಾಭಿರ್ಋಷಭಸ್ತತ್ಸುತಃ ಸ್ಮೃತಃ
॥ ೧೫ ॥

ತಮಾಹುರ್ವಾಸುದೇವಾಂಶಂ ಮೋಕ್ಷಧರ್ಮವಿವಕ್ಷಯಾ।
ಅವತೀರ್ಣಂ ಸುತಶತಂ ತಸ್ಯಾಸೀದ್ಬ್ರಹ್ಮಪಾರಗಮ್
॥ ೧೬ ॥

ತೇಷಾಂ ವೈ ಭರತೋ ಜ್ಯೇಷ್ಠೋ ನಾರಾಯಣಪರಾಯಣಃ।
ವಿಖ್ಯಾತಂ ವರ್ಷಮೇತದ್ಯನ್ನಾಮ್ನಾ ಭಾರತಮದ್ಭುತಮ್
॥ ೧೭ ॥

ಸ ಭುಕ್ತಭೋಗಾಂ ತ್ಯಕ್ತ್ವೇಮಾಂ ನಿರ್ಗತಸ್ತಪಸಾ ಹರಿಮ್।
ಉಪಾಸೀನಸ್ತತ್ಪದವೀಂ ಲೇಭೇ ವೈ ಜನ್ಮಭಿಸ್ತ್ರಿಭಿಃ
॥ ೧೮ ॥

ತೇಷಾಂ ನವ ನವದ್ವೀಪಪತಯೋಽಸ್ಯ ಸಮಂತತಃ।
ಕರ್ಮತಂತ್ರಪ್ರಣೇತಾರ ಏಕಾಶೀತಿರ್ದ್ವಿಜಾತಯಃ
॥ ೧೯ ॥

ನವಾಭವನ್ಮಹಾಭಾಗಾ ಮುನಯೋ ಹ್ಯರ್ಥಶಂಸಿನಃ।
ಶ್ರಮಣಾ ವಾತರಶನಾ ಆತ್ಮವಿದ್ಯಾವಿಶಾರದಾಃ
॥ ೨೦ ॥

ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ।
ಆವಿರ್ಹೋತ್ರೋಽಥ ದ್ರುಮಿಲಶ್ಚಮಸಃ ಕರಭಾಜನಃ
॥ ೨೧ ॥

ಎಲೈ ವಸುದೇವನೇ! ಈ ಭಾಗವತ ಧರ್ಮವನ್ನು ಕಿವಿಗೊಟ್ಟು ಶ್ರವಣಿಸಿದರೆ, ವಾಣಿಯಿಂದ ಕೊಂಡಾಡಿದರೆ, ಮನಸ್ಸಿನಿಂದ ಸ್ಮರಿಸಿದರೆ, ಹೃತ್ಪೂರ್ವಕವಾಗಿ ಆದರಿಸಿದರೆ, ಒಪ್ಪಿಕೊಂಡರೆ ಮನುಷ್ಯನು ಆಗಲೇ ಪುನೀತನಾಗಿ ಹೋಗುತ್ತಾನೆ. ಇದನ್ನು ಆಶ್ರಯಿಸಿದವರು ಎಷ್ಟೇ ದುಷ್ಟನಾಗಿರಲಿ, ಅವನನ್ನೂ ಪವಿತ್ರ ವಾಗಿಸುವಂತಹ ಮಹಿಮೆ ಈ ಭಾಗವತ ಧರ್ಮದ್ದಾಗಿದೆ. ಭಗವಂತನು ಪರಮ ಕಲ್ಯಾಣ ಸ್ವರೂಪನು. ಅವನ ನಾಮಸ್ಮರಣೆ, ಕೀರ್ತನೆ ಭಾರೀ ಪುಣ್ಯ ಪ್ರದವಾಗಿದೆ. ಇಂತಹ ದೇವಾಧಿದೇವ ಆದಿಪುರುಷ ಭಗವಾನ್ ನಾರಾಯಣ ಸ್ಮರಣೆಯನ್ನು ನೀನು ನನಗೆ ಮಾಡಿಸಿದೆ. ॥ ೧೨-೧೩ ॥ ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸವನ್ನು ಉದಾಹರಣೆಯಾಗಿ ನಿನಗೆ ಅರುಹುತ್ತೇನೆ. ಅದರಲ್ಲಿ ಮಹಾತ್ಮಾ ವಿದೇಹರಾಜ ನಿಮಿಯ ಹಾಗೂ ಋಷಭದೇವರ ಒಂಭತ್ತು ಪುತ್ರರ (ಯೋಗೀಶ್ವರರ) ಸಂವಾದವಿದೆ. ॥ ೧೪ ॥ ಹಿಂದೆ ಸ್ವಾಯಂಭುವ ಮನುವಿನ ಪುತ್ರ ಪ್ರಿಯವ್ರತನೆಂಬುವನಿದ್ದನು. ಅವನಿಂದ ಆಗ್ನೀಧ್ರನಾದನು. ಅವನಿಂದ ನಾಭಿ ಮತ್ತು ನಾಭಿಯ ಪುತ್ರನಾಗಿ ಭಗವಂತನು ಋಷಭದೇವನಾಗಿ ಉದಿಸಿದನು. ॥ ೧೫ ॥ ಆ ಋಷಭದೇವನನ್ನು ಭಗವಾನ್ ವಾಸುದೇವನ ಅಂಶಾವತಾರವೆಂದೇ ತಿಳಿಯಲಾಗಿದೆ. ಅವನು ಮೋಕ್ಷಧರ್ಮದ ಉಪದೇಶ ಕೊಡುವುದಕ್ಕಾಗಿಯೇ ಅವತರಿಸಿದ್ದನು. ಅವನಿಗೆ ನೂರುಮಂದಿ ಪುತ್ರರುದಿಸಿದರು. ಅವರೆಲ್ಲರೂ ವೇದಗಳಲ್ಲಿ ಪಾರಂಗತರಾಗಿದ್ದರು. ॥ ೧೬ ॥

ಅವರಲ್ಲಿ ಭರತನೇ ಹಿರಿಯವನಾಗಿದ್ದನು. ಅವನು ಭಗವಾನ್ ನಾರಾಯಣಪರಾಯಣನಾಗಿದ್ದನು. ಅವನ ಹೆಸರಿನಿಂದಲೇ ಈ ದೇಶದ ಹೆಸರು ಭಾರತವರ್ಷವೆಂದು ಪ್ರಸಿದ್ಧವಾಯಿತು. ॥ ೧೭ ॥ ರಾಜರ್ಷಿ ಭರತನು ಸಮಸ್ತ ಭೂಮಂಡಲವನ್ನು ಆಳಿದನು. ಮತ್ತೆ ರಾಜ್ಯವನ್ನು ತ್ಯಜಿಸಿ ಭಗವಂತನ ಆರಾಧನೆಗಾಗಿ, ತಪಸ್ಸಿಗಾಗಿ ಕಾಡಿಗೆ ಹೊರಟುಹೋದನು. ಅಲ್ಲಿ ಭಗವಂತನ ಉಪಾಸನೆಗೈದು ಮೂರು ಜನ್ಮಗಳಲ್ಲಿ ಭಗವಂತನನ್ನು ಪಡೆದುಕೊಂಡನು. (ಇದೇ ರಾಜರ್ಷಿ ಭರತನು ಎರಡನೇ ಜನ್ಮದಲ್ಲಿ ಜಿಂಕೆಯಾಗಿ ಹುಟ್ಟಿದ್ದನು. ಮೂರನೆಯ ಬ್ರಾಹ್ಮಣಜನ್ಮದಲ್ಲಿ ಜಡಭರತನ ಹೆಸರಿನಿಂದ ಖ್ಯಾತನಾಗಿದ್ದ ಈ ಕಥೆ ಪ್ರಸಿದ್ಧವಾಗಿದೆ.) ॥ ೧೮ ॥ ಋಷಭದೇವರ ನೂರು ಮಂದಿ ಪುತ್ರರಲ್ಲಿ ಒಂಭತ್ತು ಜನರು ಒಂಭತ್ತು ದ್ವೀಪಗಳ ಅಧಿಪತಿಗಳಾದರು. ಅವು ಭಾರತವರ್ಷದ ಸುತ್ತಲೂ ನೆಲೆಸಿವೆ. ಉಳಿದ ಎಂಭತ್ತೊಂದು ಮಂದಿ ಕರ್ಮಕಾಂಡದ ರಚಯಿತರೂ, ಅಗ್ನಿಹೋತ್ರಾದಿಗಳನ್ನು ಮಾಡುವ ಬ್ರಾಹ್ಮಣರಾದರು. ॥ ೧೯ ॥ ಹಾಗೂ ಪರಮಾರ್ಥ ತತ್ತ್ವದ ಪ್ರಚಾರಕ ಮಹಾಭಾಗ್ಯವಾನ್ ಒಂಭತ್ತು ಮಂದಿ ಸಂನ್ಯಾಸಿಗಳಾದರು. ಅವರು ದಿಗಂಬರ ಸಂನ್ಯಾಸಿಗಳಾಗಿದ್ದು ಆತ್ಮವಿದ್ಯೆಯಲ್ಲಿ ಪಾರಂಗತರಾಗಿದ್ದರು. ಅವರ ಹೆಸರುಗಳು ಇಂತಿವೆ – ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ ಮತ್ತು ಕರಭಾಜನ. ॥ ೨೦-೨೧ ॥

ತ ಏತೇ ಭಗವದ್ರೂಪಂ ವಿಶ್ವಂ ಸದಸದಾತ್ಮಕಮ್ ।
ಆತ್ಮನೋಽವ್ಯತಿರೇಕೇಣ ಪಶ್ಯಂತೋ ವ್ಯಚರನ್ಮಹೀಮ್
॥ ೨೨ ॥

ಅವ್ಯಾಹತೇಷ್ಟಗತಯಃ ಸುರಸಿದ್ಧಸಾಧ್ಯ-
ಗಂಧರ್ವಯಕ್ಷನರಕಿನ್ನರನಾಗಲೋಕಾನ್ ।
ಮುಕ್ತಾಶ್ಚರಂತಿ ಮುನಿಚಾರಣಭೂತನಾಥ-
ವಿದ್ಯಾಧರದ್ವಿಜಗವಾಂ ಭುವನಾನಿ ಕಾಮಮ್ ॥ ೨೩ ॥

ತ ಏಕದಾ ನಿಮೇಃ ಸತ್ರಮುಪಜಗ್ಮುರ್ಯದೃಚ್ಛಯಾ ।
ವಿತಾಯಮಾನಮೃಷಿಭಿರಜನಾಭೇ ಮಹಾತ್ಮನಃ
॥ ೨೪ ॥

ತಾನ್ ದೃಷ್ಟ್ವಾ ಸೂರ್ಯಸಂಕಾಶಾನ್ ಮಹಾಭಾಗವತಾನ್ನೃಪಃ ।
ಯಜಮಾನೋಽಗ್ನಯೋ ವಿಪ್ರಾಃ ಸರ್ವ ಏವೋಪತಸ್ಥಿರೇ
॥ ೨೫ ॥

ವಿದೇಹಸ್ತಾನಭಿಪ್ರೇತ್ಯ ನಾರಾಯಣಪರಾಯಣಾನ್ ।
ಪ್ರೀತಃ ಸಂಪೂಜಯಾಂಚಕ್ರೇ ಆಸನಸ್ಥಾನ್ಯಥಾರ್ಹತಃ
॥ ೨೬ ॥

ತಾನ್ರೋಚಮಾನಾನ್ ಸ್ವರುಚಾ ಬ್ರಹ್ಮಪುತ್ರೋಪಮಾನ್ನವ ।
ಪಪ್ರಚ್ಛ ಪರಮಪ್ರೀತಃ ಪ್ರಶ್ರಯಾವನತೋ ನೃಪಃ
॥ ೨೭ ॥

ವಿದೇಹ ಉವಾಚ

ಮನ್ಯೇ ಭಗವತಸ್ಸಾಕ್ಷಾತ್ಪಾರ್ಷದಾನ್ವೋ ಮಧುದ್ವಿಷಃ ।
ವಿಷ್ಣೋರ್ಭೂತಾನಿ ಲೋಕಾನಾಂ ಪಾವನಾಯ ಚರಂತಿ ಹಿ
॥ ೨೮ ॥

ದುರ್ಲಭೋ ಮಾನುಷೋ ದೇಹೋ ದೇಹಿನಾಂ ಕ್ಷಣಭಂಗುರಃ ।
ತತ್ರಾಪಿ ದುರ್ಲಭಂ ಮನ್ಯೇ ವೈಕುಂಠಪ್ರಿಯದರ್ಶನಮ್
॥ ೨೯ ॥

ಅತ ಆತ್ಯಂತಿಕಂ ಕ್ಷೇಮಂ ಪೃಚ್ಛಾಮೋ ಭವತೋಽನಘಾಃ ।
ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಮ್
॥ ೩೦ ॥

ಧರ್ಮಾನ್ ಭಾಗವತಾನ್ಬ್ರೂತ ಯದಿ ನಃ ಶ್ರುತಯೇ ಕ್ಷಮಮ್ ।
ಯೈಃ ಪ್ರಸನ್ನಃ ಪ್ರಪನ್ನಾಯ ದಾಸ್ಯತ್ಯಾತ್ಮಾನಮಪ್ಯಜಃ
॥ ೩೧ ॥

ಇವರೆಲ್ಲ ಮಹಾತ್ಮರು ಈ ಜಡ-ಚೇತನಾತ್ಮಕ ಸಮಸ್ತ ವಿಶ್ವವನ್ನು ಭಗವಂತನ ಸ್ವರೂಪವೆಂದೇ ತಿಳಿಯುತ್ತಿದ್ದರು. ಅದನ್ನು ತನ್ನಿಂದ ಬೇರೆ ಎಂದು ನೋಡುತ್ತಿರಲಿಲ್ಲ. ಅರ್ಥಾತ್ – ಎಲ್ಲ ಕಡೆಗಳಲ್ಲಿ ಅವರಿಗೆ ಪರಮಾತ್ಮನೊಬ್ಬನ ದರ್ಶನವೇ ಆಗುತ್ತಿತ್ತು. ಈ ವಿಧವಾಗಿ ಸರ್ವತ್ರ ಆತ್ಮಭಾವವನ್ನಿರಿಸಿಕೊಂಡು ಅದ್ವಿತೀಯ ಪರಮಾತ್ಮನನ್ನೇ ದರ್ಶಿಸುತ್ತಾ ವಿಶ್ವಾದ್ಯಂತ ಸಂಚರಿಸುತ್ತಿದ್ದರು. ॥ ೨೨ ॥ ಮೂರು ಲೋಕಗಳಲ್ಲೆಲ್ಲ ಅವರ ಗತಿ ಅಬಾಧಿತವಾಗಿತ್ತು. ಅವರು ದೇವತೆ, ಸಿದ್ಧ ಸಾಧ್ಯ, ಗಂಧರ್ವ, ಯಕ್ಷ, ಮನುಷ್ಯ, ಕಿನ್ನರ, ನಾಗಲೋಕ ಹೀಗೆ ಎಲ್ಲ ಲೋಕಗಳಲ್ಲಿ ಸ್ವಚ್ಛಂದವಾಗಿ ವಿಚರಿಸುತ್ತಿದ್ದರು. ಇಷ್ಟೇ ಅಲ್ಲದೆ ಅವರು ಇನ್ನೂ ಕೂಡ ಮುನಿ, ಚಾರಣ, ಭೂತನಾಥ, ವಿದ್ಯಾಧರ, ಬ್ರಾಹ್ಮಣ ಮತ್ತು ಗೋವುಗಳು ಇವರ ಸ್ಥಾನಗಳಲ್ಲಿ ಮುಕ್ತರಾಗಿ ವಿಹರಿಸುತ್ತಿದ್ದರು. ॥ ೨೩ ॥

ಒಮ್ಮೆ ಅಜನಾಭವರ್ಷದಲ್ಲಿ (ಭಾರತವರ್ಷದಲ್ಲಿ) ಮಹಾತ್ಮಾ ನಿಮಿರಾಜನು ದೊಡ್ಡ-ದೊಡ್ಡ ಋಷಿಗಳಿಂದೊಡಗೂಡಿ ಯಜ್ಞ ಮಾಡುತ್ತಿದ್ದನು. ಆಗ ಈ ಒಂಭತ್ತು ಯೋಗೀಶ್ವರರು ನಿಮಿಯ ಯಜ್ಞದಲ್ಲಿ ಸ್ವಾಭಾವಿಕವಾಗಿ ಸಂಚರಿಸುತ್ತಾ ಬಂದು ತಲುಪಿದರು. ॥ ೨೪ ॥ ಈ ಪರಮ ಭಾಗವತ ಮಹಾತ್ಮರು ಸೂರ್ಯನಂತೆ ತಮ್ಮ ಕಾಂತಿಯಿಂದ ಪ್ರಕಾಶಿಸುತ್ತಿದ್ದರು. ಇಂತಹ ಯೋಗೀಶ್ವರರನ್ನು ಕಂಡು ಯಜ್ಞಮಾಡುತ್ತಿದ್ದ ರಾಜಾ ನಿಮಿ, ಮೂರ್ತಿಮಂತ ಅಗ್ನಿದೇವರು, ಋತ್ವಿಜಾದಿ ಬ್ರಾಹ್ಮಣರು ಹೀಗೆ ಎಲ್ಲರೂ ಅವರ ಸ್ವಾಗತಕ್ಕಾಗಿ ಎದ್ದುನಿಂತರು. ॥ ೨೫ ॥ ರಾಜಾ ನಿಮಿಯು ಆ ಒಂಭತ್ತು ಯೋಗೀಶ್ವರರನ್ನು ಭಗವಾನ್ ನಾರಾಯಣ ಪರಾಯಣರೆಂದು ಭಾವಿಸಿ, ಬಹಳ ಹರ್ಷಿತನಾಗಿ ಅವರನ್ನು ಉಚಿತಾಸನಗಳಲ್ಲಿ ಕುಳ್ಳಿರಿಸಿ, ವಿಧಿಪೂರ್ವಕ ಅವರನ್ನು ಪೂಜಿಸಿದನು. ॥ ೨೬ ॥ ಆ ಯೋಗೀಶ್ವರರು ಸಾಕ್ಷಾತ್ ಬ್ರಹ್ಮಮಾನಸ ಪುತ್ರರಾದ ಸನಕಾದಿಗಳಂತೆ ತಮ್ಮ ಕಾಂತಿಯಿಂದ ಪ್ರಕಾಶಿತರಾಗಿದ್ದರು. ರಾಜಾ ನಿಮಿಯು ವಿನಯದಿಂದ ತಲೆಬಾಗಿ, ಕೈಜೋಡಿಸಿಕೊಂಡು ಪರಮ ಪ್ರೇಮದಿಂದ ಅವರಲ್ಲಿ ಇಂತು ಪ್ರಶ್ನಿಸಿದನು. ॥ ೨೭ ॥

**ವಿದೇಹರಾಜನಾದ ನಿಮಿಯು ಹೇಳಿದನು –** ನಾನು ನಿಮ್ಮನ್ನು ಸಾಕ್ಷಾತ್ ಭಗವಾನ್ ಮಧುಸೂದನನ ಪಾರ್ಷದರೆಂದೇ ತಿಳಿಯುತ್ತೇನೆ. ಭಗವಾನ್ ಮಹಾವಿಷ್ಣುವಿನ ಸೇವಕರು, ದಾಸರು ಸಮಸ್ತ ಲೋಕಗಳನ್ನು ಪವಿತ್ರ ಮಾಡಲೆಂದೇ ಸಂಚರಿಸುತ್ತಾರೆ. ॥ ೨೮ ॥ ಈ ಮನುಷ್ಯಜನ್ಮವು ಜೀವರಿಗೆ ತುಂಬಾ ದುರ್ಲಭವಾಗಿದೆ ಹಾಗೂ ಕ್ಷಣಭಂಗುರವೂ ಆಗಿದೆ. ಅದರಲ್ಲಿಯೂ ಭಗವಂತನ ಭಕ್ತರಾದವರ ದರ್ಶನಭಾಗ್ಯ ದೊರೆಯುವುದು ಇನ್ನೂ ದುರ್ಲಭವಾಗಿದೆ. ॥ ೨೯ ॥ ಆದ್ದರಿಂದ ತ್ರಿಲೋಕಗಳನ್ನು ಪಾವನಗೊಳಿಸುವ ಮಹಾತ್ಮರೇ ! ನಾನು ನಿಮ್ಮಗಳಲ್ಲಿ ಆತ್ಯಂತಿಕ ಶ್ರೇಯಸ್ಸಿನ ಕುರಿತು ಕೇಳುತ್ತಿದ್ದೇನೆ. ಏಕೆಂದರೆ, ಈ ಪ್ರಪಂಚದಲ್ಲಿ ಅರೆಕ್ಷಣದ ಸತ್ಸಂಗವೂ ಕೂಡ ಮನುಷ್ಯರಿಗಾಗಿ ಶ್ರೇಷ್ಠನಿಧಿಯಾಗಿದೆ. ॥ ೩೦ ॥ ನಾನು ಇದರ ಬಗ್ಗೆ ಯೋಗ್ಯ ಅಧಿಕಾರಿ ಎಂದು ತಿಳಿಯುವಿರಾದರೆ ದಯೆಗೈದು ಭಾಗವತ ಧರ್ಮಗಳ ಕುರಿತು ತಿಳಿಸುವರಾಗಿರಿ. ಆ ಭಾಗವತ ಧರ್ಮದಿಂದ ಅಜನ್ಮಾ ಭಗವಂತನು ಪ್ರಸನ್ನನಾಗಿ ತನ್ನ ಶರಣಾಗತ ಭಕ್ತರಿಗೆ ಸ್ವತಃ ತನ್ನನ್ನೇ ಕೊಟ್ಟುಕೊಳ್ಳುವನು. ॥ ೩೧ ॥

ಶ್ರೀನಾರದ ಉವಾಚ

ಏವಂ ತೇ ನಿಮಿನಾ ಪೃಷ್ಟಾ ವಸುದೇವ ಮಹತ್ತಮಾಃ ।
ಪ್ರತಿಪೂಜ್ಯಾಬ್ರುವನ್ ಪ್ರೀತ್ಯಾ ಸಸದಸ್ಯರ್ತ್ವಿಜಂ ನೃಪಮ್ ॥ ೩೨ ॥

ಶ್ರೀನಾರದರು ಹೇಳಿದರು – ಎಲೈ ವಸುದೇವನೇ! ಈ ವಿಧವಾಗಿ ಆ ಮಹಾತ್ಮಾ ಯೋಗೀಶ್ವರರಲ್ಲಿ ರಾಜಾ ನಿಮಿಯು ಪ್ರಶ್ನಿಸಿದನು. ಆಗ ಯೋಗೀಶ್ವರರು ಅವನ ಪ್ರಶ್ನೆಯನ್ನು ಪ್ರಶಂಸಿಸುತ್ತಾ, ಆ ಸಭೆಯಲ್ಲಿ ಕುಳಿತಿರುವ ಸದಸ್ಯರನ್ನು ಮತ್ತು ರಾಜನನ್ನು ಸಂಬೋಧಿಸಿ ಹೇಳತೊಡಗಿದರು. ॥ ೩೨ ॥

ಕವಿರುವಾಚ

ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ
ಪಾದಾಂಬುಜೋಪಾಸನಮತ್ರ ನಿತ್ಯಮ್ ।
ಉದ್ವಿಗ್ನಬುದ್ಧೇರಸದಾತ್ಮಭಾವಾದ್
ವಿಶ್ವಾತ್ಮನಾ ಯತ್ರ ನಿವರ್ತತೇ ಭೀಃ ॥ ೩೩ ॥

**ಮೊದಲಿಗೆ ಮಹಾತ್ಮಾ ಕವಿ ಯೋಗೀಶ್ವರರು ಹೇಳಿದರು –** ಎಲೈ ರಾಜನೇ! (ಆತ್ಯಂತಿಕ ಶ್ರೇಯಸ್ಸಿಗಾಗಿ ನೀನು ಪ್ರಶ್ನಿಸಿರುವೆ. ಅದಕ್ಕಾಗಿ ಅನನ್ಯ ಶರಣಾಗತಿಯೇ ಸರ್ವೋತ್ಕೃಷ್ಟ ಸಾಧನವಾಗಿದೆ.) ಈ ವಿಷಯದಲ್ಲಿ ಭಗವಾನ್ ಅಚ್ಯುತನ ಚರಣಗಳಿಗೆ ಶರಣಾಗುವುದೇ, ಶಾಶ್ವತವಾಗಿ ಭಯರಹಿತನಾಗಲು ಉತ್ತಮೋತ್ತಮ ಸಾಧನವೆಂದು ನಾನು ತಿಳಿಯುತ್ತೇನೆ. ಏಕೆಂದರೆ, ಸಾಂಸಾರಿಕ ಪದಾರ್ಥಗಳಲ್ಲಿ ಆತ್ಮಬುದ್ಧಿ ಸುಖಬುದ್ಧಿ ಇರುವ ಜನರೂ ಕೂಡ ಭಗವಂತನಿಗೆ ಅನನ್ಯ ಶರಣಾದರೆ ಅದರ ಫಲವಾಗಿ ಅವರ ಅಜ್ಞಾನ ದೂರವಾಗುತ್ತದೆ. ಪ್ರಪಂಚದಲ್ಲಿ ದುಃಖದ ಅನುಭವ ಪಡೆದು ಅವರು ವಿರಕ್ತರಾಗುತ್ತಾರೆ. ಅವರಿಗೆ ಆಧ್ಯಾತ್ಮಿಕ ಪ್ರಸನ್ನತೆ ಪ್ರಾಪ್ತವಾಗಿ, ಅವರ ಭಯ ಪೂರ್ಣರೂಪದಿಂದ ನಿವೃತ್ತವಾಗುತ್ತದೆ. ॥ ೩೩ ॥ ಅವರಿಗೆ ಎಲ್ಲ ಕಡೆಗಳಲ್ಲಿ ಆತ್ಮಭಾವ ಉಂಟಾಗಿ ಸರ್ವತ್ರ, ಸಮಭಾವದಿಂದ ನಿರಂತರ ಪರಮಾತ್ಮನ ಅನುಭವವೇ ಆಗತೊಡಗುತ್ತದೆ. ಸಾಮಾನ್ಯ ಅಜ್ಞಾನಿ ಜನರಿಗೂ ಕೂಡ ತುಂಬಾ ಸುಲಭವಾಗಿ ತನ್ನ ಸಾಕ್ಷಾತ್ಕಾರ ಪ್ರಾಪ್ತಿಯ ಉಪಾಯವನ್ನು ಭಗವಂತನು ತನ್ನ ಶ್ರೀಮುಖದಿಂದ ತಿಳಿಸಿರುವನು. ಅದನ್ನೇ ಭಗವತ್-ಸಂಬಂಧೀ ಭಾಗವತ ಧರ್ಮವೆಂದು ತಿಳಿ. ॥ ೩೪ ॥ ರಾಜನೇ! ಈ ಭಾಗವತ ಧರ್ಮಗಳನ್ನು ಅವಲಂಬಿಸುವ ಮನುಷ್ಯನು ಎಂದೂ ಯಾವುದೇ ದುಃಖಗಳಿಂದ ಪೀಡಿತನಾಗುವುದಿಲ್ಲ, ಕಣ್ಣುಮುಚ್ಚಿ ಓಡಿದರೂ ಕೂಡ ಅರ್ಥಾತ್ ವಿಧಿ-ವಿಧಾನಗಳಲ್ಲಿ ಕೊರತೆ ಉಂಟಾದರೂ ಮತ್ತೆ ಅವನು ಪತಿತನಾಗಲಾರನು. ಫಲದಿಂದ ವಂಚಿತನೂ ಆಗಲಾರನು. ॥ ೩೫ ॥ ಮನುಷ್ಯನು ತನ್ನ ಶರೀರದಿಂದಾಗಲೀ, ವಾಣಿಯಿಂದಾಗಲೀ, ಮನಸ್ಸಿನಿಂದಾಗಲೀ, ಇಂದ್ರಿಯಗಳಿಂದಾಗಲೀ, ಬುದ್ಧಿಯಿಂದಾಗಲೀ, ಅಹಂಕಾರದಿಂದಾಗಲೀ, ಅಥವಾ ತನ್ನ ಸ್ವಭಾವಕ್ಕನುಸಾರ ಯಾವುದೇ ಕರ್ಮಮಾಡಿದರೂ ಅದೆಲ್ಲವನ್ನು ಪರಾತ್ಪರ ಭಗವಾನ್ ನಾರಾಯಣನಿಗೆ ಅರ್ಪಿಸಿಬಿಡುವುದೇ ಬಹಳ ಸರಳ, ಸುಲಭ ಉಪಾಯವಾಗಿದೆ. ॥ ೩೬ ॥ ಭಗವಂತನಲ್ಲದೆ ಬೇರೆ ವಸ್ತುಗಳಲ್ಲಿ ದೇಹ, ಗೇಹಾದಿಗಳಲ್ಲಿ ಆಸಕ್ತಿ ಇರುವುದರಿಂದಲೇ ಅರ್ಥಾತ್ – ಅಸತ್ ವಸ್ತುವಿನ ಅಸ್ತಿತ್ವವನ್ನು ಒಪ್ಪಿಕೊಂಡು, ಅದರ ಕುರಿತು ಹೆಚ್ಚಿನ ಪ್ರೀತಿ ಇರುವುದರಿಂದಲೇ ಭಯ ಉಂಟಾಗುತ್ತದೆ. ಇಂತಹ ಸ್ಥಿತಿಯಲ್ಲಿ ಅವನು ಪರಮಾತ್ಮನಿಂದ ವಿಮುಖನಾಗುತ್ತಾನೆ. ಅವನು ಭ್ರಮೆಯಿಂದಾಗಿ ಅನಾತ್ಮವಸ್ತುಗಳಲ್ಲಿ ಆತ್ಮಬುದ್ಧಿಯನ್ನಿರಿಸುತ್ತಾನೆ. ಅದರಿಂದಾಗಿ ತನ್ನ ನಿಜಸ್ವರೂಪವನ್ನು ಮರೆಯುತ್ತಾನೆ. ಭಗವಂತನ ಮಾಯೆಯಿಂದಲೇ ಹೀಗಾಗುತ್ತದೆ. ಆದ್ದರಿಂದ ಬುದ್ಧಿವಂತನಾದವನು ಅಜ್ಞಾನದಿಂದ ಬಿಡುಗಡೆ ಹೊಂದಲು ಅನನ್ಯ ಭಕ್ತಿಪೂರ್ವಕ ಓರ್ವ ಪರಮಾತ್ಮನಿಗೇ ಶರಣಾಗಬೇಕು. ಇದಕ್ಕಾಗಿ ಗುರುವಿನಲ್ಲಿ ಭಗವದ್ಬುದ್ಧಿ ಇರಿಸಬೇಕು. ॥ ೩೭ ॥

ಯೇ ವೈ ಭಗವತಾ ಪ್ರೋಕ್ತಾ ಉಪಾಯಾ ಹ್ಯಾತ್ಮಲಬ್ಧಯೇ ।
ಅಂಜಃ ಪುಂಸಾಮವಿದುಷಾಂ ವಿದ್ಧಿ ಭಾಗವತಾನ್ಹಿ ತಾನ್ ॥ ೩೪ ॥

ಯಾನಾಸ್ಥಾಯ ನರೋ ರಾಜನ್ ನ ಪ್ರಮಾದ್ಯೇತ ಕರ್ಹಿಚಿತ್ ।
ಧಾವನ್ನಿಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ ॥ ೩೫ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾಽಽತ್ಮನಾ ವಾನುಸೃತಸ್ವಭಾವಾತ್ ।
ಕರೋತಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತೀ ಸಮರ್ಪಯೇತ್ತತ್ ॥ ೩೬ ॥

ಭಯಂ ದ್ವಿತೀಯಾಭಿನಿವೇಶತಃ ಸ್ಯಾ-
ದೀಶಾದಪೇತಸ್ಯ ವಿಪರ್ಯಯೋಽಸ್ಮೃತಿಃ ।
ತನ್ಮಾಯಯಾತೋ ಬುಧ ಆಭಜೇತ್ತಂ
ಭಕ್ತ್ಯೈಕಯೇಶಂ ಗುರುದೇವತಾತ್ಮಾ ॥ ೩೭ ॥

ಅವಿದ್ಯಮಾನೋಽಪ್ಯವಭಾತಿ ಹಿ ದ್ವಯೋ-
ಧ್ಯಾತುರ್ಧಿಯಾ ಸ್ವಪ್ನಮನೋರಥೌ ಯಥಾ ।
ತತ್ಕರ್ಮಸಂಕಲ್ಪವಿಕಲ್ಪಕಂ ಮನೋ
ಬುಧೋ ನಿರುಂಧ್ಯಾದಭಯಂ ತತಃ ಸ್ಯಾತ್ ॥ ೩೮ ॥

ವಾಸ್ತವದಲ್ಲಿ ಪರಮಾತ್ಮತತ್ತ್ವವೇ ಸತ್ಯವಸ್ತುವಾಗಿದೆ. ಆದರೆ ನಾನಾತ್ವ (ಪ್ರಪಂಚ) ವನ್ನು ಚಿಂತಿಸುವವರಿಗೆ ಆ ವಸ್ತುಗಳ ಚಿಂತನೆಯಿಂದ ಬುದ್ಧಿಯಲ್ಲಿ ಅವುಗಳ ಪ್ರತೀತಿ ಉಂಟಾಗುತ್ತದೆ. ಅವನ್ನೇ ಸತ್ ಎಂದು ಒಪ್ಪಿಕೊಂಡಿದ್ದರಿಂದ ಅಸತ್ ಪದಾರ್ಥಗಳ ಸತ್ತೆಯನ್ನು ಸ್ವೀಕರಿಸುತ್ತಾರೆ. ಆದರೆ ಸ್ವಪ್ನಾವಸ್ಥೆಯ ದೃಶ್ಯಗಳು ಎಚ್ಚರವಾದ ಮೇಲೆ ಅವುಗಳ ಮಿಥ್ಯತ್ವ ಅರಿವಿಗೆ ಬರುತ್ತದೆ, ಹಾಗೆಯೇ ಸಾಂಸಾರಿಕ ವಿಷಯಗಳ ಕುರಿತು ಮಾಡಲಾದ ಜಾಗ್ರತ್ ಅವಸ್ಥೆಯ ಮನೋರಥಗಳೂ ಮಿಥ್ಯೆಯೇ ಆಗಿವೆ. ಆದ್ದರಿಂದ ಬುದ್ಧಿವಂತರಾದವರು ಪ್ರಾಪಂಚಿಕ ಕರ್ಮಗಳ ಸಂಬಂಧದಲ್ಲಿ ಸಂಕಲ್ಪ-ವಿಕಲ್ಪಮಾಡುವ ಅಲೆಯುವ ಮನಸ್ಸನ್ನು ತಡೆಯಬೇಕು. ಹೀಗೆ ಮಾಡುವುದರಿಂದಲೇ ಅವರಿಗೆ ಅಭಯಪದದ ಅರ್ಥಾತ್ ಪರಮಪದದ ಪ್ರಾಪ್ತಿ ಆಗಿಹೋದೀತು. ॥ ೩೮ ॥

ಶೃಣ್ವನ್ ಸುಭದ್ರಾಣಿ ರಥಾಂಗಪಾಣೇ-
ರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ ।
ಗೀತಾನಿ ನಾಮಾನಿ ತದರ್ಥಕಾನಿ
ಗಾಯನ್ ವಿಲಜ್ಜೋ ವಿಚರೇದಸಂಗಃ ॥ ೩೯ ॥

ಜಗತ್ತಿನಲ್ಲಿ ಭಗವಂತನ ಜನ್ಮ-ಕರ್ಮಗಳ ಲೀಲೆಗಳ ಬಹಳ ಮಂಗಲಮಯ ಕಥೆಗಳು ಪ್ರಸಿದ್ಧವಾಗಿವೆ. ಇವನ್ನು ಶ್ರವಣ ಮನನಮಾಡುವುದೇ ಮನಸ್ಸನ್ನು ಭಗವಂತನಲ್ಲಿ ತೊಡಗಿಸುವ ಉಪಾಯವೆಂದು ಹೇಳಲಾಗಿದೆ. ಹಾಗೆಯೇ ಅವನ ಗುಣಗಳನ್ನು, ಲೀಲೆಗಳನ್ನು ಸ್ಮರಣೆಗೆ ತರುವ ಭಗವಂತನ ಅನೇಕ ನಾಮಗಳು ಪ್ರಸಿದ್ಧವಾಗಿವೆ. ಅಂಜಿಕೆ ನಾಚಿಕೆಬಿಟ್ಟು ಅವನ್ನು ಕೊಂಡಾಡುತ್ತಾ ಇರಬೇಕು. ಯಾವುದೇ ವ್ಯಕ್ತಿ, ವಸ್ತು, ಸ್ಥಾನಗಳಲ್ಲಿ ಆಸಕ್ತಿಯನ್ನಿಡಬಾರದು. ॥ ೩೯ ॥

ಏವಂವ್ರತಃ ಸ್ವಪ್ರಿಯನಾಮಕೀರ್ತ್ಯಾ
ಜಾತಾನುರಾಗೋ ದ್ರುತಚಿತ್ತ ಉಚ್ಚೈಃ ।
ಹಸತ್ಯಥೋ ರೋದಿತಿ ರೌತಿ ಗಾಯ-
ತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ ॥ ೪೦ ॥

ಈ ಪ್ರಕಾರ ವಿಶುದ್ಧ ವ್ರತ, ನಿಯಮವನ್ನು ಕೈಗೊಳ್ಳುವವನ ಹೃದಯದಲ್ಲಿ ತನ್ನ ಪರಮಪ್ರಿಯತಮ ಪ್ರಭುವಿನ ನಾಮ-ಕೀರ್ತನೆಯಿಂದ ಭಗವಂತನಲ್ಲಿ ಪ್ರೇಮವು ಅಂಕುರಿಸುತ್ತದೆ. ಅವನ ಚಿತ್ತ ದ್ರವಿತವಾಗುತ್ತದೆ. ಆಗ ಅವನು ಸಾಧಾರಣ ಜನರ ಸ್ಥಿತಿಯಿಂದ ಮೇಲೇರುತ್ತಾನೆ. ಜನರ ಮಾನ್ಯತೆ, ನಂಬಿಕೆಗಳಿಂದ ಅತೀತನಾಗುತ್ತಾನೆ. ದಂಭವಿಲ್ಲದೆ ಸ್ವಾಭಾವಿಕವಾಗಿ ಉನ್ಮತ್ತನಾಗಿ ಕೆಲವೊಮ್ಮೆ ಭಗವಂತನ ಲೀಲೆಗಳನ್ನು ನೋಡುತ್ತಾ ಆನಂದದಲ್ಲಿ ಮುಳುಗಿ ನಗುತ್ತಿರುತ್ತಾನೆ. ಕೆಲವೊಮ್ಮೆ ಗೋಪಿಯರಂತೆ ಪ್ರಭು! ನೀನೆಲ್ಲಿ ಹೋಗಿರುವೆ ? ಎಂದು ಬಿದ್ದು-ಬಿದ್ದು ಅಳುತ್ತಾನೆ. ಕೆಲವೊಮ್ಮೆ ಗಟ್ಟಿಯಾಗಿ ಭಗವಂತನನ್ನು ಕೂಗುತ್ತಾನೆ. ಕೆಲವೊಮ್ಮೆ ಮಧುರವಾಗಿ ಅವನ ಗುಣಗಾನ ಮಾಡುತ್ತಾನೆ. ಕೆಲ-ಕೆಲವೊಮ್ಮೆ ತನ್ನ ಪ್ರಿಯತಮನನ್ನು ಕಣ್ಣುಮುಂದೆ ದರ್ಶಿಸುತ್ತಾ ಉನ್ಮಾದದಿಂದ ನೃತ್ಯವಾಡತೊಡಗುತ್ತಾನೆ. ಈ ಪ್ರಕಾರ ಅವನ ಎಲ್ಲ ಕ್ರಿಯೆಗಳು ಲೋಕವಿಲಕ್ಷಣವಾಗುತ್ತದೆ. ॥ ೪೦ ॥

ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ
ಜ್ಯೋತೀಂಷಿ ಸತ್ತ್ವಾನಿ ದಿಶೋ ದ್ರುಮಾದೀನ್ ।
ಸರಿತ್ಸಮುದ್ರಾಂಶ್ಚ ಹರೇಃ ಶರೀರಂ
ಯತ್ಕಿಂಚ ಭೂತಂ ಪ್ರಣಮೇದನನ್ಯಃ ॥ ೪೧ ॥

ರಾಜನೇ! ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ, ಗ್ರಹ, ನಕ್ಷತ್ರ, ಪ್ರಾಣಿಗಳು, ದಿಕ್ಕುಗಳು, ವೃಕ್ಷ-ವನಸ್ಪತಿ, ನದಿ, ಸಮುದ್ರ ಇವೆಲ್ಲವೂ ಭಗವಂತನ ಶರೀರವಾಗಿದೆ. ಎಲ್ಲ ರೂಪಗಳಲ್ಲಿ ಸ್ವತಃ ಭಗವಂತನೇ ಪ್ರಕಟನಾಗಿದ್ದಾನೆ. ಹೀಗೆ ತಿಳಿದುಕೊಂಡು ಅವನು ತನ್ನ ಮುಂದೆ ಸುಳಿಯುವುದೆಲ್ಲವನ್ನೂ – ಭಗವದ್ಭಾವದಿಂದ ನಮಸ್ಕರಿಸುತ್ತಾನೆ. ॥ ೪೧ ॥

ಭಕ್ತಿಃ ಪರೇಶಾನುಭವೋ ವಿರಕ್ತಿ-
ರನ್ಯತ್ರ ಚೈಷ ತ್ರಿಕ ಏಕಕಾಲಃ ।
ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯು-
ಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋಽನುಘಾಸಮ್ ॥ ೪೨ ॥

ಇತ್ಯಚ್ಯುತಾಂಘ್ರಿಂ ಭಜತೋಽನುವೃತ್ತ್ಯಾ
ಭಕ್ತಿರ್ವಿರಕ್ತಿರ್ಭಗವತ್ಪ್ರಬೋಧಃ ।
ಭವಂತಿ ವೈ ಭಾಗವತಸ್ಯ ರಾಜಂ
ಸ್ತತಃ ಪರಾಂ ಶಾಂತಿಮುಪೈತಿ ಸಾಕ್ಷಾತ್ ॥ ೪೩ ॥

ರಾಜೋವಾಚ

ಅಥ ಭಾಗವತಂ ಬ್ರೂತ ಯದ್ಧರ್ಮೋ ಯಾದೃಶೋ ನೃಣಾಮ್ ।
ಯಥಾ ಚರತಿ ಯದ್ಬ್ರೂತೇ ಯೈರ್ಲಿಂಗೈರ್ಭಗವತ್ಪ್ರಿಯಃ ॥ ೪೪ ॥

ಹರಿರುವಾಚ

ಸರ್ವಭೂತೇಷು ಯಃ ಪಶ್ಯೇದ್ಭಗವದ್ಭಾವಮಾತ್ಮನಃ ।
ಭೂತಾನಿ ಭಗವತ್ಯಾತ್ಮನ್ಯೇಷ ಭಾಗವತೋತ್ತಮಃ ॥ ೪೫ ॥

ಈಶ್ವರೇ ತದಧೀನೇಷು ಬಾಲಿಶೇಷು ದ್ವಿಷತ್ಸು ಚ ।
ಪ್ರೇಮಮೈತ್ರೀಕೃಪೋಪೇಕ್ಷಾ ಯಃ ಕರೋತಿ ಸ ಮಧ್ಯಮಃ ॥ ೪೬ ॥

ಅರ್ಚಾಯಾಮೇವ ಹರಯೇ ಪೂಜಾಂ ಯಃ ಶ್ರದ್ಧಯೇಹತೇ ।
ನ ತದ್ಭಕ್ತೇಷು ಚಾನ್ಯೇಷು ಸ ಭಕ್ತಃ ಪ್ರಾಕೃತಃ ಸ್ಮೃತಃ ॥ ೪೭ ॥

ಗೃಹೀತ್ವಾಪೀಂದ್ರಿಯೈರರ್ಥಾನ್ ಯೋ ನ ದ್ವೇಷ್ಟಿ ನ ಹೃಷ್ಯತಿ ।
ವಿಷ್ಣೋರ್ಮಾಯಾಮಿದಂ ಪಶ್ಯನ್ಸವೈ ಭಾಗವತೋತ್ತಮಃ ॥ ೪೮ ॥

ಊಟಮಾಡುವಾಗ ಪ್ರತಿಯೊಂದು ತುತ್ತಿಗೂ ತುಷ್ಟಿ (ತೃಪ್ತಿ ಅಥವಾ ಸುಖ), ಪುಷ್ಟಿ(ಜೀವನ ಶಕ್ತಿಯ ಸಂಚಾರ), ಕ್ಷುಧಾನಿವೃತ್ತಿ ಇವು ಮೂರು ಒಂದೇ ಬಾರಿಗೆ ಆಗುತ್ತಾ ಇರುತ್ತದೆ. ಹಾಗೆಯೇ ಭಗವಂತನಿಗೆ ಶರಣಾಗಿ ಅವನ ಭಜನೆ ಮಾಡುವವನಿಗೆ, ಭಜನೆಯ ಪ್ರತಿಯೊಂದು ಕ್ಷಣದಲ್ಲಿ ಭಗವಂತನ ಕುರಿತು ಪ್ರೀತಿ, ತನ್ನ ಪ್ರೇಮಾಸ್ಪದ ಪ್ರಭುವಿನ ಸ್ವರೂಪದ ಅನುಭವ ಹಾಗೂ ಅವನಲ್ಲದ ಇತರ ವಸ್ತುಗಳಲ್ಲಿ ವೈರಾಗ್ಯ ಇವು ಮೂರು ಒಂದೇ ಬಾರಿಗೆ ಪ್ರಾಪ್ತಿಯಾಗುತ್ತವೆ. ॥ ೪೨ ॥ ರಾಜನೇ! ಈ ವಿಧವಾಗಿ ಪ್ರತಿಕ್ಷಣ ಪ್ರತಿಯೊಂದು ವೃತ್ತಿಯ ಮೂಲಕ ಭಗವಂತನ ಚರಣ ಕಮಲಗಳನ್ನು ಭಜಿಸುವವನಿಗೆ ಭಗವಂತನ ಕುರಿತು ಪ್ರೇಮಮಯ ಭಕ್ತಿ , ಪ್ರಪಂಚದ ಕುರಿತು ವೈರಾಗ್ಯ, ತನ್ನ ಪ್ರಿಯತಮ ಭಗವಂತನ ಸ್ವರೂಪದ ಜ್ಞಾನ ಇವೆಲ್ಲವೂ ಅವಶ್ಯವಾಗಿ ಉಂಟಾಗುತ್ತವೆ. ಅವನು ಭಾಗವತನಾಗಿ ಹೋಗುತ್ತಾನೆ. ಇವೆಲ್ಲವೂ ಪ್ರಾಪ್ತವಾದಾಗ ಅವನು ಪರಮಶಾಂತಿಯನ್ನು ಅನುಭವಿಸತೊಡಗುವನು. (ಆದ್ದರಿಂದ ಶ್ರೇಯೋಕಾಮಿ ಮನುಷ್ಯನು ಭಗವಂತನಿಗೆ ಶರಣಾಗಬೇಕು. ಇದು ಸರ್ವೋತ್ತಮ ಸರಳ ಸಾಧನೆಯಾಗಿದೆ.) ॥ ೪೩ ॥

**ರಾಜಾ ನಿಮಿಯು ಕೇಳಿದನು** – ಯೋಗೀಶ್ವರರೇ! ಈಗ ನೀವು ದಯಮಾಡಿ ಭಗವದ್ಭಕ್ತನ ಲಕ್ಷಣಗಳನ್ನು ವರ್ಣಿಸಿರಿ. ಅವನ ಧರ್ಮವೇನು ? ಅವನ ಸ್ವಭಾವ ಹೇಗಿರುತ್ತದೆ. ಅವನು ಇತರ ರೊಂದಿಗೆ ವ್ಯವಹರಿಸುವಾಗ ಅವನ ಆಚರಣೆ ಹೇಗೆ ಇರುತ್ತದೆ? ಹೇಗೆ ಮಾತಾಡುತ್ತಾನೆ? ಯಾವ ಲಕ್ಷಣಗಳಿಂದ ಅವನು ಭಗವಂತನಿಗೆ ಪ್ರಿಯನಾಗಿರುತ್ತಾನೆ? ॥ ೪೪ ॥

**ಒಂಭತ್ತು ಯೋಗೀಶ್ವರರಲ್ಲಿ ಎರಡನೆಯವರಾದ ಹರಿಯೋಗಿಗಳು ಇಂತೆಂದರು** – ರಾಜನೇ! ಎಲ್ಲಕ್ಕಿಂತ ಶ್ರೇಷ್ಠ ಭಗವದ್ಭಕ್ತನ ಲಕ್ಷಣಗಳನ್ನು ಹೇಳುತ್ತೇನೆ; ಕೇಳು. ಸಮಸ್ತ ಪ್ರಾಣಿಗಳಲ್ಲಿ ಒಂದೇ ಆತ್ಮನಿರುವನು ಎಂದು ಭಾವಿಸಿ, ಭಗವಂತನ ಸತ್ತೆಯನ್ನು ನೋಡುವವನು, ಸಮಸ್ತ ಪ್ರಾಣಿಗಳನ್ನು ಆತ್ಮಸ್ವರೂಪೀ ಭಗವಂತನಲ್ಲಿ ನೋಡುವವನು ಉತ್ತಮ ಭಾಗವತನಾಗಿದ್ದಾನೆ. ಆದರೆ ಭಗವಂತನಲ್ಲಿ ಪ್ರೇಮವನ್ನಿರಿಸಿ, ಅವನ ಭಕ್ತರಲ್ಲಿ ಸಖಿತನವಿರಿಸುತ್ತಾ, ದುಃಖಿತರ, ಅಜ್ಞಾನಿಗಳ ಮೇಲೆ ದಯೆವಿರಿಸುತ್ತಾ, ಇದ್ದರೂ ಭಗವಂತನನ್ನು ದ್ವೇಷಿಸುವವನನ್ನು ಉಪೇಕ್ಷಿಸುವವನು ಮಧ್ಯಮ ದರ್ಜೆಯ ಭಕ್ತನಾಗಿದ್ದಾನೆ. ॥ ೪೫-೪೬ ॥ ಇದರಿಂದ ಬೇರೆಯಾಗಿ ಭಗವಂತನ ಅರ್ಚಾ-ವಿಗ್ರಹ-ಮೂರ್ತಿಗಳ ಪೂಜೆಯನ್ನೇನೋ ಶ್ರದ್ಧೆಯಿಂದ ಮಾಡುತ್ತಾನೆ, ಆದರೆ ಭಗವಂತನ ಭಕ್ತರಲ್ಲೇ ಅವನಿಗೆ ಶ್ರದ್ಧೆ ಇಲ್ಲ– ಎಂದಾಗ ಬೇರೆ ಜನರಲ್ಲಾದರೋ ಶ್ರದ್ಧೆ ಹೇಗೆ ಉಂಟಾದೀತು? ಇಂತಹವನು ಪ್ರಾಕೃತನಾಗಿದ್ದಾನೆ. ಅವನು ಕೆಳದರ್ಜೆಯ ಭಕ್ತನಾಗಿದ್ದಾನೆ. ॥ ೪೭ ॥

ಗುಣಾತೀತ ಅವಸ್ಥೆಯನ್ನು ವರ್ಣಿಸುತ್ತಾ ಹೇಳುತ್ತಾರೆ – ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸುತ್ತಾ, ಅವು ಬಂದು ಹೋಗುವುದರಲ್ಲಿ ಹರ್ಷಿತನಾಗುವುದಿಲ್ಲ, ಅವುಗಳನ್ನು ದ್ವೇಷಿಸುವುದೂ ಇಲ್ಲ, ಈ ವಿಶ್ವವನ್ನು ಭಗವಂತನ ಮಾಯೆಯೆಂದು ತಿಳಿಯುವವನು ಉತ್ತಮ ಭಾಗವತನಾಗಿದ್ದಾನೆ. ॥ ೪೮ ॥

ದೇಹೇಂದ್ರಿಯ ಪ್ರಾಣಮನೋಧಿಯಾಂ ಯೋ
ಜನ್ಮಾಪ್ಯಯಕ್ಷುದ್ಭಯತರ್ಷಕೃಚ್ಛ್ರೈಃ ।
ಸಂಸಾರಧರ್ಮೈರವಿಮುಹ್ಯಮಾನಃ
ಸ್ಮೃತ್ಯಾ ಹರೇರ್ಭಾಗವತಪ್ರಧಾನಃ ॥ ೪೯ ॥

ನ ಕಾಮಕರ್ಮಬೀಜಾನಾಂ ಯಸ್ಯ ಚೇತಸಿ ಸಂಭವಃ ।
ವಾಸುದೇವೈಕನಿಲಯಃ ಸ ವೈ ಭಾಗವತೋತ್ತಮಃ ॥ ೫೦ ॥

ನ ಯಸ್ಯ ಜನ್ಮ ಕರ್ಮಭ್ಯಾಂ ನ ವರ್ಣಾಶ್ರಮಜಾತಿಭಿಃ ।
ಸಜ್ಜತೇಽಸ್ಮಿನ್ನಹಂಭಾವೋ ದೇಹೇ ವೈ ಸ ಹರೇಃ ಪ್ರಿಯಃ ॥ ೫೧ ॥

ನ ಯಸ್ಯ ಸ್ವಃ ಪರ ಇತಿ ವಿತ್ತೇಷ್ವಾತ್ಮನಿ ವಾ ಭಿದಾ ।
ಸರ್ವಭೂತಸಮಃ ಶಾಂತಃ ಸ ವೈ ಭಾಗವತೋತ್ತಮಃ ॥ ೫೨ ॥

ತ್ರಿಭುವನವಿಭವಹೇತವೇಽಪ್ಯಕುಂಠ-
ಸ್ಮೃತಿರಜಿತಾತ್ಮ ಸುರಾದಿಭಿರ್ವಿಮೃಗ್ಯಾತ್ ।
ನ ಚಲತಿ ಭಗವತ್ಪದಾರವಿಂದಾ-
ಲ್ಲವನಿಮಿಷಾರ್ಧಮಪಿ ಯಃ ಸ ವೈಷ್ಣವಾಗ್ರ್ಯಃ ॥ ೫೩ ॥

ಭಗವತ ಉರುವಿಕ್ರಮಾಂಘ್ರಿಶಾಖಾ-
ನಖಮಣಿಚಂದ್ರಿಕಯಾ ನಿರಸ್ತತಾಪೇ ।
ಹೃದಿ ಕಥಮುಪಸೀದತಾಂ ಪುನಃ ಸ
ಪ್ರಭವತಿ ಚಂದ್ರ ಇವೋದಿತೇಽರ್ಕತಾಪಃ ॥ ೫೪ ॥

ಜನ್ಮ - ಮೃತ್ಯು, ಹಸಿವು - ಬಾಯಾರಿಕೆ, ಭಯ, ಕಷ್ಟ ಮುಂತಾದ ಪ್ರಾಪಂಚಿಕ ಧರ್ಮಗಳು ದೇಹ, ಇಂದ್ರಿಯ, ಪ್ರಾಣ, ಮನ, ಬುದ್ಧಿ ಇವುಗಳಲ್ಲಿ ಬಂದುಹೋಗುತ್ತಾ ಇರುತ್ತವೆ. ಆದರೆ ಭಗವಂತನ ಸ್ಮೃತಿಯಲ್ಲಿ ನಿಮಗ್ನನಾಗಿದ್ದು, ಅವುಗಳಿಂದ ಬಾಧಿತನಾಗದ ಭಗವದ್ಭಕ್ತನು ಉತ್ತಮ ಶ್ರೇಣಿಯ ಭಕ್ತನಾಗಿದ್ದಾನೆ. ಮನಸ್ಸಿನಲ್ಲಿ ವಿಷಯ-ಭೋಗಗಳ ಇಚ್ಛೆ ಕರ್ಮ ಪ್ರವೃತ್ತಿ , ಅವುಗಳ ಬೀಜ ವಾಸನೆಗಳು ಉಂಟಾಗದಿರುವವನು, ಏಕಮಾತ್ರ ಭಗವಾನ್ ವಾಸುದೇವನಲ್ಲೇ ವಾಸಿಸುವವನು ಉತ್ತಮ ಭಗವದ್ಭಕ್ತನಾಗಿರುವನು. ॥ ೪೯-೫೦ ॥ ಆ ಭಕ್ತನು ಜನ್ಮ ಹಾಗೂ ಕರ್ಮದಿಂದಾಗಿ ಅಥವಾ ವರ್ಣ, ಆಶ್ರಮ, ಜಾತಿಯಿಂದಾಗಿ ಅಥವಾ ಶರೀರದಿಂದಾಗಿ ಎಲ್ಲಿಯೂ ಅಹಂತೆ, ಮಮತೆ ಇಡುವುದಿಲ್ಲ ಮತ್ತು ಇವೆಲ್ಲದರಲ್ಲಿ ಆಸಕ್ತನಾಗಿರುವುದಿಲ್ಲ. ಇಂತಹವನು ಭಗವಂತನಿಗೆ ನಿಶ್ಚಯವಾಗಿ ಬಹು ಪ್ರಿಯನಾಗಿರುವನು. ॥ ೫೧ ॥ ಧನ, ಶರೀರಾದಿಗಳಲ್ಲಿ ಆಸಕ್ತಿ ಇಲ್ಲದವನು 'ಇದು ನನ್ನದು, ಇದು ಪರರದು' ಈ ಪ್ರಕಾರದ ಭೇದವಿರಿಸುವುದಿಲ್ಲ. ಅವನು ಸರ್ವತ್ರ ಸಮಭಾವದಿಂದ ಏಕಮಾತ್ರ ಪರಮಾತ್ಮನನ್ನೇ ನೋಡುವನು. ಯಾವುದೇ ಘಟನೆ ಅಥವಾ ಸಂಕಲ್ಪದಿಂದ ವಿಕ್ಷಿಪ್ತನಾಗದೆ ಸದಾಕಾಲ ಶಾಂತವಾಗಿರುತ್ತಾನೆ. ಅವನು ಖಂಡಿತವಾಗಿಯೇ ಭಗವಂತನ ಉತ್ತಮ ಭಕ್ತನಾಗಿದ್ದಾನೆ. ॥ ೫೨ ॥ ರಾಜನೇ! ದೊಡ್ಡ-ದೊಡ್ಡ ದೇವತೆ ಮುಂತಾದವರೂ ಕೂಡ ತಮ್ಮ ಮನಸ್ಸು, ಶರೀರ, ಇಂದ್ರಿಯಗಳನ್ನು ತಮ್ಮ ವಶಪಡಿಸಿಕೊಳ್ಳದೆ, ಭಗವಂತನ ಆ ಚರಣಾರವಿಂದಗಳನ್ನು ಹುಡುಕುತ್ತಲೇ ಇರುತ್ತಾರೆ. ಆದರೆ ಅವರೂ ಕೂಡ ಭಗವತ್‌ಕೃಪೆಯಿಲ್ಲದೆ ಅವನ್ನು ಪಡೆಯಲಾರರು. ಆದರೆ ಭಗವಂತನ ಪ್ರೇಮೀಭಕ್ತನ ಚಿತ್ತ ನಿರಂತರ ಆ ಚರಣಗಳ ಸನ್ನಿಧಿಯಲ್ಲಿ ಹಾಗೂ ಸೇವೆಯಲ್ಲಿ ತೊಡಗಿರುತ್ತದೆ. ಅವನಿಗೆ ಯಾರಾದರೂ ಮೂರುಲೋಕದ ರಾಜ್ಯಲಕ್ಷ್ಮಿಯ ಪ್ರಲೋಭನೆ ಒಡ್ಡಿದರೂ ಅವನು ಭಗವತ್ ಸ್ಮೃತಿಯಿಂದ ವಿಚಲಿತನಾಗುವುದಿಲ್ಲ. ಏನೇ ಹೇಳಲೀ, ಅವನು ಆ ರಾಜ್ಯಲಕ್ಷ್ಮಿಯ ಕಡೆಗೆ ಗಮನವನ್ನೇ ಕೊಡುವುದಿಲ್ಲ. ಇಂತಹ ಭಕ್ತನಿಗಾಗಿ ಭಗವಂತನು ಅರೆಕ್ಷಣವೂ ಮರೆಯಾಗುವುದಿಲ್ಲ. ಅವನೂ ಕೂಡ ಭಗವಂತನಿಂದ ಮರೆಯಾಗುವುದಿಲ್ಲ. ಇಂತಹ ಭಗವದ್ಭಕ್ತನು ವೈಷ್ಣವರಲ್ಲಿ ಅಗ್ರಗಣ್ಯನಾಗಿದ್ದಾನೆ. ಎಲ್ಲರಿಂದ ಶ್ರೇಷ್ಠನಾಗಿದ್ದಾನೆ. ॥ ೫೩ ॥ ಭಗವಂತನ ಪರಾಕ್ರಮ ಅಸೀಮವಾಗಿದೆ. ಇಂತಹ ಆ ಪ್ರಭುವಿನ ಪಾದನಖಚಂದ್ರಿಕೆಯಿಂದ ಶರಣಾಗತ ಭಕ್ತರ ಹೃದಯದ ಸಂತಾಪವು ಒಮ್ಮೆಗೇ ದೂರವಾಗಿಹೋಗುತ್ತದೆ. ಆ ಭಕ್ತನು ಭಗವಂತನ ಭಕ್ತಿಯಲ್ಲೇ ಆನಂದಿತನಾಗಿರುತ್ತಾನೆ. ಭಗವಂತನ ಚರಣಗಳಲ್ಲಿ ಅನನ್ಯ ಶರಣಾಗತಿಯ ಹೊರತು ಅವನು ಎಲ್ಲಿಗೂ ಹೋಗಲಾರನು. ಚಂದ್ರೋದಯವಾದ ಬಳಿಕ ಸೂರ್ಯನ ಪ್ರಖರ ತಾಪ ಬಾಧಿಸದಂತೆ, ಅವನನ್ನು ಕಾಮ, ಕ್ರೋಧಾದಿ ಶತ್ರುಗಳು ಮತ್ತೆ ಪ್ರಭಾವಿತನನ್ನಾಗಿಸಲಾರವು. ॥ ೫೪ ॥

ವಿಸೃಜತಿ ಹೃದಯಂ ನ ಯಸ್ಯ ಸಾಕ್ಷಾ-
ದ್ಧರಿರವಶಾಭಿಹಿತೋಽಪ್ಯಘೌಘನಾಶಃ ।
ಪ್ರಣಯರಶನಯಾ ಧೃತಾಂಘ್ರಿಪದ್ಮಃ
ಸ ಭವತಿ ಭಾಗವತಪ್ರಧಾನ ಉಕ್ತಃ ॥ ೫೫ ॥

ಭಗವಂತನ ನಾಮವನ್ನು ವಿವಶನಾಗಿ ಉಚ್ಚರಿಸಿದರೂ ಕೂಡ ಭಗವಂತನು ಅವನ ಸಂಪೂರ್ಣ ಪಾಪರಾಶಿಯನ್ನು ತತ್‌ಕಾಲವೇ ನಾಶಮಾಡಿಬಿಡುತ್ತಾನೆ. ಅಂತಹ ಸ್ವಯಂ ಭಗವಾನ್ ಶ್ರೀಹರಿಯು ಅವನ ಹೃದಯದಿಂದ ಒಂದು ಕ್ಷಣವೂ ಅಗಲುವುದಿಲ್ಲ, ಏಕೆಂದರೆ, ಅವನು ಪ್ರೇಮಸೂತ್ರದಿಂದ ಅವನ ಚರಣಕಮಲಗಳನ್ನು ಗಟ್ಟಿಯಾಗಿ ಕಟ್ಟಿ ಇಟ್ಟಿರುವನು. ನಿಜವಾಗಿ ಇಂತಹವನೇ ಭಗವಂತನ ಭಕ್ತರಲ್ಲಿ ಅಗ್ರೇಸರನಾಗಿರುವನು. ಅವನೇ ಮಹಾಪುರುಷನಾಗಿದ್ದಾನೆ. ॥ ೫೫ ॥

ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಮಾಯೆ, ಮಾಯೆಯಿಂದ ಪಾರಾಗುವ ಉಪಾಯ – ಬ್ರಹ್ಮ ಹಾಗೂ ಕರ್ಮಯೋಗದ ನಿರೂಪಣೆ

*ರಾಜೋವಾಚ*

ಪರಸ್ಯ ವಿಷ್ಣೋರೀಶಸ್ಯ ಮಾಯಿನಾಮಪಿ ಮೋಹಿನೀಮ್ ।
ಮಾಯಾಂ ವೇದಿತುಮಿಚ್ಛಾಮೋ ಭಗವಂತೋ ಬ್ರುವಂತು ನಃ ॥ ೧ ॥

ನಾನುತೃಪ್ಯೇ ಜುಷನ್ಯುಷ್ಮದ್ವಚೋ ಹರಿಕಥಾಮೃತಮ್ ।
ಸಂಸಾರತಾಪನಿಸ್ತಪ್ತೋ ಮರ್ತ್ಯಸ್ತತ್ತಾಪಭೇಷಜಮ್ ॥ ೨ ॥

**ರಾಜಾ ನಿಮಿಯು ಕೇಳಿದನು –** ಭಗವನ್ ! ಸರ್ವಶಕ್ತಿಸಂಪನ್ನ ಪರಮಕಾರಣ ಭಗವಾನ್ ವಿಷ್ಣುವಿನ ಮಾಯೆಯು ಬ್ರಹ್ಮದೇವರಿಂದ ಹಿಡಿದು ಸಮಸ್ತ ಜೀವಿಗಳನ್ನೂ ಮೋಹಿಸುತ್ತದೆ. ಅದರ ನಿಜರೂಪವನ್ನು ಯಾರೂ ತಿಳಿಯಲಾರರು. ನಾನು ಪ್ರಭುವಿನ ಮಾಯೆಯ ಸ್ವರೂಪವನ್ನು ತಿಳಿಯಬಯಸುತ್ತೇನೆ. ಕೃಪೆದೋರಿ ನನಗೆ ತಿಳಿಸುವರಾಗಿರಿ. ॥ ೧ ॥ ಈ ಮನುಷ್ಯನು ಪ್ರಪಂಚದ ತ್ರಿತಾಪದಿಂದ ಬೇಯುತ್ತಿದ್ದಾನೆ. ಇಂತಹ ತಾಪದಿಂದ ಬಿಡುಗಡೆ ಹೊಂದಲು ಭಗವಂತನ ಅಮೃತಮಯ ಹರಿಕಥೆಯೇ ಏಕಮಾತ್ರ ಪರಮೌಷಧವಾಗಿದೆ. ನಿಮ್ಮ ಮೂಲಕ ಭಗವತ್‌ಕಥಾಮೃತವನ್ನು ಪಾನಮಾಡುತ್ತಿದ್ದರೂ ನಮಗೆ ತೃಪ್ತಿಯಾಗುತ್ತಿಲ್ಲ, ಇನ್ನೂ-ಮತ್ತೂ ಕೇಳುವ ಉತ್ಕಂಠತೆ ಹೆಚ್ಚುತ್ತಾ ಹೋಗುತ್ತದೆ. ॥ ೨ ॥

*ಅಂತರಿಕ್ಷ ಉವಾಚ*

ಏಭಿರ್ಭೂತಾನಿ ಭೂತಾತ್ಮಾ ಮಹಾಭೂತೈರ್ಮಹಾಭುಜ ।
ಸಸರ್ಜೋಚ್ಚಾವಚಾನ್ಯಾದ್ಯಃ ಸ್ವಮಾತ್ರಾತ್ಮಪ್ರಸಿದ್ಧಯೇ ॥ ೩ ॥

ಏವಂ ಸೃಷ್ಟಾನಿ ಭೂತಾನಿ ಪ್ರವಿಷ್ಟಃ ಪಂಚಧಾತುಭಿಃ ।
ಏಕಧಾ ದಶಧಾಽಽತ್ಮಾನಂ ವಿಭಜನ್ ಜುಷತೇ ಗುಣಾನ್ ॥ ೪ ॥

**ಮೂರನೇಯ ಅಂತರಿಕ್ಷ ಯೋಗೀಶ್ವರರು ಹೇಳಿದರು –** ಮಹಾಬಾಹುವೇ ! ಆದಿಪುರುಷ ಭಗವಾನ್ ನಾರಾಯಣನು ಸರ್ವಪ್ರಾಣಿಗಳ ಆತ್ಮಾ ಆಗಿದ್ದಾನೆ. ಅವನೇ ಈ ಪಂಚಭೂತಗಳಿಂದ ಸಣ್ಣ-ದೊಡ್ಡ ಎಲ್ಲ ರೀತಿಯ ಪ್ರಾಣಿಗಳನ್ನು ಸೃಷ್ಟಿಸಿದನು ಹಾಗೂ ತಾನೇ ಸ್ವತಃ ವಿಷಯಭೋಗ ಪ್ರದಾನ ಮಾಡಲು ಅನೇಕ ವಿಧದಿಂದ ಸಾಮಗ್ರಿಯನ್ನೂ ಪ್ರಸ್ತುತಪಡಿಸಿದನು. ತನ್ನ ಆತ್ಮಸ್ವರೂಪದ ಜ್ಞಾನದ ವಿಸ್ತಾರಕ್ಕಾಗಿ ಅವನು ಸ್ವಯಂ ಅನೇಕ ರೂಪಗಳನ್ನು ಧರಿಸಿದನು. ಈ ಪ್ರಕಾರ ಸಮಸ್ತ ಸೃಷ್ಟಿ ಏಕಮಾತ್ರ ಪರಮಾತ್ಮನದ್ದೇ ಸ್ವರೂಪವಾಗಿದೆ. ॥ ೩ ॥ ಈ ವಿಧದಿಂದ ಪರಮಾತ್ಮನು ಎಲ್ಲ ಪ್ರಾಣಿಗಳನ್ನು ನಿರ್ಮಿಸಿ, ಪಂಚಮಹಾಭೂತಗಳಿಂದ ಉಂಟಾದ ಆ ಶರೀರಗಳಲ್ಲಿ ಅಂತರ್ಯಾಮಿಯಾಗಿ ಸ್ವತಃ ಪ್ರವಿಷ್ಟನಾದನು. ಒಂದು ಮನಸ್ಸು ಮತ್ತು ಹತ್ತು ಇಂದ್ರಿಯಗಳ ಮೂಲಕ ತನ್ನನ್ನೇ ವಿಭಕ್ತನನ್ನಾಗಿಸಿ, ಸ್ವಯಂ ಆ ಗುಣಗಳನ್ನು ಉಪಭೋಗಿಸುತ್ತಾನೆ. ಆದರೆ ಅವನು ಆ ಗುಣಗಳಲ್ಲಿ ಆಸಕ್ತನಾಗುವುದಿಲ್ಲ, ತನ್ನ ಮೂಲಕವೇ ಪ್ರಕಾಶಿತವಾದ ಈ ಗುಣಗಳೇ

ಗುಣೈರ್ಗುಣಾನ್ ಸ ಭುಂಜಾನ ಆತ್ಮಪ್ರದ್ಯೋತಿತೈಃ ಪ್ರಭುಃ ।
ಮನ್ಯಮಾನ ಇದಂ ಸೃಷ್ಟಮಾತ್ಮಾನಮಿಹ ಸಜ್ಜತೇ
॥ ೫ ॥

ಕರ್ಮಾಣಿ ಕರ್ಮಭಿಃ ಕುರ್ವನ್ಸನಿಮಿತ್ತಾನಿ ದೇಹಭೃತ್ ।
ತತ್ತತ್ಕರ್ಮಫಲಂ ಗೃಹ್ಣನ್ಭ್ರಮತೀಹ ಸುಖೇತರಮ್
॥ ೬ ॥

ಇತ್ಥಂ ಕರ್ಮಗತೀರ್ಗಚ್ಛನ್ ಬಹ್ವಭದ್ರವಹಾಃ ಪುಮಾನ್ ।
ಆಭೂತಸಂಪ್ಲವಾತ್ ಸರ್ಗಪ್ರಲಯಾವಶ್ನುತೇಽವಶಃ
॥ ೭ ॥

ಧಾತೂಪಪ್ಲವ ಆಸನ್ನೇ ವ್ಯಕ್ತಂ ದ್ರವ್ಯಗುಣಾತ್ಮಕಮ್ ।
ಅನಾದಿನಿಧನಃ ಕಾಲೋ ಹ್ಯವ್ಯಕ್ತಾಯಾಪಕರ್ಷತಿ
॥ ೮ ॥

ಶತವರ್ಷಾ ಹ್ಯನಾವೃಷ್ಟಿರ್ಭವಿಷ್ಯತ್ಯುಲ್ಬಣಾ ಭುವಿ ।
ತತ್ಕಾಲೋಪಚಿತೋಷ್ಣಾರ್ಕೋ ಲೋಕಾಂಸ್ತ್ರೀನ್ ಪ್ರತಪಿಷ್ಯತಿ
॥ ೯ ॥

ಪಾತಾಲತಲಮಾರಭ್ಯ ಸಂಕರ್ಷಣಮುಖಾನಲಃ ।
ದಹನ್ನೂರ್ಧ್ವಶಿಖೋ ವಿಷ್ವಗ್ವರ್ಧತೇ ವಾಯುನೇರಿತಃ
॥ ೧೦ ॥

ಸಾಂವರ್ತಕೋ ಮೇಘಗಣೋ ವರ್ಷತಿ ಸ್ಮ ಶತಂ ಸಮಾಃ ।
ಧಾರಾಭಿರ್ಹಸ್ತಿಹಸ್ತಾಭಿರ್ಲೀಯತೇ ಸಲಿಲೇ ವಿರಾಟ್
॥ ೧೧ ॥

ತತೋ ವಿರಾಜಮುತ್ಸೃಜ್ಯ ವೈರಾಜಃ ಪುರುಷೋ ನೃಪ ।
ಅವ್ಯಕ್ತಂ ವಿಶತೇ ಸೂಕ್ಷ್ಮಂ ನಿರಿಂಧನ ಇವಾನಲಃ
॥ ೧೨ ॥

ವಾಯುನಾ ಹೃತಗಂಧಾ ಭೂಃ ಸಲಿಲತ್ವಾಯ ಕಲ್ಪತೇ ।
ಸಲಿಲಂ ತದ್ಧೃತರಸಂ ಜ್ಯೋತಿಷ್ಟ್ವಾಯೋಪಕಲ್ಪತೇ
॥ ೧೩ ॥

ಹೃತರೂಪಂ ತು ತಮಸಾ ವಾಯೌ ಜ್ಯೋತಿಃ ಪ್ರಲೀಯತೇ ।
ಹೃತಸ್ಪರ್ಶೋಽವಕಾಶೇನ ವಾಯುರ್ನಭಸಿ ಲೀಯತೇ
॥ ೧೪ ॥

ಗುಣಗಳಲ್ಲಿ ವರ್ತಿಸುತ್ತವೆ. ಆದರೆ ಜೀವಿಯು ಅವನಿಂದ ನಿರ್ಮಿಸಲ್ಪಟ್ಟ ಪ್ರಪಂಚದಲ್ಲಿ ಆತ್ಮಬುದ್ಧಿಯನ್ನಿರಿಸಿ, 'ಇದೆಲ್ಲವೂ ನಾನೇ ಆಗಿದ್ದೇನೆ, ನನ್ನದೇ ಆಗಿದೆ' ಎಂಬ ಸಂಬಂಧವನ್ನು ಜೋಡಿಸಿಕೊಂಡು, ತನ್ನಲ್ಲಿ ಕರ್ತೃತ್ವ-ಭೋಕ್ತೃತ್ವವನ್ನು ಆರೋಪಿಸಿಕೊಂಡು ಅವನು ಬಂಧಿತ ನಾಗುವನು. ಇದೇ ಮಾಯೆ ಆಗಿದೆ. ॥ ೪-೫ ॥ ಈ ಪ್ರಕಾರ ದೇಹಾಭಿಮಾನಿ ಮನುಷ್ಯನು ಕರ್ಮೇಂದ್ರಿಯಗಳಿಂದ ಕರ್ಮಗಳನ್ನು ಸಕಾಮಭಾವದಿಂದ ಮಾಡುತ್ತಾ ಆಯಾಯಾ ಕರ್ಮಗಳನುಸಾರ ಫಲವನ್ನು ಭೋಗಿಸುತ್ತಾನೆ ಹಾಗೂ ಸುಖ ದುಃಖಗಳಲ್ಲಿ ಸಿಕ್ಕಿಹಾಕಿಕೊಂಡು ಜನ್ಮ-ಮರಣಗಳ ಸುಳಿಯಲ್ಲಿ ಅಲೆಯುತ್ತಾ ಇರುತ್ತಾನೆ. ಅವನು ಇದರಿಂದ ಮುಕ್ತನಾಗುವುದಿಲ್ಲ. ॥ ೬ ॥ ಹೀಗೆ ಈ ಜೀವಿಯು ಅಹಂಭಾವದ ಕಾರಣವೇ ಅನೇಕ ಅಮಂಗಳ ಗತಿಗಳನ್ನು ಹೊಂದುತ್ತಾ ಇರುತ್ತಾನೆ. ಮಹಾಪ್ರಳಯದವರೆಗೂ ಹುಟ್ಟಿದ ಬಳಿಕ ಮೃತ್ಯು, ಮೃತ್ಯುವಿನ ಬಳಿಕ ಜನ್ಮ ಹೀಗೆ ಪರವಶನಾಗಿ ಹುಟ್ಟು-ಸಾವಿನ ಚಕ್ರದಲ್ಲಿ ಯಾವಾಗಲೂ ಸುತ್ತುತ್ತಾ ಇರುತ್ತಾನೆ. ಇದೆಲ್ಲವೂ ಭಗವಂತನ ಮಾಯೆಯಾಗಿದೆ. ॥ ೭ ॥ ಪಂಚಮಹಾಭೂತಗಳ ಪ್ರಳಯದ ಸಮಯ ಸಮೀಪಿಸಿದಾಗ ಅನಾದಿ ಹಾಗೂ ಅನಂತ ಕಾಲನೇ ಸ್ಥೂಲ, ಸೂಕ್ಷ್ಮ ದ್ರವ್ಯ, ಗುಣರೂಪೀ ಈ ಸಮಸ್ತ ದೃಶ್ಯಪ್ರಪಂಚವನ್ನು ಅವ್ಯಕ್ತದ ಕಡೆಗೆ ಅರ್ಥಾತ್ ತನ್ನ ಮೂಲಪ್ರಕೃತಿಯಲ್ಲಿ ಸೆಳೆದುಕೊಳ್ಳುವನು. ಅಂದರೆ ಎಲ್ಲವನ್ನೂ ತನ್ನಲ್ಲಿ ಲೀನಗೊಳಿಸಿಕೊಳ್ಳುವನು. ಆಗ ಒಂದೇ ಸವನೆ ನೂರುವರ್ಷ ಭಯಂಕರ ಕ್ಷಾಮತಲೆದೋರಿ, ಭೂಮಿಯಲ್ಲಿ ಭಾರೀ ಉಷ್ಣತೆ ಬೆಳೆಯುತ್ತದೆ. ಆ ಹೆಚ್ಚಾದ ಉಷ್ಣತೆಯಿಂದ ಮೂರೂ ಲೋಕಗಳು ಸುಡಲು ತೊಡಗುತ್ತವೆ. ॥ ೮-೯ ॥ ಆಗಲೇ ಸಂಕರ್ಷಣನ ಮುಖದಿಂದ ಪ್ರಚಂಡ ಅಗ್ನಿಜ್ವಾಲೆಗಳು ಹೊರಬೀಳುತ್ತವೆ. ವಾಯುವಿನ ಪ್ರೇರಣೆಯಿಂದ ಆ ಜ್ವಾಲೆಗಳು ಪಾತಾಳದಿಂದ ಸುಡಲು ಪ್ರಾರಂಭಿಸುತ್ತವೆ ಹಾಗೂ ಅತಿ ಎತ್ತರಕ್ಕೆ ಬೆಳೆಯುತ್ತಾ ಎಲ್ಲೆಡೆ ಹರಡಿಕೊಂಡು ಇಡೀ ವಿಶ್ವವನ್ನು ಸುಡಲು ತೊಡಗುತ್ತವೆ. ॥ ೧೦ ॥ ಆ ಪ್ರಚಂಡ ಉಷ್ಣತೆಯ ಪರಿಣಾಮವಾಗಿ ನೂರು ವರ್ಷಗಳವರೆಗೆ ಪ್ರಳಯಕಾಲದ ಸಂವರ್ತಕ ಮೇಘಗಳು ಆನೆಯ ಸೊಂಡಿಲಿನ ಗಾತ್ರದ ಭಾರೀ ಮಳೆ ಸುರಿಸುತ್ತವೆ. ಆಗ ಈ ವಿರಾಟ್ ವಿಶ್ವವು ನೀರಿನಲ್ಲಿ ಮುಳುಗಿಹೋಗುತ್ತದೆ. ॥ ೧೧ ॥ ಎಲೈ ರಾಜನೇ! ಉರವಲು ಮುಗಿದಾಗ ಅಗ್ನಿಯು ತನ್ನ ಅವ್ಯಕ್ತ ಸ್ವರೂಪದಲ್ಲಿ ಲೀನವಾಗುವಂತೆ, ಈ ವಿರಾಟ್ ಸ್ವರೂಪವುಳ್ಳ ಪರಮಾತ್ಮನು ತನ್ನ ವಿರಾಟ್ ಶರೀರವನ್ನು ತ್ಯಜಿಸಿ ತನ್ನ ಅವ್ಯಕ್ತ ಸ್ವರೂಪದಲ್ಲಿ ಇರುತ್ತಾನೆ. ಆ ಪ್ರಳಯಕಾಲದಲ್ಲಿ ಪೃಥ್ವಿಯ ಗಂಧ ತನ್ಮಾತ್ರೆಯನ್ನು ವಾಯುವು ಸೆಳೆದುಕೊಂಡಾಗ ಪೃಥ್ವಿಯು ನೀರಿನಲ್ಲಿ ಮುಳುಗಿಹೋಗುತ್ತದೆ. ಹೀಗೆಯೇ ಜಲದ ತನ್ಮಾತ್ರೆ ರಸವನ್ನೂ ವಾಯು ಸೆಳೆದುಕೊಂಡಾಗ ಜಲವು ತನ್ನ ಕಾರಣವಾದ ಅಗ್ನಿಯಲ್ಲಿ ವಿಲೀನವಾಗುತ್ತದೆ. ॥ ೧೨-೧೩ ॥ ಅಂಧಕಾರದ ಮೂಲಕ ಅಗ್ನಿಯ ರೂಪತನ್ಮಾತ್ರೆಯನ್ನು ಹೀರಿಕೊಂಡಾಗ ಜ್ಯೋತಿ (ಅಗ್ನಿ) ತತ್ತ್ವವು ವಾಯುವಿನಲ್ಲಿ ವಿಲೀನವಾಗಿ ಹೋಗುತ್ತದೆ. ಹೀಗೆಯೇ ವಾಯುವಿನ ಗುಣ ಸ್ಪರ್ಶ ತನ್ಮಾತ್ರೆಯನ್ನು ಆಕಾಶದ ಮೂಲಕ ಹೀರಿಕೊಂಡಾಗ ವಾಯು ಆಕಾಶದಲ್ಲಿ ವಿಲೀನವಾಗುತ್ತದೆ. ॥ ೧೪ ॥

ಕಾಲಾತ್ಮನಾ ಹೃತಗುಣಂ ನಭ ಆತ್ಮನಿ ಲೀಯತೇ ।
ಇಂದ್ರಿಯಾಣಿ ಮನೋ ಬುದ್ಧಿಃ ಸಹ ವೈಕಾರಿಕೈರ್ನೃಪ ।
ಪ್ರವಿಶಂತಿ ಹ್ಯಹಂಕಾರಂ ಸ್ವಗುಣೈರಹಮಾತ್ಮನಿ
॥ ೧೫ ॥

ಏಷಾ ಮಾಯಾ ಭಗವತಃ ಸರ್ಗಸ್ಥಿತ್ಯಂತಕಾರಿಣೀ ।
ತ್ರಿವರ್ಣಾ ವರ್ಣಿತಾಸ್ಮಾಭಿಃ ಕಿಂ ಭೂಯಃ ಶ್ರೋತುಮಿಚ್ಛಸಿ
॥ ೧೬ ॥

ರಾಜೋವಾಚ

ಯಥೈತಾಮೈಶ್ವರೀಂ ಮಾಯಾಂ ದುಸ್ತರಾಮಕೃತಾತ್ಮಭಿಃ ।
ತರಂತ್ಯಂಜಃ ಸ್ಥೂಲಧಿಯೋ ಮಹರ್ಷ ಇದಮುಚ್ಯತಾಮ್
॥ ೧೭ ॥

ಪ್ರಬುದ್ಧ ಉವಾಚ

ಕರ್ಮಾಣ್ಯಾರಭಮಾಣಾನಾಂ ದುಃಖಹತ್ಯೈ ಸುಖಾಯ ಚ ।
ಪಶ್ಯೇತ್ಪಾಕವಿಪರ್ಯಾಸಂ ಮಿಥುನೀಚಾರಿಣಾಂ ನೃಣಾಮ್
॥ ೧೮ ॥

ನಿತ್ಯಾರ್ತಿದೇನ ವಿತ್ತೇನ ದುರ್ಲಭೇನಾತ್ಮಮೃತ್ಯುನಾ ।
ಗೃಹಾಪತ್ಯಾಪ್ತಪಶುಭಿಃ ಕಾ ಪ್ರೀತಿಃ ಸಾಧಿತೈಶ್ಚಲೈಃ
॥ ೧೯ ॥

ಏವಂ ಲೋಕಂ ಪರಂ ವಿದ್ಯಾನ್ನಶ್ವರಂ ಕರ್ಮನಿರ್ಮಿತಮ್ ।
ಸತುಲ್ಯಾತಿಶಯಧ್ವಂಸಂ ಯಥಾ ಮಂಡಲವರ್ತಿನಾಮ್
॥ ೨೦ ॥

ತಸ್ಮಾದ್ಗುರುಂ ಪ್ರಪದ್ಯೇತ ಜಿಜ್ಞಾಸುಃ ಶ್ರೇಯ ಉತ್ತಮಮ್ ।
ಶಾಬ್ದೇ ಪರೇ ಚ ನಿಷ್ಣಾತಂ ಬ್ರಹ್ಮಣ್ಯುಪಶಮಾಶ್ರಯಮ್
॥ ೨೧ ॥

ಕಾಲಸ್ವರೂಪಿಯಾದ ಈಶ್ವರನು ಆಕಾಶದ ಗುಣ ಶಬ್ದ ತನ್ಮಾತ್ರೆಯನ್ನು ಹೀರಿಕೊಂಡಾಗ ಆಕಾಶವು ಅಹಂಕಾರ ತತ್ತ್ವದಲ್ಲಿ ಲಯವಾಗುತ್ತದೆ. ಜೊತೆಗೆ ಇಂದ್ರಿಯಗಳು, ಮನ-ಬುದ್ಧಿಗಳು ಇವೆಲ್ಲವೂ ತಮ್ಮ-ತಮ್ಮ ಅಧಿಷ್ಠಾತೃ ದೇವತೆಗಳೊಂದಿಗೆ ಅಹಂಕಾರದಲ್ಲಿ ಲೀನವಾಗುತ್ತವೆ. ಮತ್ತೆ ಅಹಂಕಾರವೂ ಮೂಲಸ್ವರೂಪ ಮಹತ್ತತ್ತ್ವದಲ್ಲಿ ಲೀನವಾಗಿ ಹೋಗುತ್ತದೆ. ॥ ೧೫ ॥ ಈ ವಿಧದಿಂದ ಭಗವಂತನೇ ತ್ರಿಗುಣಮಯಿ ಮಾಯೆಯ ಮೂಲಕ ಈ ಸೃಷ್ಟಿಯ ಉತ್ಪತ್ತಿ, ಸ್ಥಿತಿ, ಸಂಹಾರ ಮಾಡುತ್ತಾ ಇರುತ್ತಾನೆ. ಇದನ್ನು ನಾನು ವರ್ಣಿಸಿದೆ. ಈಗ ನೀನು ಏನನ್ನು ಕೇಳಲು ಬಯಸುವೆ. ॥ ೧೬ ॥

**ರಾಜಾ ನಿಮಿಯು ಕೇಳಿದನು** – ಓ ಮಹರ್ಷಿಗಳೇ ! ತಮ್ಮ ಮನವನ್ನು ವಶಪಡಿಸಿಕೊಂಡಿರದ ಜನರಿಗೆ ಭಗವಂತನ ಮಾಯೆ ಯನ್ನು ದಾಟುವುದು ತುಂಬಾ ಕಠಿಣವಾಗಿದೆ. ಆದ್ದರಿಂದ ಸಾಮಾನ್ಯ ಜನರೂ ಕೂಡ ಆಯಾಸವಿಲ್ಲದೆ ಈ ಮಾಯೆಯನ್ನು ದಾಟಬಲ್ಲಂತಹ ಯಾವುದಾದರೂ ಸರಳ ಉಪಾಯವನ್ನು ತಾವು ತಿಳಿಸಿರಿ. ॥ ೧೭ ॥

**ಈಗ ನಾಲ್ಕನೆಯವರಾದ ಶ್ರೀಪ್ರಬುದ್ಧ ಯೋಗೀಶ್ವರರು ಹೇಳುತ್ತಾರೆ** – ಜನರು ಕಾಮನೆಗಳಿಂದ ಬಂಧಿತರಾಗಿ ಅನೇಕ ಪ್ರಕಾರದ ಕರ್ಮಗಳನ್ನು ಮಾಡುತ್ತಾ, ಇದರಿಂದ ತಮ್ಮ ಕಷ್ಟಗಳು ಇಲ್ಲವಾಗುವವು ಹಾಗೂ ಸುಖಿಯಾಗುವೆವು ಎಂದು ಯೋಚಿಸು ತ್ತಾರೆ. ಆದರೆ ಅದರ ಪರಿಣಾಮ ವಿಪರೀತವೇ ಆಗುತ್ತದೆ. ಈ ಪ್ರಕಾರ ಜನರು ಕಾಮ್ಯ ಪ್ರವೃತ್ತಿಯಲ್ಲಿ ಸಿಕ್ಕಿಕೊಂಡಿರುವರು. ಅವರ ಆ ಕರ್ಮಗಳ ವಿಪರೀತ ಪರಿಣಾಮವನ್ನು ನೋಡಿ, ವಿಚಾರ ಕುಶಲರಾದವರು ಕಾಮ್ಯಕರ್ಮಗಳಿಂದ ನಿವೃತ್ತರಾಗಬೇಕು. ॥ ೧೮ ॥ ಧನವು ನಿತ್ಯವೂ ದುಃಖ ಕೊಡುವಂತಹುದು. ಅನೇಕ ಕಷ್ಟಗಳಿಂದ ಕೂಡಿದೆ. ಅದನ್ನು ಗಳಿಸಲು ಅನೇಕ ಕಷ್ಟಗಳು ಇದ್ದೇ ಇವೆ. ದೊರಕಿ ದರೂ ಪಡೆದವರ ಮೃತ್ಯುವಿನ ಕಾರಣವೂ ಆಗುತ್ತದೆ. ಹೀಗೆಯೇ ಮನೆ, ಮಕ್ಕಳು, ನೆಂಟರು, ಪಶು, ಧನ ಮುಂತಾದವುಗಳೂ ಕೂಡ ಅನಿತ್ಯ ಮತ್ತು ನಾಶವುಳ್ಳದ್ದಾಗಿದೆ. ಇಂತಹ ನಾಶವುಳ್ಳ ಪದಾರ್ಥ ಗಳಿಂದ ಶಾಶ್ವತವಾದ ಶಾಂತಿಯು ಹೇಗೆ ದೊರೆಯಬಲ್ಲದು ? ॥ ೧೯ ॥ ಇದೇ ಪ್ರಕಾರ ಈ ಸಕಾಮ ಅನುಷ್ಠಾನಗಳಿಂದ ಪಡೆದು ಕೊಂಡ ಸ್ವರ್ಗಾದಿಗಳೂ ಅನಿತ್ಯ, ನಾಶವುಳ್ಳದ್ದಾಗಿವೆ ಎಂದೇ ತಿಳಿಯಬೇಕು. ಏಕೆಂದರೆ, ಇಲ್ಲಿಯ ರಾಜರಲ್ಲಿ ಬೇರೆ ರಾಜರ ಕುರಿತು ಇರುವ ಮತ್ಸರದಂತೆ, ಅಲ್ಲಿಯೂ ಕೂಡ ಪರಸ್ಪರ ಸ್ಪರ್ಧೆಯ ಭಾವನೆ, ಈರ್ಷ್ಯಾ-ದ್ವೇಷದ ಭಾವ ಇರುತ್ತದೆ. ಆದ್ದರಿಂದ ಇಂತಹ ರಾಗ-ದ್ವೇಷದ ವಾತಾವರಣದಲ್ಲಿ ಸುಖ-ಶಾಂತಿ ಹೇಗೆ ಸಿಗ ಬಲ್ಲದು ? ॥ ೨೦ ॥ ಆದ್ದರಿಂದ ಸರ್ವೋತ್ತಮ ಶ್ರೇಯೋಪ್ರಾಪ್ತಿಯ ಜಿಜ್ಞಾಸುವು ಶಬ್ದ ಬ್ರಹ್ಮನಲ್ಲಿ (ವೇದಾದಿಗಳಲ್ಲಿ) ನಿಷ್ಣಾತನಾಗಿದ್ದು ಪರಬ್ರಹ್ಮ ಪರಮಾತ್ಮನಲ್ಲೇ ಶಾಂತಿಯ ಆಶ್ರಯ ಪಡೆದಂತಹ ಸದ್ಗುರುವನ್ನು ಶರಣು ಹೋಗಬೇಕು. ॥ ೨೧ ॥ ಆ ಸದ್ಗುರುವು ತನ್ನ

ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇದ್ ಗುರ್ವಾತ್ಮದೈವತಃ ।
ಅಮಾಯಯಾನುವೃತ್ತ್ಯಾ ಯೈಸ್ತುಷ್ಯೇದಾತ್ಮಾಽಽತ್ಮದೋ ಹರಿಃ
॥ ೨೨ ॥

ಸರ್ವತೋ ಮನಸೋಽಸಂಗ-
ಮಾದೌ ಸಂಗಂ ಚ ಸಾಧುಷು ।
ದಯಾಂ ಮೈತ್ರೀಂ ಪ್ರಶ್ರಯಂ ಚ
ಭೂತೇಷ್ವದ್ಧಾ ಯಥೋಚಿತಮ್ ॥ ೨೩ ॥

ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾಂ ಚ ಸಮತ್ವಂ ದ್ವಂದ್ವಸಂಜ್ಞಯೋಃ
॥ ೨೪ ॥

ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಕೈವಲ್ಯಮನಿಕೇತತಾಮ್ ।
ವಿವಿಕ್ತಚೀರವಸನಂ ಸಂತೋಷಂ ಯೇನ ಕೇನಚಿತ್
॥ ೨೫ ॥

ಶ್ರದ್ಧಾಂ ಭಾಗವತೇ ಶಾಸ್ತ್ರೇಽನಿಂದಾಮನ್ಯತ್ರ ಚಾಪಿ ಹಿ ।
ಮನೋವಾಕ್ಕರ್ಮದಂಡಂ ಚ ಸತ್ಯಂ ಶಮದಮಾವಪಿ
॥ ೨೬ ॥

ಶ್ರವಣಂ ಕೀರ್ತನಂ ಧ್ಯಾನಂ ಹರೇರದ್ಭುತಕರ್ಮಣಃ ।
ಜನ್ಮಕರ್ಮಗುಣಾನಾಂ ಚ ತದರ್ಥೇಽಖಿಲಚೇಷ್ಟಿತಮ್
॥ ೨೭ ॥

ಇಷ್ಟಂ ದತ್ತಂ ತಪೋ ಜಪ್ತಂ ವೃತ್ತಂ ಯಚ್ಚಾತ್ಮನಃ ಪ್ರಿಯಮ್ ।
ದಾರಾನ್ಸುತಾನ್ ಗೃಹಾನ್ ಪ್ರಾಣಾನ್ಯತ್ಪರಸ್ಮೈ ನಿವೇದನಮ್
॥ ೨೮ ॥

ಏವಂ ಕೃಷ್ಣಾತ್ಮನಾಥೇಷು ಮನುಷ್ಯೇಷು ಚ ಸೌಹೃದಮ್ ।
ಪರಿಚರ್ಯಾಂ ಚೋಭಯತ್ರ ಮಹತ್ಸು ನೃಷು ಸಾಧುಷು
॥ ೨೯ ॥

ಪರಸ್ಪರಾನುಕಥನಂ ಪಾವನಂ ಭಗವದ್ಯಶಃ ।
ಮಿಥೋ ರತಿರ್ಮಿಥಸ್ತುಷ್ಟಿರ್ನಿವೃತ್ತಿರ್ಮಿಥ ಆತ್ಮನಃ
॥ ೩೦ ॥

ಪ್ರಿಯ ಆತ್ಮಾ, ಇಷ್ಟದೈವವೆಂದು ತಿಳಿಯಬೇಕು. ಅವರ ಬಳಿಯಲ್ಲಿದ್ದು ಭಾಗವತ ಧರ್ಮದ ಉಪದೇಶವನ್ನು ಪಡೆಯಬೇಕು. ನಮ್ಮ ಪ್ರತಿಯೊಂದು ಕ್ರಿಯೆಯ ಮೂಲಕ ನಿಷ್ಕಪಟ ಭಾವದಿಂದ, ಸರಳ ಬುದ್ಧಿಯಿಂದ ಅವರ ಸೇವೆ ಮಾಡಬೇಕು. ಹೀಗೆ ಮಾಡುವುದರಿಂದ ಭಗವಂತನು ಬಹಳ ಬೇಗ ಒಲಿಯುವನು; ಭಗವಂತನು ಕೃಪಾಮೂರ್ತಿಯಾಗಿದ್ದಾನೆ. ಭಕ್ತರ ಮೇಲೆ ಕೃಪೆದೋರಲು ಸಂದರ್ಭ ನೋಡುತ್ತಿರುತ್ತಾನೆ. ಹೆಚ್ಚೇನು, ಅವನು ಭಕ್ತರಿಗೆ ತನ್ನನ್ನೇ ಕೊಟ್ಟು ಕೊಳ್ಳುವನು. ॥ ೨೨ ॥ ಮೊಟ್ಟಮೊದಲಿಗೆ ಎಲ್ಲ ಕಡೆಗಳಿಂದ, ಅಂತರಮನಸ್ಸಿನಿಂದ ಪೂರ್ಣ ಅನಾಸಕ್ತನಾಗಬೇಕು. ಸಾಧು ಸಂತರಲ್ಲಿ ಪ್ರೇಮವಿಡಬೇಕು. ಯಥಾಯೋಗ್ಯ ರೀತಿಯಿಂದ ಸಾಮಾನ್ಯ ಪ್ರಾಣಿಗಳಲ್ಲಿ ಪ್ರೀತಿ-ದಯೆ ; ಸಮಾನರಲ್ಲಿ ಮಿತ್ರತೆ, ಹಿರಿಯರಲ್ಲಿ ಗೌರವ-ವಿನಮ್ರತೆ ಇರಬೇಕು. ॥ ೨೩ ॥ ಒಳ-ಹೊರಗಿನ ಶುದ್ಧಿ, ಸ್ವಧರ್ಮಾಚರಣರೂಪೀ ತಪಸ್ಸು, ಸಹಿಷ್ಣುತೆ, ಭಗವತ್ ಸ್ವರೂಪದ ಮನನ, ಸತ್‌ಶಾಸ್ತ್ರಗಳ ಸ್ವಾಧ್ಯಾಯ, ನಾಮಜಪ, ಸರಳತೆ, ಬ್ರಹ್ಮಚರ್ಯೆ, ಅಹಿಂಸಾ, ಚಳಿ-ಸೆಕೆ, ಸುಖ-ದುಃಖಾದಿ ದ್ವಂದ್ವಗಳಲ್ಲಿ ಹರ್ಷ-ಶೋಕದಿಂದ ರಹಿತನಾಗಿರಬೇಕು. ॥ ೨೪ ॥ ಒಂದೇ ಆತ್ಮವು ಸರ್ವತ್ರವ್ಯಾಪ್ತವಾಗಿದೆ ಎಂಬ ಭಾವದಿಂದ ಆತ್ಮನ ಅಸ್ತಿತ್ವವನ್ನು ಎಲ್ಲಕಡೆ ನೋಡುವುದು, ಏಕಾಂತ ಪವಿತ್ರಸ್ಥಳದಲ್ಲಿ ಇರುವುದು, ಮನೆಯ ಕುರಿತು ಮಮತೆ ಇಲ್ಲದಿರುವುದು, ಸಾದಾ ಸರಳ ಉಡುಪು ಧರಿಸುವುದು, ಸಂನ್ಯಾಸಿಯಾಗಿದ್ದರೆ ವಲ್ಕಲ ಉಡುವುದು, ದೊರೆತುದರಲ್ಲಿ ಸಂತುಷ್ಟನಾಗಿರಬೇಕು. ॥ ೨೫ ॥ ಭಗವತ್ ಪ್ರಾಪ್ತಿಯನ್ನು ತಿಳಿಸುವ ಶಾಸ್ತ್ರಗಳಲ್ಲಿ ಶ್ರದ್ಧೆ, ಯಾವುದೇ ಬೇರೆ ಶಾಸ್ತ್ರವನ್ನು ನಿಂದಿಸದಿರುವುದು; ಮನ, ವಾಣೀ, ಶರೀರದ ಸಂಯಮವಿಡುವುದು, ಸತ್ಯವಾಗಿ ನುಡಿಯುವುದು, ಶಮ-ಮನೋ ನಿಗ್ರಹ, ದಮ-ಇಂದ್ರಿಯನಿಗ್ರಹವಿರಬೇಕು. ॥ ೨೬ ॥ ಅದ್ಭುತ ಕರ್ಮಿ ಯಾದ ಶ್ರೀಹರಿಯ ಜನ್ಮ-ಕರ್ಮ ಹಾಗೂ ಗುಣ-ಲೀಲೆ ಗಳನ್ನು ಶ್ರವಣ, ಕೀರ್ತನೆ, ಧ್ಯಾನ ಮಾಡುತ್ತಾ, ಅವನಿಗಾಗಿಯೇ ಎಲ್ಲ ಕ್ರಿಯೆಗಳನ್ನು ಮಾಡಬೇಕು. ಜಪ, ಯಜ್ಞ, ದಾನ, ಸದಾಚಾರ ಇವುಗಳಲ್ಲದೆ ಬೇರೆ ತನಗೆ ಪ್ರಿಯವಾದ ಪದಾರ್ಥಗಳೆಲ್ಲವನ್ನು, ಅಂದರೆ ತನ್ನ ಪತ್ನೀ, ಪುತ್ರ, ಮನೆ, ಪ್ರಾಣಗಳನ್ನೂ ಹೀಗೆ ಎಲ್ಲವನ್ನು ಭಗವಂತನಿಗೆ ಅರ್ಪಿಸಬೇಕು. ॥ ೨೭-೨೮ ॥ ಶ್ರೀಕೃಷ್ಣನೇ ತಮ್ಮ ಆತ್ಮನಾಗಿರುವ ಮನುಷ್ಯರಲ್ಲಿ ನಾವು ಸೌಹಾರ್ದವನ್ನು ಸ್ಥಾಪಿಸಬೇಕು. ಸಂತ-ಮಹಾತ್ಮರನ್ನು ಸೇವಿಸಬೇಕು. ಹಾಗೆಯೇ ಸಾಮಾನ್ಯ ಜನರ ಕೂಡ ಸೇವೆ ಮಾಡಬೇಕು. ಅದರಲ್ಲಿಯೂ ಎಲ್ಲಾದರೂ ದೈವೀ ಆಪತ್ತು ಬಂದಾಗ, ಅದರಲ್ಲಿ ತೊಂದರೆಗೊಳಗಾದ ಜನರಿಗೆ ತುಂಬಾ ಶ್ರದ್ಧೆ, ಪ್ರೇಮದಿಂದ ನಿಷ್ಕಾಮಭಾವದಿಂದ ಸೇವೆಮಾಡಬೇಕು. ಭಗವಂತನ ಪರಮಪಾವನ ಯಶಗಳ ಸಂಬಂಧದಲ್ಲೇ ಪರಸ್ಪರ ಮಾತಾಡಬೇಕು. ಇಂತಹ ಸಾಧಕರನ್ನು ಸೇರಿಸಿ, ಅವರಲ್ಲಿ ಪ್ರೇಮ ವಿಡುವುದು, ಅವರೊಂದಿಗೆ ಎಲ್ಲ ರೀತಿಯಿಂದ ಪ್ರಸನ್ನನಾಗಿರುವುದು, ಪ್ರಪಂಚದಿಂದ ನಿವೃತ್ತನಾಗಿ ಪರಸ್ಪರ ಆಧ್ಯಾತ್ಮಿಕ ಶಾಂತಿಯನ್ನು ಅನುಭವಿಸಬೇಕು. ॥ ೨೯-೩೦ ॥

ಸ್ಮರಂತಃ ಸ್ಮಾರಯಂತಶ್ಚ ಮಿಥೋಽಘೌಘಹರಂ ಹರಿಮ್ ।
ಭಕ್ತ್ಯಾ ಸಂಜಾತಯಾ ಭಕ್ತ್ಯಾ ಬಿಭ್ರತ್ಯುತ್ಪುಲಕಾಂ ತನುಮ್
॥ ೩೧ ॥

ಕ್ವಚಿದ್ರುದಂತ್ಯಚ್ಯುತಚಿಂತಯಾ ಕ್ವಚಿ-
ದ್ಧಸಂತಿ ನಂದಂತಿ ವದಂತ್ಯಲೌಕಿಕಾಃ ।
ನೃತ್ಯಂತಿ ಗಾಯಂತ್ಯನುಶೀಲಯಂತ್ಯಜಂ
ಭವಂತಿ ತೂಷ್ಣೀಂ ಪರಮೇತ್ಯ ನಿರ್ವೃತಾಃ ॥ ೩೨ ॥

ಇತಿ ಭಾಗವತಾನ್ ಧರ್ಮಾನ್ ಶಿಕ್ಷನ್ಭಕ್ತ್ಯಾ ತದುತ್ಥಯಾ ।
ನಾರಾಯಣಪರೋ ಮಾಯಾಮಂಜಸ್ತರತಿ ದುಸ್ತರಾಮ್
॥ ೩೩ ॥

ರಾಜೋವಾಚ

ನಾರಾಯಣಾಭಿಧಾನಸ್ಯ ಬ್ರಹ್ಮಣಃ ಪರಮಾತ್ಮನಃ ।
ನಿಷ್ಠಾಮರ್ಹಥ ನೋ ವಕ್ತುಂ ಯೂಯಂ ಹಿ ಬ್ರಹ್ಮವಿತ್ತಮಾಃ
॥ ೩೪ ॥

ಪಿಪ್ಪಲಾಯನ ಉವಾಚ

ಸ್ಥಿತ್ಯುದ್ಭವಪ್ರಲಯಹೇತುರಹೇತುರಸ್ಯ
ಯತ್ ಸ್ವಪ್ನಜಾಗರಸುಷುಪ್ತಿಷು ಸದ್ಬಹಿಶ್ಚ ।
ದೇಹೇಂದ್ರಿಯಾಸುಹೃದಯಾನಿ ಚರಂತಿ ಯೇನ
ಸಂಜೀವಿತಾನಿ ತದವೇಹಿ ಪರಂ ನರೇಂದ್ರ ॥ ೩೫ ॥

ನೈತನ್ಮನೋ ವಿಶತಿ ವಾಗುತ ಚಕ್ಷುರಾತ್ಮಾ
ಪ್ರಾಣೇಂದ್ರಿಯಾಣಿ ಚ ಯಥಾನಲಮರ್ಚಿಷಃ ಸ್ವಾಃ ।
ಶಬ್ದೋಽಪಿ ಬೋಧಕನಿಷೇಧತಯಾಽಽತ್ಮಮೂಲ-
ಮರ್ಥೋಕ್ತಮಾಹ ಯದೃತೇ ನ ನಿಷೇಧಸಿದ್ಧಿಃ ॥ ೩೬ ॥

ರಾಜನೇ ! ಶ್ರೀಹರಿಯು ಪಾಪರಾಶಿಗಳನ್ನು ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡುತ್ತಾನೆ. ಆದ್ದರಿಂದ ಸತತವಾಗಿ ಅವನನ್ನೇ ಸ್ಮರಿಸಬೇಕು ಮತ್ತು ಇತರರಿಂದಲೂ ಸ್ಮರಣೆ ಮಾಡಿಸಬೇಕು. ಈ ಪ್ರಕಾರದ ಸಾಧನ ಭಕ್ತಿಯ ಅನುಷ್ಠಾನ ಮಾಡುತ್ತಾ-ಮಾಡುತ್ತಾ ಪ್ರೇಮ ಭಕ್ತಿಯ, ಸಾಧ್ಯಭಕ್ತಿಯ ಉದಯವಾಗುತ್ತದೆ. ಈ ಭಕ್ತಿಯಿಂದ ಅವನ ಶರೀರ ಪ್ರೇಮ ಪುಳಕಿತವಾಗುತ್ತಾ ಇರುತ್ತದೆ. ॥ ೩೧ ॥ ಭಗವಂತನ ಇಂತಹ ಭಕ್ತರು ಕೆಲವೊಮ್ಮೆ 'ಅಯ್ಯೋ ! ಇನ್ನೂ ಭಗವಾನ್ ಅಚ್ಯುತನ ದರ್ಶನವಾಗಲಿಲ್ಲವಲ್ಲ!' ಎಂದು ಅಳುತ್ತಾರೆ ; ಕೆಲವೊಮ್ಮೆ ನಗುತ್ತಾರೆ; ಕೆಲವೊಮ್ಮೆ ಆನಂದಿತರಾಗಿ, ಲೋಕೋತ್ತರ ಮಾತುಗಳನ್ನು ಆಡುತ್ತಿರುತ್ತಾರೆ; ಕೆಲವೊಮ್ಮೆ ಕುಣಿಯುತ್ತಾರೆ, ಹಾಡುತ್ತಾರೆ; ಕೆಲವೊಮ್ಮೆ ಪರಮಾತ್ಮನ ಲೀಲೆಗಳ ಅನುಕರಣ ಮಾಡುತ್ತಾರೆ; ಕೆಲವೊಮ್ಮೆ ಸುಮ್ಮನೆ ಇದ್ದುಬಿಡುತ್ತಾರೆ. ಹೀಗೆ ಮಾಡುತ್ತಾ-ಮಾಡುತ್ತಾ ಕೊನೆಗೆ ಅವರು ಪರಮಾತ್ಮನನ್ನು ಪಡೆದು ಪರಮಾನಂದವನ್ನು ಹೊಂದುತ್ತಾರೆ. (ಗೋಪಿಯರು ಭಗವಂತನ ಪ್ರೇಮದಲ್ಲಿ ಮುಳುಗಿರುತ್ತಿದ್ದರೋ ಹಾಗೆ.) ಈ ರೀತಿ ಭಾಗವತ ಧರ್ಮದ ಶಿಕ್ಷಣದಿಂದ ಸಂಪನ್ನರಾಗಿ ಅವರು ಆದರಿಂದ ಉಂಟಾದ ಭಕ್ತಿಯಿಂದ ನಾರಾಯಣ ಪರಾಯಣರಾಗುತ್ತಾರೆ. ಆ ಭಕ್ತಿಯ ಮಹಿಮೆಯಿಂದ ಈ ದುಸ್ತರ ಮಾಯೆಯನ್ನು ಸುಲಭವಾಗಿ ಪಾರಾಗಿ ಹೋಗುತ್ತಾರೆ. (ಇದು ಭಗವಂತನ ಭಕ್ತಿಯ ಮಹಿಮೆಯಾಗಿದೆ.) ॥ ೩೨-೩೩ ॥

**ರಾಜಾ ನಿಮಿಯು ಕೇಳಿದನು –** ಮಹರ್ಷಿಗಳೇ! ನೀವೆಲ್ಲ ಪರಮಾತ್ಮನ ನಿಜವಾದ ಸ್ವರೂಪವನ್ನು ಅರಿತವರಲ್ಲಿ ಸರ್ವಶ್ರೇಷ್ಠರಾಗಿರುವಿರಿ. ಪರಬ್ರಹ್ಮ ಪರಮಾತ್ಮನನ್ನು ನಾರಾಯಣನ ಹೆಸರಿನಿಂದ ವರ್ಣಿಸಲಾಗಿದೆ. ಅವನ ಸ್ವರೂಪವನ್ನು ನನಗೆ ತಿಳಿಸುವವರಾಗಿರಿ. ॥ ೩೪ ॥

**ಐದನೆಯವರಾದ ಶ್ರೀಪಿಪ್ಪಲಾಯನ ಯೋಗೀಶ್ವರರು ಹೇಳಿದರು –** ರಾಜನೇ ! ಪರಮಪ್ರಭು ಈ ವಿಶ್ವದ ಉತ್ಪತ್ತಿ, ಸ್ಥಿತಿ, ಪ್ರಳಯದ ಕಾರಣನಾಗಿರುವನು, ಆದರೆ ಅವನಿಗೆ ಯಾವ ಕಾರಣವೂ ಇಲ್ಲ. ಅವನೇ ಜಾಗ್ರತ್, ಸ್ವಪ್ನ , ಸುಷುಪ್ತಿ ಮೂರೂ ಅವಸ್ಥೆಗಳಲ್ಲಿ ಸಾಕ್ಷಿರೂಪದಿಂದ ಇರುತ್ತಾನೆ ಹಾಗೂ ಒಳಗೂ ಹೊರಗೂ ತುಂಬಿರುವನು. ಅವನ ಕಾರಣದಿಂದಲೇ ಈ ದೇಹ, ಇಂದ್ರಿಯಗಳು, ಪ್ರಾಣ, ಹೃದಯ ಉಜ್ಜೀವಿತವಾಗುತ್ತದೆ. ಅವನ ಅಸ್ತಿತ್ವದಿಂದಲೇ ಇವು ತಮ್ಮ-ತಮ್ಮ ಕೆಲಸ ಮಾಡುತ್ತವೆ. ಅವನನ್ನೇ ನೀನು ಪರಮ ಸತ್ಯ ತತ್ತ್ವ ನಾರಾಯಣನೆಂದು ತಿಳಿ. ॥ ೩೫ ॥ ಅಗ್ನಿಯ ಜ್ವಾಲೆಗಳು ಅಗ್ನಿಯಿಂದಲೇ ಉತ್ಪನ್ನವಾಗುತ್ತವೆ, ಆದರೆ ತಮ್ಮ ಸ್ವರೂಪ ಅಗ್ನಿಯನ್ನು ಇವು ಪ್ರಕಾಶಿಸಲಾರವು. ಹಾಗೆಯೇ ವಾಣೀ, ನೇತ್ರ, ಪ್ರಾಣ, ಇಂದ್ರಿಯಗಳು, ಅಂತಃಕರಣ ಇವೆಲ್ಲದರ ಮೂಲ ಆಧಾರ ಮತ್ತು ಪ್ರಕಾಶಕ ಏಕಮಾತ್ರ ಪರಮಾತ್ಮನೇ ಆಗಿರುವನು, ಆದರೆ ಇವೆಲ್ಲವು ತಮ್ಮ ಮೂಲ ಸ್ವರೂಪವನ್ನು ವರ್ಣಿಸಲು ಅಸಮರ್ಥವಾಗಿವೆ. ವೇದಗಳೂ ಕೂಡ ತಮ್ಮ ಕಾರಣಸ್ವರೂಪೀ ಪರಮಾತ್ಮತತ್ತ್ವವನ್ನು ಆದರ ಬೋಧ ಮಾಡಿಸುವ ಸಾಧಕರಿಗೆ ತಾತ್ಪರ್ಯರೂಪದಿಂದ 'ನೇತಿ-ನೇತಿ' ಹೀಗೆ

ಸತ್ತ್ವಂ ರಜಸ್ತಮ ಇತಿ ತ್ರಿವೃದೇಕಮಾದೌ
ಸೂತ್ರಂ ಮಹಾನಹಮಿತಿ ಪ್ರವದಂತಿ ಜೀವಮ್ ।
ಜ್ಞಾನಕ್ರಿಯಾರ್ಥಫಲರೂಪತಯೋರುಶಕ್ತಿ
ಬ್ರಹ್ಮೈವ ಭಾತಿ ಸದಸಚ್ಚ ತಯೋಃ ಪರಂ ಯತ್ ॥ ೩೭ ॥

ನಾತ್ಮಾ ಜಜಾನ ನ ಮರಿಷ್ಯತಿ ನೈಧತೇಽಸೌ
ನ ಕ್ಷೀಯತೇ ಸವನವಿದ್ವ್ಯಭಿಚಾರಿಣಾಂ ಹಿ ।
ಸರ್ವತ್ರ ಶಶ್ವದನಪಾಯ್ಯುಪಲಬ್ಧಿಮಾತ್ರಂ
ಪ್ರಾಣೋ ಯಥೇಂದ್ರಿಯಬಲೇನ ವಿಕಲ್ಪಿತಂ ಸತ್ ॥ ೩೮ ॥

ಅಂಡೇಷು ಪೇಶಿಷು ತರುಷ್ವವಿನಿಶ್ಚಿತೇಷು
ಪ್ರಾಣೋ ಹಿ ಜೀವಮುಪಧಾವತಿ ತತ್ರ ತತ್ರ ।
ಸನ್ನೇ ಯದಿಂದ್ರಿಯಗಣೇಽಹಮಿ ಚ ಪ್ರಸುಪ್ತೇ
ಕೂಟಸ್ಥ ಆಶಯಮೃತೇ ತದನುಸ್ಮೃತಿರ್ನಃ ॥ ೩೯ ॥

ಯರ್ಹ್ಯಬ್ಜನಾಭಚರಣೈಷಣಯೋರುಭಕ್ತ್ಯಾ
ಚೇತೋಮಲಾನಿ ವಿಧಮೇದ್ಗುಣಕರ್ಮಜಾನಿ ।
ತಸ್ಮಿನ್ವಿಶುದ್ಧ ಉಪಲಭ್ಯತ ಆತ್ಮತತ್ತ್ವಂ
ಸಾಕ್ಷಾದ್ಯಥಾಮಲದೃಶೋಃ ಸವಿತೃಪ್ರಕಾಶಃ ॥ ೪೦ ॥

ನಿಷೇಧಾತ್ಮಕ ವಚನಗಳಿಂದಲೇ ನಿರೂಪಿಸುತ್ತವೆ. ಏಕೆಂದರೆ, ಪರಮಾತ್ಮ ತತ್ತ್ವದ ಸತ್ತೆಯಿಲ್ಲದೆ ನಿಷೇಧವೂ ಕೂಡ ಸಿದ್ಧವಾಗಲಾರದು. ಎಲ್ಲವನ್ನು ನಿಷೇಧ ಮಾಡುತ್ತಾ-ಮಾಡುತ್ತಾ ಕೊನೆಗೆ ಉಳಿಯುವ ತತ್ತ್ವವನ್ನೇ ಪರಮತತ್ತ್ವ 'ನಾರಾಯಣ'ನೆಂದು ತಿಳಿ. ॥ ೩೬ ॥ ಸೃಷ್ಟಿಯ ಆದಿಯಲ್ಲಿ ಏಕಮಾತ್ರ ಬ್ರಹ್ಮವೇ ಇತ್ತು. ಅವನಿಂದಲೇ ಸತ್ತ್ವ, ರಜ, ತಮ ಹೀಗೆ ತ್ರಿಗುಣಾತ್ಮಿಕಾ ಮೂಲಪ್ರಕೃತಿ ಉಂಟಾಯಿತು. ಪ್ರಕೃತಿಯಲ್ಲಿ ಕ್ಷೋಭೆ ಉಂಟಾದಾಗ ಮಹತ್ತತ್ತ್ವ ಉತ್ಪನ್ನವಾಯಿತು. ಅದರಿಂದಲೇ ಸೂತ್ರಾತ್ಮಾ ಹಿರಣ್ಯಗರ್ಭನ ಉತ್ಪತ್ತಿಯಾಯಿತು. ಮತ್ತೆ ಅಹಂಕಾರದಿಂದಲೇ ಮನ ಹಾಗೂ ಇಂದ್ರಿಯಗಳ ಅಧಿಷ್ಠಾತೃ ದೇವತೆಗಳು, ಪ್ರಾಣ, ಇಂದ್ರಿಯಗಳು ಮತ್ತು ವಿಷಯಗಳು ಹುಟ್ಟಿಕೊಂಡವು. ಬಳಿಕ ಆ ಪರಮಾತ್ಮನೇ ಜೀವರೂಪದಿಂದ ಇವೆಲ್ಲ ತತ್ತ್ವಗಳಲ್ಲಿ ಪ್ರವೇಶಿಸಿದನು. ಈ ಪ್ರಕಾರ ಅವೆಲ್ಲ ರೂಪದಲ್ಲಿ ಏಕಮಾತ್ರ ಆ ಅನಂತಶಕ್ತಿಸ್ವರೂಪ ಪರಬ್ರಹ್ಮ ಪರಮಾತ್ಮನೇ ಪ್ರಕಾಶಿತನಾಗುತ್ತಿರುವನು. ಹೀಗೆ ಸತ್-ಅಸತ್ ಅರ್ಥಾತ್ ಕಾರ್ಯ-ಕಾರಣವೆರಡರಲ್ಲಿಯೂ ಏಕಮಾತ್ರ ಬ್ರಹ್ಮನೇ ಇರುವನು. ಇದರಿಂದ ಆಚೆ ಇರುವವನು ಆ ಬ್ರಹ್ಮನೇ ಆಗಿರುವನು. ॥ ೩೭ ॥ ಆ ಪರಬ್ರಹ್ಮಸ್ವರೂಪೀ ಆತ್ಮನು ಹುಟ್ಟುವುದಿಲ್ಲ, ಸಾಯುವುದಿಲ್ಲ, ವೃದ್ಧಿಯನ್ನು ಹೊಂದುವುದಿಲ್ಲ, ಇದೇ ಪ್ರಕಾರ ಅವನು ಕ್ಷೀಣನೂ ಆಗುವುದಿಲ್ಲ, ಅರ್ಥಾತ್ – ಆತ್ಮನು ಷಡ್ ಭಾವ ವಿಕಾರಗಳಿಂದ ರಹಿತನಾಗಿರುವನು. ಪರಿವರ್ತನ ಶೀಲ ಎಲ್ಲ ವಸ್ತುಗಳ ಭೂತ, ಭವಿಷ್ಯ, ವರ್ತಮಾನ ಎಲ್ಲ ಅವಸ್ಥೆಗಳನ್ನು ಆತ್ಮನು ತಿಳಿಯುವವನಾಗಿದ್ದು, ಸರ್ವವ್ಯಾಪಿಯೂ, ಅವಿನಾಶಿಯೂ, ಜ್ಞಾನಸ್ವರೂಪನೂ ಆಗಿರುವನು. ಪ್ರಾಣವಾದರೋ ಒಂದೇಯಾಗಿದ್ದು ಸ್ಥಾನಭೇದದಿಂದ ಅದರ ಅನೇಕ ಹೆಸರುಗಳಾಗುವಂತೆ, ಒಂದೇ ಜ್ಞಾನವು ಇಂದ್ರಿಯಗಳ ಭೇದದ ಕಾರಣದಿಂದ ಬೇರೆ ಬೇರೆ ಹೆಸರುಗಳಿಂದ ತಿಳಿಯಲಾಗುತ್ತದೆ. ಅರ್ಥಾತ್ ಇಂದ್ರಿಯಗಳ ಭೇದದಿಂದ ನೋಡುವುದು, ಕೇಳುವುದು ಮುಂತಾದ ಕ್ರಿಯೆಗಳ ಹೆಸರು ಬೇರೆ-ಬೇರೆಯಾಗುತ್ತವೆ. ಹಾಗೆಯೇ ಒಂದೇ ಆತ್ಮನ ಸತ್ತೆಯನ್ನು ವಿವಿಧ ರೀತಿಯಿಂದ ತಿಳಿಯಲ್ಪಡುತ್ತದೆ. ಅಂಡಜ, ಜರಾಯುಜ, ಉದ್ಭಿಜ್ಜ, ಸ್ವೇದಜ ಈ ನಾಲ್ಕು ಪ್ರಕಾರದ ಜೀವಿಗಳಿವೆ. ಎಲ್ಲ ಜೀವಿಗಳಲ್ಲಿ ಪ್ರಾಣವು ಅವುಗಳ ಜೊತೆ-ಜೊತೆಗೆ ಹೋಗುತ್ತದೆ. ಜೀವಿಯು ಪ್ರಗಾಢನಿದ್ದೆಯಲ್ಲಿ ಮಲಗಿದ್ದಾಗ ಇಂದ್ರಿಯಗಳ ಸಹಿತ ಅಹಂಕಾರವೂ ನಿಶ್ಚೇಷ್ಟಿತವಾಗುತ್ತದೆ. ಆದರೆ ಸಾಕ್ಷಿರೂಪದಿಂದ ಆತ್ಮನು ನಿರ್ವಿಕಾರನಾಗಿ ಸ್ಥಿರವಾಗಿರುತ್ತಾನೆ. ಆ ಆತ್ಮನ ಸತ್ತೆಯಿಂದಲೇ ಮಲಗಿ ಎದ್ದ ಬಳಿಕ 'ನಾನು ಗಾಢವಾದ ನಿದ್ದೆಯಲ್ಲಿ ಮಲಗಿದ್ದೆ' ಎಂಬ ಸ್ಮೃತಿ ಇರುತ್ತದೆ. ಈ ಸ್ಮೃತಿಯೇ ಸುಷುಪ್ತಾವಸ್ಥೆಯಲ್ಲಿ ಆತ್ಮನು ಇರುವುದನ್ನು ಸಿದ್ಧಪಡಿಸುತ್ತದೆ. ॥ ೩೮-೩೯ ॥ ಭಗವಾನ್ ಕಮಲನಾಭನ ಚರಣಗಳಲ್ಲಿ ತೀವ್ರವಾದ ಭಕ್ತಿಯನ್ನಿರಿಸಿದಾಗ, ಆ ಭಕ್ತಿಯೇ ಗುಣ-ಕರ್ಮಗಳಿಂದ ಉತ್ಪನ್ನವಾದ ಚಿತ್ತದ ಎಲ್ಲ ರೀತಿಯ ಮಲ, ವಿಕ್ಷೇಪ, ಆವರಣ ದೋಷಗಳನ್ನು ತೊಳೆದುಬಿಡುತ್ತದೆ. ಈ ವಿಧವಾಗಿ ಚಿತ್ತಶುದ್ಧಿಯಾದ ಬಳಿಕ ಆತ್ಮತತ್ತ್ವದ ಸಾಕ್ಷಾತ್ಕಾರವು ತಾನಾಗಿ ಆಗುತ್ತದೆ. ॥ ೪೦ ॥

ರಾಜೋವಾಚ

**ಕರ್ಮಯೋಗಂ ವದತ ನಃ ಪುರುಷೋ ಯೇನ ಸಂಸ್ಕೃತಃ ।**
**ವಿಧೂಯೇಹಾಶು ಕರ್ಮಾಣಿ ನೈಷ್ಕರ್ಮ್ಯಂ ವಿಂದತೇ ಪರಮ್ ॥ ೪೧ ॥**

**ರಾಜಾ ನಿಮಿಯು ಪ್ರಶ್ನಿಸಿದನು – ಯೋಗೀಶ್ವರರೇ!** ಯಾವುದರ ಆಚರಣೆಯಿಂದ ಮನುಷ್ಯನು ಪರಮ ನೈಷ್ಕರ್ಮ್ಯ ಸಿದ್ಧಿಯನ್ನು ಪಡೆದುಕೊಳ್ಳುವನೋ, ತನ್ನ ಎಲ್ಲ ಪ್ರಕಾರದ ಕರ್ಮಗಳನ್ನು ಬೇಗನೇ ತೊಳೆದುಬಿಡುತ್ತಾನೋ, ಅರ್ಥಾತ್ ಯಾವ ಕರ್ಮಯೋಗದ ಆಚರಣೆಯಿಂದ ಮನುಷ್ಯನು ಕರ್ಮಬಂಧನದಿಂದ ಮುಕ್ತನಾಗಿ ಪರಮಶಾಂತಿಯನ್ನು ಪಡೆಯುವನೋ ಅಂತಹ ಕರ್ಮಯೋಗವನ್ನು ಈಗ ನನಗೆ ವರ್ಣಿಸಿ ಹೇಳಿರಿ. ॥ ೪೧ ॥

**ಏವಂ ಪ್ರಶ್ನಮೃಷೀನ್ ಪೂರ್ವಮಪೃಚ್ಛಂ ಪಿತುರಂತಿಕೇ ।**
**ನಾಬ್ರುವನ್ ಬ್ರಹ್ಮಣಃ ಪುತ್ರಾಸ್ತತ್ರ ಕಾರಣಮುಚ್ಯತಾಮ್ ॥ ೪೨ ॥**

ಒಮ್ಮೆ ಇದೇ ಪ್ರಶ್ನೆಯನ್ನು ನಾನು ನನ್ನ ತಂದೆಯವರ ಮುಂದೆ ಬ್ರಹ್ಮಮಾನಸಪುತ್ರರಾದ ಸನಕಾದಿ ಋಷಿಗಳಲ್ಲಿ ಮಾಡಿದ್ದೆ. ಆದರೆ ಅವರು ಸರ್ವಜ್ಞರಾಗಿದ್ದರೂ ನನ್ನ ಪ್ರಶ್ನೆಗೆ ಉತ್ತರಿಸಲಿಲ್ಲ. ಇದರ ಕಾರಣವೇನಿತ್ತು ? ದಯಮಾಡಿ ನನಗೆ ತಿಳಿಸಿರಿ. ॥ ೪೨ ॥

ಆವಿರ್ಹೋತ್ರ ಉವಾಚ

**ಕರ್ಮಾಕರ್ಮವಿಕರ್ಮೇತಿ ವೇದವಾದೋ ನ ಲೌಕಿಕಃ ।**
**ವೇದಸ್ಯ ಚೇಶ್ವರಾತ್ಮತ್ವಾತ್ ತತ್ರ ಮುಹ್ಯಂತಿ ಸೂರಯಃ ॥ ೪೩ ॥**

**ಪರೋಕ್ಷವಾದೋ ವೇದೋಽಯಂ ಬಾಲಾನಾಮನುಶಾಸನಮ್ ।**
**ಕರ್ಮಮೋಕ್ಷಾಯ ಕರ್ಮಾಣಿ ವಿಧತ್ತೇ ಹ್ಯಗದಂ ಯಥಾ ॥ ೪೪ ॥**

**ಈಗ ಆರನೆಯವರಾದ ಆವಿರ್ಹೋತ್ರ ಯೋಗೀಶ್ವರರು ಹೇಳುತ್ತಾರೆ –** ಕರ್ಮ (ಶಾಸ್ತ್ರವಿಹಿತ ಕರ್ಮ) ಅಕರ್ಮ (ನಿಷಿದ್ಧ ಕರ್ಮ), ವಿಕರ್ಮ (ವಿಹಿತ ಕರ್ಮದ ಉಲ್ಲಂಘನೆ) ಈ ಮೂರರ ವಿಧಾನ ವೇದಗಳ ಮೂಲಕ ಮಾಡಲಾಗಿದೆ; ಜನರಿಂದಲ್ಲ. ವೇದಗಳು ಪರಮಾತ್ಮನ ಸ್ವರೂಪವಾಗಿವೆ. ಆದರೆ ವೇದವಾಣಿಯಲ್ಲಿ ವಿದ್ವಾಂಸರೂ ಮೋಹಿತರಾಗುತ್ತಾರೆ. ಏಕೆಂದರೆ, ವೇದದ ವಾಣಿ ಪರೋಕ್ಷವಾದಾತ್ಮಕವಾಗಿದೆ. (ಶಬ್ದಾರ್ಥ ಬೇರೆಯಾಗಿದ್ದು, ತಾತ್ಪರ್ಯ ಬೇರೆಯಾಗಿರುವುದನ್ನು ಪರೋಕ್ಷವಾದ ಎಂದು ಹೇಳುತ್ತಾರೆ.) ರೋಗ ನಿವೃತ್ತಿಗಾಗಿ ಔಷಧಿಯನ್ನು ಮಿಠಾಯಿಯೊಳಗಿಟ್ಟು ತಿನ್ನಿಸುವಂತೆ, ಆ ಕರ್ಮಗಳ ಮೂಲಕ ಕರ್ಮಬಂಧನದಿಂದ ಮುಕ್ತರಾಗಲಿ ಎಂದು ವೇದಗಳು ಅಜ್ಞಾನಿಗಳನ್ನು ಅನುಶಾಸಿತವಾಗಿಸಲು ಕರ್ಮಗಳ ವಿಧಾನ ಮಾಡುತ್ತವೆ.* ॥ ೪೩-೪೪ ॥

**ನಾಚರೇದ್ಯಸ್ತು ವೇದೋಕ್ತಂ ಸ್ವಯಮಜ್ಞೋಽಜಿತೇಂದ್ರಿಯಃ ।**
**ವಿಕರ್ಮಣಾ ಹ್ಯಧರ್ಮೇಣ ಮೃತ್ಯೋರ್ಮೃತ್ಯುಮುಪೈತಿ ಸಃ ॥ ೪೫ ॥**

ಸ್ವತಃ ಅಜ್ಞಾನಿಯಾಗಿದ್ದು, ಅಜಿತೇಂದ್ರಿಯನಾಗಿದ್ದು, ವೇದವಿಹಿತ ಕರ್ಮಗಳನ್ನು ಆಚರಿಸದವನು ವಿಹಿತ ಕರ್ಮಗಳ ಉಲ್ಲಂಘನೆಯಿಂದ ಪಾಪಕ್ಕೆ ಭಾಗಿಯಾಗುತ್ತಾನೆ. ತತ್‌ಫಲವಾಗಿ ಸತ್ತಬಳಿಕ ಮೃತ್ಯುವನ್ನೇ ಪಡೆಯುತ್ತಾರೆ. ಅರ್ಥಾತ್ ಜನ್ಮ-ಮರಣದ ಚಕ್ರದಲ್ಲಿ ಬಿದ್ದಿರುತ್ತಾನೆ, ಮುಕ್ತನಾಗುವುದಿಲ್ಲ. ॥ ೪೫ ॥

**ವೇದೋಕ್ತಮೇವ ಕುರ್ವಾಣೋ ನಿಸ್ಸಂಗೋಽರ್ಪಿತಮೀಶ್ವರೇ ।**
**ನೈಷ್ಕರ್ಮ್ಯಾಂ ಲಭತೇ ಸಿದ್ಧಿಂ ರೋಚನಾರ್ಥಾ ಫಲಶ್ರುತಿಃ ॥ ೪೬ ॥**

ವೇದವಿಹಿತ ಕರ್ಮಗಳನ್ನು ಮಾಡುತ್ತಾ ಭಗವಂತನಿಗೆ ಅರ್ಪಿಸುತ್ತಾ, ಅನಾಸಕ್ತಭಾವದಿಂದ ಕರ್ಮಮಾಡುವ ವ್ಯಕ್ತಿಯು ನೈಷ್ಕರ್ಮ್ಯರೂಪೀ ಪರಮ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ. ವೇದಗಳಲ್ಲಿ ಸ್ವರ್ಗಾದಿರೂಪೀ ಫಲದ ವರ್ಣನೆಯೂ ಇದೆ. ಆದರ ತಾತ್ಪರ್ಯ – ಫಲದ ಸತ್ಯತೆಯಲ್ಲಿರದೆ ವೈದಿಕ ಕರ್ಮಗಳಲ್ಲಿ ಅಭಿರುಚಿ ಉಂಟಾಗಿಸಲೆಂದೇ ಆಗಿದೆ. ॥ ೪೬ ॥

**ಯ ಆಶು ಹೃದಯಗ್ರಂಥಿಂ ನಿರ್ಜಿಹೀರ್ಷುಃ ಪರಾತ್ಮನಃ ।**
**ವಿಧಿನೋಪಚರೇದ್ದೇವಂ ತಂತ್ರೋಕ್ತೇನ ಚ ಕೇಶವಮ್ ॥ ೪೭ ॥**

ರಾಜನೇ! ಯಾರು ಪರಬ್ರಹ್ಮಸ್ವರೂಪೀ ಆತ್ಮನ ವಿಷಯದಲ್ಲಿರುವ ಅಜ್ಞಾನದ ಗ್ರಂಥಿಯನ್ನು ಪೂರ್ಣವಾಗಿ ಕತ್ತರಿಸಲು ಬಯಸುತ್ತಾನೋ, ಅವನು ವೈದಿಕ ಹಾಗೂ ಆಗಮ ಎರಡೂ ಪದ್ಧತಿಯಿಂದ ಭಗವಂತನ ಆರಾಧನೆ ಮಾಡಬೇಕು. ॥ ೪೭ ॥

* ಸಕಾಮ ಕರ್ಮಗಳ ಅನುಷ್ಠಾನದಲ್ಲಿ ಆಸ್ಥೆ ಇರುವವರು ಫಲಾಕಾಂಕ್ಷೆಯಿಂದ ಯಜ್ಞಾದಿ ಅನುಷ್ಠಾನ ಮಾಡುತ್ತಾರೆ. ಇದರ ಫಲವಾಗಿ ಸ್ವರ್ಗಾದಿ ಲೋಕಗಳ ಪ್ರಾಪ್ತಿಯೂ ಆಗುತ್ತದೆ. ಆದರಿಂದ ಅವರಿಗೆ ವೇದವಾಣಿಯಲ್ಲಿ ಆಸ್ಥೆ ದೃಢವಾಗುತ್ತದೆ. ಹೀಗೆ ಮಾಡುತ್ತಾ-ಮಾಡುತ್ತಾ ಭಗವತ್ಕೃಪೆಯಿಂದ ಎಂದಾದರೂ ಅವರಿಗೆ ಪರಮಾತ್ಮ ತತ್ತ್ವದ ಜಿಜ್ಞಾಸೆಯೂ ಕೂಡ ಉಂಟಾದರೆ ಅವರು ಸಾರ್ಥಕರಾಗುತ್ತಾರೆ.

ಲಬ್ಧಾನುಗ್ರಹ ಆಚಾರ್ಯೇಣ ತೇನ ಸಂದರ್ಶಿತಾಗಮಃ ।
ಮಹಾಪುರುಷಮಭ್ಯರ್ಚೇನ್ಮೂರ್ತ್ಯಾಭಿಮತಯಾಽಽತ್ಮನಃ
॥ ೪೮ ॥

ಶುಚಿಃ ಸಮ್ಮುಖಮಾಸೀನಃ ಪ್ರಾಣಸಂಯಮನಾದಿಭಿಃ ।
ಪಿಂಡಂ ವಿಶೋಧ್ಯ ಸಂನ್ಯಾಸಕೃತರಕ್ಷೋಽರ್ಚಯೇದ್ಧರಿಮ್
॥ ೪೯ ॥

ಅರ್ಚಾದೌ ಹೃದಯೇ ಚಾಪಿ ಯಥಾಲಬ್ಧೋಪಚಾರಕೈಃ ।
ದ್ರವ್ಯಕ್ಷಿತ್ಯಾತ್ಮಲಿಂಗಾನಿ ನಿಷ್ಪಾದ್ಯ ಪ್ರೋಕ್ಷ್ಯ ಚಾಸನಮ್
॥ ೫೦ ॥

ಪಾದ್ಯಾದೀನುಪಕಲ್ಪ್ಯಾಥ ಸನ್ನಿಧಾಪ್ಯ ಸಮಾಹಿತಃ ।
ಹೃದಾದಿಭಿಃ ಕೃತನ್ಯಾಸೋ ಮೂಲಮಂತ್ರೇಣ ಚಾರ್ಚಯೇತ್
॥ ೫೧ ॥

ಸಾಂಗೋಪಾಂಗಾಂ ಸಪಾರ್ಷದಾಂ
ತಾಂ ತಾಂ ಮೂರ್ತಿಂ ಸ್ವಮಂತ್ರತಃ ।
ಪಾದ್ಯಾರ್ಘ್ಯಾಚಮನೀಯಾದ್ಯೈಃ
ಸ್ನಾನವಾಸೋವಿಭೂಷಣೈಃ ॥ ೫೨ ॥

ಗಂಧಮಾಲ್ಯಾಕ್ಷತ ಸ್ರಗ್ಭಿರ್ಧೂಪದೀಪೋಪಹಾರಕೈಃ ।
ಸಾಂಗಂ ಸಂಪೂಜ್ಯ ವಿಧಿವತ್ ಸ್ತವೈಃ ಸ್ತುತ್ವಾನಮೇದ್ಧರಿಮ್
॥ ೫೩ ॥

ಆತ್ಮಾನಂ ತನ್ಮಯಂ ಧ್ಯಾಯನ್ಮೂರ್ತಿಂ ಸಂಪೂಜಯೇದ್ಧರೇಃ ।
ಶೇಷಾಮಾಧಾಯ ಶಿರಸಿ ಸ್ವಧಾಮ್ನ್ಯುದ್ವಾಸ್ಯ ಸತ್ಕೃತಮ್
॥ ೫೪ ॥

ಏವಮಗ್ನ್ಯರ್ಕತೋಯಾದಾವತಿಥೌ ಹೃದಯೇ ಚ ಯಃ ।
ಯಜತೀಶ್ವರಮಾತ್ಮಾನಮಚಿರಾನ್ಮುಚ್ಯತೇ ಹಿ ಸಃ
॥ ೫೫ ॥

ಮೊದಲಿಗೆ ಸೇವಾದಿಗಳ ಮೂಲಕ ಗುರುಗಳಿಂದ ದೀಕ್ಷೆಯನ್ನು ಪಡೆದು, ಮತ್ತೆ ಅವರಿಂದ ಉಪಾಸನಾ ವಿಧಿಯನ್ನು ಕಲಿಯಬೇಕು. ನಮಗೆ ಪ್ರಿಯವಾದ, ಇಷ್ಟವಾದ ಭಗವಂತನ ಮೂರ್ತಿಯ ಮೂಲಕ ಭಗವಾನ್ ಪುರುಷೋತ್ತಮನನ್ನು ಪೂಜಿಸಬೇಕು. ॥೪೮॥ ಸ್ನಾನಾದಿಗಳಿಂದ ಶರೀರವನ್ನು ಮತ್ತು ಸಂತೋಷಾದಿಗಳಿಂದ ಅಂತಃಕರಣವನ್ನು ಶುದ್ಧಮಾಡಬೇಕು. ಇದಾದ ಬಳಿಕ ಭಗವಂತನ ಮೂರ್ತಿಯ ಮುಂದೆ ಕುಳಿತುಕೊಂಡು ಪ್ರಾಣಾಯಾಮಾದಿಗಳಿಂದ ಭೂತಶುದ್ಧಿ-ನಾಡೀಶೋಧನ ಮಾಡಬೇಕು. ಅನಂತರ ವಿಧಿಪೂರ್ವಕ ಮಂತ್ರ, ದೇವತೆ ಇವುಗಳ ನ್ಯಾಸದಿಂದ ಶರೀರ ರಕ್ಷೆಯನ್ನು ಮಾಡಿಕೊಂಡು ಭಗವಂತನನ್ನು ಪೂಜಿಸಬೇಕು. ॥೪೯॥ ಮೊದಲಿಗೆ ಭಗವಂತನನ್ನು ಹೃದಯದಲ್ಲಿ ಧ್ಯಾನಿಸಿ ಮತ್ತೆ ಅರ್ಚಾವಿಗ್ರಹದಲ್ಲಿ ಆವಾಹಿಸಬೇಕು. ಸಮಯಕ್ಕನುಸಾರ ಲಭ್ಯವಾದ ಎಲ್ಲ ಸಾಮಗ್ರಿಗಳನ್ನು ಶುದ್ಧ ಹಾಗೂ ಪವಿತ್ರಗೊಳಿಸಿ, ನೆಲವನ್ನು ತೊಳೆದು, ಸ್ವತಃ ಸ್ನಾನಾದಿಗಳಿಂದ ಶುದ್ಧನಾಗಿ ಪೂಜಿಸುವ ಭಗವಂತನ ಮೂರ್ತಿ, ಪ್ರತಿಮೆಯನ್ನೂ ಕೂಡ ಮೊದಲೇ ಸಿದ್ಧವಾಗಿಡಬೇಕು. ಎಲ್ಲ ವಸ್ತುಗಳನ್ನು ಮೊದಲೇ ಸಿದ್ಧಪಡಿಸಿ, ಆಸನವನ್ನೂ ಶುದ್ಧಮಾಡಬೇಕು. ಪಾದ್ಯ, ಅರ್ಘ್ಯ, ಧೂಪ, ದೀಪ, ನೈವೇದ್ಯ ಮುಂತಾದುವನ್ನೂ ಮುಂದುಗಡೆ ಸಿದ್ಧಪಡಿಸಬೇಕು. ಮತ್ತೆ ಹೃದಯಾದಿನ್ಯಾಸ ಅಂಗನ್ಯಾಸ, ಕರನ್ಯಾಸಮಾಡಿ ಮೂಲಮಂತ್ರದಿಂದ ಭಗವಂತನನ್ನು ಪೂಜಿಸಬೇಕು. ॥ ೫೦-೫೧ ॥ ತಮ್ಮ-ತಮ್ಮ ಉಪಾಸ್ಯದೇವರ ಶ್ರೀವಿಗ್ರಹದ ಹೃದಯಾದಿ ಅಂಗ, ಆಯುಧಾದಿ ಉಪಾಂಗಗಳನ್ನೂ ಮತ್ತು ಪಾರ್ಷದರ ಸಹಿತ ಅವನ ಮೂಲಮಂತ್ರದಿಂದ ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಸ್ನಾನ, ವಸ್ತ್ರ ಆಭೂಷಣ, ಗಂಧ, ಪುಷ್ಪ, ದಧಿ, ಅಕ್ಷತೆಯಿಂದ * ತಿಲಕಗೈದು, ಧೂಪ, ದೀಪ, ನೈವೇದ್ಯ ಮುಂತಾದುವನ್ನೂ ವಿಧವತ್ತಾಗಿ ಪೂಜಿಸಿ, ಮತ್ತೆ ಸ್ತೋತ್ರಗಳಿಂದ ಸ್ತುತಿಮಾಡಿ ಪರಿವಾರಸಹಿತ ಭಗವಾನ್ ಶ್ರೀಹರಿಯನ್ನು ನಮಸ್ಕರಿಸ ಬೇಕು. ॥ ೫೨-೫೩ ॥ ತನ್ನನ್ನು ಭಗವನ್ಮಯನೆಂದು ಧ್ಯಾನಮಾಡುತ್ತಾ ಭಗವಂತನ ಮೂರ್ತಿಯನ್ನು ಪೂಜಿಸಬೇಕು. ಪುಷ್ಪ ಪ್ರಸಾದವನ್ನು ತನ್ನ ತಲೆಯಲ್ಲಿ ಧರಿಸಿ, ಆದರದಿಂದ ಭಗವದ್ವಿಗ್ರಹವನ್ನು ಅದರ ಸ್ಥಾನವಾದ ಸಿಂಹಾಸನದಲ್ಲಿ ಸ್ಥಾಪಿಸಿ ಪೂಜೆಯನ್ನು ಮುಗಿಸಬೇಕು. ॥ ೫೪ ॥ ಈ ಪ್ರಕಾರ ಅಗ್ನಿ, ಸೂರ್ಯ, ಜಲ, ಅತಿಥಿ ಮತ್ತು ತನ್ನ ಹೃದಯದಲ್ಲಿ ಆತ್ಮರೂಪದಿಂದ ಶ್ರೀಹರಿಯ ಪೂಜೆ ಮಾಡುವವನು ಬೇಗನೆ ಮುಕ್ತನಾಗಿ ಹೋಗುತ್ತಾನೆ. ॥ ೫೫ ॥

*ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ತೃತೀಯೋಽಧ್ಯಾಯಃ ॥ ೩ ॥

---

* ಭಗವಾನ್ ವಿಷ್ಣುವಿನ ಪೂಜೆಯಲ್ಲಿ ಅಕ್ಷತೆಗಳ ಪ್ರಯೋಗ ಕೇವಲ ತಿಲಕಾಲಂಕಾರದಲ್ಲಿ ಮಾತ್ರ ಮಾಡಬೇಕು. ಪೂಜೆಯಲ್ಲಿ ಮಾಡಬಾರದು. "ನಾಕ್ಷತೈರರ್ಚಯೇದ್ ವಿಷ್ಣುಂ ನ ಕೇತಕ್ಯಾ ಮಹೇಶ್ವರಮ್"

# ನಾಲ್ಕನೆಯ ಅಧ್ಯಾಯ

## ಭಗವಂತನ ಅವತಾರಗಳ ವರ್ಣನೆ

ರಾಜೋವಾಚ

ಯಾನಿ ಯಾನೀಹ ಕರ್ಮಾಣಿ ಯೈರ್ಯೈಃ ಸ್ವಚ್ಛಂದಜನ್ಮಭಿಃ ।
ಚಕ್ರೇ ಕರೋತಿ ಕರ್ತಾ ವಾ ಹರಿಸ್ತಾನಿ ಬ್ರುವಂತು ನಃ ॥ ೧ ॥

ದ್ರುಮಿಲ ಉವಾಚ

ಯೋ ವಾ ಅನಂತಸ್ಯ ಗುಣಾನನಂತಾ-
ನನುಕ್ರಮಿಷ್ಯನ್ ಸ ತು ಬಾಲಬುದ್ಧಿಃ ।
ರಜಾಂಸಿ ಭೂಮೇರ್ಗಣಯೇತ್ ಕಥಂಚಿತ್
ಕಾಲೇನ ನೈವಾಖಿಲಶಕ್ತಿಧಾಮ್ನಃ ॥ ೨ ॥

ಭೂತೈರ್ಯದಾ ಪಂಚಭಿರಾತ್ಮಸೃಷ್ಟೈಃ
ಪುರಂ ವಿರಾಜಂ ವಿರಚಯ್ಯ ತಸ್ಮಿನ್ ।
ಸ್ವಾಂಶೇನ ವಿಷ್ಟಃ ಪುರುಷಾಭಿಧಾನ-
ಮವಾಪ ನಾರಾಯಣ ಆದಿದೇವಃ ॥ ೩ ॥

ಯತ್ಕಾಯ ಏಷ ಭುವನತ್ರಯಸನ್ನಿವೇಶೋ
ಯಸ್ಯೇಂದ್ರಿಯೈಸ್ತನುಭೃತಾಮುಭಯೇಂದ್ರಿಯಾಣಿ ।
ಜ್ಞಾನಂ ಸ್ವತಃ ಶ್ವಸನತೋ ಬಲಮೋಜ ಈಹಾ
ಸತ್ತ್ವಾದಿಭಿಃ ಸ್ಥಿತಿಲಯೋದ್ಭವ ಆದಿಕರ್ತಾ ॥ ೪ ॥

ಆದಾವಭೂಚ್ಛತಧೃತೀ ರಜಸಾಸ್ಯ ಸರ್ಗೇ
ವಿಷ್ಣುಃ ಸ್ಥಿತೌ ಕ್ರತುಪತಿರ್ದ್ವಿಜಧರ್ಮಸೇತುಃ ।
ರುದ್ರೋಽಪ್ಯಯಾಯ ತಮಸಾ ಪುರುಷಃ ಸ ಆದ್ಯ
ಇತ್ಯುದ್ಭವಸ್ಥಿತಿಲಯಾಃ ಸತತಂ ಪ್ರಜಾಸು ॥ ೫ ॥

**ರಾಜಾ ನಿಮಿಯು ಕೇಳಿದನು –** ಯೋಗೀಶ್ವರರೇ ! ಭಗವಂತನು ತನ್ನ ಭಕ್ತರ ಭಕ್ತಿಗೆ ವಶೀಭೂತನಾಗಿ ತನ್ನ ಇಚ್ಛಾನುಸಾರವಾಗಿ ಅನೇಕ ಅವತಾರಗಳನ್ನು ಎತ್ತಿ, ನಾನಾ ಪ್ರಕಾರದ ಲೀಲೆಗಳನ್ನು ಮಾಡುತ್ತಾನೆ. ಇಷ್ಟರವರೆಗೆ ಭಗವಂತನು ಎತ್ತಿದ, ಈಗ ಇರುವ, ಮುಂದೆ ಎತ್ತಲಿರುವ ಅವತಾರಗಳ ಲೀಲೆಗಳನ್ನು ದಯವಿಟ್ಟು ವರ್ಣಿಸಿರಿ. ॥ ೧ ॥

**ಏಳನೆಯವರಾದ ದ್ರುಮಿಲ ಯೋಗೀಶ್ವರರು ಹೇಳಿದರು –** ರಾಜನೇ ! ಭಗವಂತನು ಅನಂತನು. ಅವನ ಗುಣಗಳೂ ಅನಂತ. ಅಂತಹ ಭಗವಂತನ ಅನಂತ ಕಲ್ಯಾಣಗುಣಗಳನ್ನು ಯಥಾಕ್ರಮದಿಂದ ಪೂರ್ಣವಾಗಿ ಯಾರೂ ವರ್ಣಿಸಲಾರರು. ಭಗವಂತನ ಗುಣಗಳನ್ನು ಪೂರ್ಣವಾಗಿ ವರ್ಣಿಸಬಲ್ಲೆ ಎಂದು ಯಾರಾದರೂ ಯೋಚಿಸಿದರೆ ಅವನು ಅಲ್ಪ ಬುದ್ಧಿಯವನೇ ಆಗಿರುವನು. ಭೂಮಿಯಲ್ಲಿರುವ ಧೂಳಿನ ಕಣಗಳನ್ನು ಎಣಿಸುವುದು ಅಸಂಭವವೇ. ಕದಾಚಿತ್ ಅದನ್ನಾದರೂ ಯಾರಾದರೂ ಎಣಿಸಬಹುದು. ಆದರೆ ಸಮಸ್ತ ಶಕ್ತಿಗಳ ಆಶ್ರಯಸ್ವರೂಪೀ ಭಗವಂತನ ಅನಂತ ಗುಣಗಳ ಅಂತವನ್ನು ಯಾರೂ ಮುಟ್ಟಲಾರರು. ॥ ೨ ॥ ಭಗವಂತನೇ ಪೃಥ್ವೀ, ಜಲ, ಅಗ್ನಿ, ವಾಯು, ಆಕಾಶ ಈ ಪಂಚ ಭೂತಗಳನ್ನು ತಾನೇ-ತನ್ನಿಂದ-ತನ್ನಲ್ಲೇ ಸೃಷ್ಟಿಸಿದನು. ಇವುಗಳ ಮೂಲಕ ವಿರಾಟ್ ಬ್ರಹ್ಮಾಂಡವನ್ನು ನಿರ್ಮಿಸಿ, ಲೀಲೆಯಿಂದ ತನ್ನ ಅಂಶ ಅಂತರ್ಯಾಮಿ ರೂಪದಿಂದ ಅದರಲ್ಲಿ ಪ್ರವೇಶಿಸಿದನು. ಆ ಆದಿದೇವ ನಾರಾಯಣನನ್ನೇ ಪುರುಷನೆಂದು ಹೇಳಲಾಗಿದೆ. ॥ ೩ ॥ ಈ ತ್ರಿಭುವನಗಳ ರಚನೆ ಭಗವಂತನದೇ ಶರೀರವಾಗಿದೆ. ಅವನ ಶಕ್ತಿಯಿಂದಲೇ ಸಮಸ್ತ ಪ್ರಾಣಿಗಳ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು ಉಂಟಾಗಿವೆ. ಅವನೇ ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿ ರೂಪದಿಂದ ಸ್ಥಿತನಾಗಿರುವನು. ಅವನು ಇರುವುದರಿಂದಲೇ ಎಲ್ಲರಲ್ಲಿ ಜ್ಞಾನಶಕ್ತಿಯ ಸಂಚಾರವಾಗುತ್ತದೆ. ಅವನೇ ಪ್ರಾಣರೂಪದಿಂದ ಎಲ್ಲರಲ್ಲಿ ನೆಲೆಸಿರುವನು. ಅವನ ಶಕ್ತಿ ಯಿಂದಲೇ ಎಲ್ಲರಿಗೆ ಶಾರೀರಿಕ ಬಲ, ಮಾನಸಿಕ ಶಕ್ತಿ ಪ್ರಾಪ್ತ ವಾಗುತ್ತದೆ ಹಾಗೂ ಕ್ರಿಯೆಗಳನ್ನು ಮಾಡುವ ಶಕ್ತಿಯೂ ದೊರೆಯುತ್ತದೆ. ಆ ಆದಿಕರ್ತಾ ಭಗವಾನ್ ನಾರಾಯಣನೇ ಸತ್ತ್ವಾದಿ ಮೂರುಗುಣಗಳಿಂದ ಪ್ರಪಂಚದ ಉತ್ಪತ್ತಿ, ಸ್ಥಿತಿ, ಪ್ರಳಯ ಮಾಡುತ್ತಾ ಇರುತ್ತಾನೆ. ಇದೆಲ್ಲವೂ ಅವನ ಲೀಲಾವಿಲಾಸವೇ ಆಗಿದೆ. ॥ ೪ ॥ ಆ ಆದಿಪುರುಷ ನಾರಾಯಣನೇ ಮೊಟ್ಟಮೊದಲು ವಿಶ್ವದ ಸೃಷ್ಟಿಗಾಗಿ ರಜೋಗುಣದ ಮೂಲಕ ಚತುರ್ಮುಖ ಬ್ರಹ್ಮನಾದನು. ಯಜ್ಞಗಳ ಅಧಿಪತಿ ಆ ಭಗವಾನ್ ನಾರಾಯಣನೇ ಸತ್ತ್ವಗುಣವನ್ನು ಸ್ವೀಕರಿಸಿ ಕೊಂಡು ಬ್ರಾಹ್ಮಣರನ್ನು, ಧರ್ಮವನ್ನು ರಕ್ಷಿಸುವುದಕ್ಕಾಗಿ ಹಾಗೂ ವಿಶ್ವದ ಪಾಲನೆಗಾಗಿ ವಿಷ್ಣುರೂಪನಾದನು. ಅದೇ ಆದಿಪುರುಷ ನಾರಾಯಣನು ತಮೋಗುಣದಿಂದ ರುದ್ರರೂಪನಾಗಿ ಇದನ್ನು ಸಂಹಾರ ಮಾಡುತ್ತಾನೆ. ಈ ವಿಧವಾಗಿ ಈ ಪ್ರಪಂಚದ ಉತ್ಪತ್ತಿ, ಸ್ಥಿತಿ, ಸಂಹಾರ ಮೂರೂ ಅವನಿಂದಲೇ ಆಗುತ್ತಾ ಇರುತ್ತವೆ. ॥ ೫ ॥

ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ
ನಾರಾಯಣೋ ನರ ಋಷಿಪ್ರವರಃ ಪ್ರಶಾಂತಃ ।
ನೈಷ್ಕರ್ಮ್ಯಲಕ್ಷಣಮುವಾಚ ಚಚಾರ ಕರ್ಮ
ಯೋಽದ್ಯಾಪಿ ಚಾಸ್ತ ಋಷಿವರ್ಯನಿಷೇವಿತಾಂಘ್ರಿಃ ॥ ೬ ॥

ಇಂದ್ರೋ ವಿಶಂಕ್ಯ ಮಮ ಧಾಮ ಜಿಘೃಕ್ಷತೀತಿ
ಕಾಮಂ ನ್ಯಯುಂಕ್ತ ಸಗಣಂ ಸ ಬದರ್ಯುಪಾಖ್ಯಮ್ ।
ಗತ್ವಾಪ್ಸರೋಗಣವಸಂತಸುಮಂದವಾತೈಃ
ಸ್ತ್ರೀಪ್ರೇಕ್ಷಣೇಷುಭಿರವಿಧ್ಯದತನ್ಮಹಿಜ್ಞಃ ॥ ೭ ॥

ವಿಜ್ಞಾಯ ಶಕ್ರಕೃತಮಕ್ರಮಮಾದಿದೇವಃ
ಪ್ರಾಹ ಪ್ರಹಸ್ಯ ಗತವಿಸ್ಮಯ ಏಜಮಾನಾನ್ ।
ಮಾ ಭೈಷ್ಟ ಭೋ ಮದನ ಮಾರುತ ದೇವವಧ್ವೋ
ಗೃಹ್ಣೀತ ನೋ ಬಲಿಮಶೂನ್ಯಮಿಮಂ ಕುರುಧ್ವಮ್ ॥ ೮ ॥

ಇತ್ಥಂ ಬ್ರುವತ್ಯಭಯದೇ ನರದೇವ ದೇವಾಃ
ಸವ್ರೀಡನಮ್ರಶಿರಸಃ ಸಘೃಣಂ ತಮೂಚುಃ ।
ನೈತದ್ವಿಭೋ ತ್ವಯಿ ಪರೇಽವಿಕೃತೇ ವಿಚಿತ್ರಂ
ಸ್ವಾರಾಮಧೀರನಿಕರಾನತಪಾದಪದ್ಮೇ ॥ ೯ ॥

ತ್ವಾಂ ಸೇವತಾಂ ಸುರಕೃತಾ ಬಹವೋಽಂತರಾಯಾಃ
ಸ್ವೌಕೋ ವಿಲಂಘ್ಯ ಪರಮಂ ವ್ರಜತಾಂ ಪದಂ ತೇ ।
ನಾನ್ಯಸ್ಯ ಬರ್ಹಿಷಿ ಬಲೀನ್ ದದತಃ ಸ್ವಭಾಗಾನ್-
ಧತ್ತೇ ಪದಂ ತ್ವಮವಿತಾ ಯದಿ ವಿಘ್ನಮೂರ್ಧ್ನಿ ॥ ೧೦ ॥

ದಕ್ಷ ಪ್ರಜಾಪತಿಯ ಮಗಳೂ, ಧರ್ಮನ ಪತ್ನಿಯೂ ಆದ ಮೂರ್ತಿ ಎಂಬಾಕೆಯಲ್ಲಿ ಋಷಿಶ್ರೇಷ್ಠ ನರ-ನಾರಾಯಣನಾಗಿ ಅವನೇ ಅವತರಿಸಿದನು. ಆ ಅವತಾರದಲ್ಲಿ ಅವನು ಕರ್ಮ ಬಂಧನದಿಂದ ಬಿಡಿಸಿ, ನೈಷ್ಕರ್ಮ್ಯಸ್ಥಿತಿಯನ್ನು ಪ್ರಾಪ್ತಮಾಡಿ ಕೊಳ್ಳುವ, ಆತ್ಮತತ್ತ್ವದ ಸಾಕ್ಷಾತ್ಕಾರ ಮಾಡಿಸುವ ಭಗವದ್ ಆರಾಧನಾರೂಪೀ ಕರ್ಮದ ಉಪದೇಶವನ್ನು ನೀಡಿದನು. ಅವನು ಸ್ವತಃ ಆ ವಿಧಿಯಿಂದ ಕರ್ಮಗಳನ್ನು ಆಚರಿಸಿ, ಇಂದೂ ಕೂಡ ಲೋಕಕಲ್ಯಾಣದ ಭಾವನೆಯಿಂದ ಬದರಿಕಾಶ್ರಮದಲ್ಲಿ ನರ ನಾರಾಯಣ ರೂಪದಿಂದ ವಿರಾಜಮಾನನಾಗಿದ್ದಾನೆ. ದೊಡ್ಡ ದೊಡ್ಡ ಋಷಿ ಮುನಿಗಳು ಅವನ ಚರಣಕಮಲಗಳನ್ನು ಸೇವಿಸುತ್ತಾ ಇದ್ದಾರೆ. ॥ ೬ ॥ ಒಮ್ಮೆ ನರ-ನಾರಾಯಣರ ಘೋರ ತಪಸ್ಸನ್ನು ನೋಡಿ ಇವರು ನನ್ನ ಸ್ವರ್ಗವನ್ನು ಕಸಿದುಕೊಳ್ಳಲು ಬಯಸುತ್ತಿರು ವರೋ ಎಂದು ಇಂದ್ರನ ಮನಸ್ಸಿನಲ್ಲಿ ಸಂದೇಹ ಉಂಟಾಯಿತು. ಅವನು ಅವರ ತಪಸ್ಸಿನಲ್ಲಿ ವಿಘ್ನವನ್ನೊಡ್ಡಲು ಮನ್ಮಥನನ್ನು ಅವನ ಸೇನೆಯೊಂದಿಗೆ ಬದರಿಕಾಶ್ರಮಕ್ಕೆ ಕಳಿಸಿದನು. ಮನ್ಮಥನಿಗೆ ಅವರ ಮಹಿಮೆಯ ಜ್ಞಾನವಿರಲಿಲ್ಲ, ಆದ್ದರಿಂದ ಅವನು ತನ್ನ ಸೇನೆ ಯೊಂದಿಗೆ ಅರ್ಥಾತ್ ಅಪ್ಸರೆಯರನ್ನೊಳಗೊಂಡು, ವಸಂತ, ಮಂದ-ಸುಗಂಧ ವಾಯುವಿನೊಂದಿಗೆ ಹೋಗಿ ಸ್ತ್ರೀಯರ ಕಟಾಕ್ಷ ಬಾಣಗಳಿಂದ ಅವರನ್ನು ಘಾಸಿ ಮಾಡತೊಡಗಿದನು. ॥ ೭ ॥ ಭಗವಾನ್ ನಾರಾಯಣನು ಇದೆಲ್ಲ ಕೃತ್ಯ ಇಂದ್ರನದೇ ಆಗಿದೆ ಎಂದು ತಿಳಿದುಕೊಂಡನು. ಅವರ ಮುಂದೆ ಕಾಮದೇವನ ಸೇನೆ ಅವರ ಪ್ರಭಾವವನನ್ನು ನೋಡಿ ಭಯದಿಂದ ನಡುಗಿಹೋಯಿತು. ನರ-ನಾರಾಯಣರು ವಿಸ್ಮಿತರಾಗದೆ ಮಂದಹಾಸ ಸೂಸುತ್ತಾ, ಅಭಯವನ್ನಿತ್ತು ಇಂತೆಂದರು – ಎಲೈ ಮದನನೇ! ಮಾರುತ ಮತ್ತು ಅಪ್ಸರೆಯರೇ! ನೀವು ಹೆದರಬೇಡಿರಿ. ನಮ್ಮ ಆಶ್ರಮಕ್ಕೆ ನೀವು ಬಂದಿರುವಿರಿ. ನಮ್ಮ ಆತಿಥ್ಯವನ್ನು ಸ್ವೀಕರಿಸಿರಿ. ಈ ಆಶ್ರಮವನ್ನು ಅತಿಥಿರಹಿತನನ್ನಾಗಿಸಬೇಡಿ. ॥ ೮ ॥ ರಾಜನೇ! ನರ-ನಾರಾಯಣ ಋಷಿಗಳು ಅವರಿಗೆ ಅಭಯದಾನವನ್ನಿತ್ತು ನುಡಿದಾಗ ಕಾಮದೇವ ಮುಂತಾದವರ ತಲೆ ನಾಚಿಕೆಯಿಂದ ತಗ್ಗಿತು. ಮದನನು ದಯಾಳು ಭಗವಾನ್ ನಾರಾಯಣನಲ್ಲಿ ಹೇಳಿದನು – ಪ್ರಭೋ! ನೀನು ಪರಬ್ರಹ್ಮ ಸ್ವರೂಪನಾಗಿರುವೆ, ನಿರ್ವಿಕಾರನಾಗಿರುವೆ. ಆದರಿಂದ ಇದೇನು ಆಶ್ಚರ್ಯದ ಮಾತಲ್ಲ, ದೊಡ್ಡ-ದೊಡ್ಡ ಆತ್ಮಾರಾಮರಾದ ಧೀರಪುರುಷರು ನಿರಂತರ ನಿನ್ನ ಚರಣಕಮಲಗಳಲ್ಲಿ ವಂದಿಸುತ್ತಿರುತ್ತಾರೆ. ॥ ೯ ॥ ಯಾವ ಜನರು ದೇವತೆಗಳ ಆರಾಧನೆಯ ನಿಮಿತ್ತ ಯಜ್ಞಾದಿಗಳಲ್ಲಿ ದೇವತೆಗಳ ಹೆಸರಿನಲ್ಲಿ ಅವರಿಗೆ ಹವಿರ್ಭಾಗ ಅರ್ಪಿಸುತ್ತಾರೋ, ಅವರ ಸಾಧನೆಯಲ್ಲಾದರೋ ದೇವತೆಗಳು ವಿಘ್ನವನ್ನೊಡ್ಡುವುದಿಲ್ಲ. ಆದರೆ ಪ್ರಭೋ! ನಿನ್ನ ಭಕ್ತರು ನಿನ್ನನ್ನು ಆರಾಧಿಸುವಾಗ ಅವರ ಭಕ್ತಿಯಲ್ಲಿ ದೇವತೆಗಳು ಅನೇಕ ವಿಘ್ನಗಳನ್ನು ಉಂಟುಮಾಡುತ್ತಾರೆ. ಅವರು ಯೋಚಿಸುತ್ತಾರೆ – 'ಈ ಭಕ್ತನು ನಮ್ಮಗಳ ಸ್ವರ್ಗವನ್ನು ದಾಟಿ ಪರಮಪದಕ್ಕೆ ಹೋಗುತ್ತಿರುವನು.' ಆದರೆ ನಿನ್ನ ಭಕ್ತರನ್ನು ನೀನೇ ರಕ್ಷಿಸುತ್ತಿರುವೆ. ಅವರ ವಿಘ್ನಗಳ ಮೇಲೆ ನೀನೇ ಕಾಲನ್ನು ಇಟ್ಟಿರುವೆ. ಆದ್ದರಿಂದ ನಿನ್ನಿಂದ ರಕ್ಷಿತರಾದ ಭಕ್ತರು ನಿನ್ನ ಧಾಮಕ್ಕೆ ಹೊರಟುಹೋಗುತ್ತಾರೆ. ॥ ೧೦ ॥

ಕ್ಷುತ್ತೃಟ್ತ್ರಿಕಾಲಗುಣಮಾರುತಜೈಹ್ವ್ಯಶೈಶ್ನ್ಯಾ-
ನಸ್ಮಾನಪಾರಜಲಧೀನತಿತೀರ್ಯ ಕೇಚಿತ್ ।
ಕ್ರೋಧಸ್ಯ ಯಾಂತಿ ವಿಫಲಸ್ಯ ವಶಂ ಪದೇ ಗೋ-
ರ್ಮಜ್ಜಂತಿ ದುಶ್ಚರತಪಶ್ಚ ವೃಥೋತ್ಸೃಜಂತಿ ॥ ೧೧ ॥

ಇತಿ ಪ್ರಗೃಣತಾಂ ತೇಷಾಂ ಸ್ತ್ರಿಯೋಽತ್ಯದ್ಭುತದರ್ಶನಾಃ ।
ದರ್ಶಯಾಮಾಸ ಶುಶ್ರೂಷಾಂ ಸ್ವರ್ಚಿತಾಃ ಕುರ್ವತೀರ್ವಿಭುಃ ॥ ೧೨ ॥

ತೇ ದೇವಾನುಚರಾ ದೃಷ್ಟ್ವಾ ಸ್ತ್ರಿಯಃ ಶ್ರೀರಿವ ರೂಪಿಣೀಃ ।
ಗಂಧೇನ ಮುಮುಹುಸ್ತಾಸಾಂ ರೂಪೌದಾರ್ಯಹತಶ್ರಿಯಃ ॥ ೧೩ ॥

ತಾನಾಹ ದೇವದೇವೇಶಃ ಪ್ರಣತಾನ್ಪ್ರಹಸನ್ನಿವ ।
ಆಸಾಮೇಕತಮಾಂ ವೃಙ್ಧ್ವಂ ಸವರ್ಣಾಂ ಸ್ವರ್ಗಭೂಷಣಾಮ್ ॥ ೧೪ ॥

ಓಮಿತ್ಯಾದೇಶಮಾದಾಯ ನತ್ವಾ ತಂ ಸುರವಂದಿನಃ ।
ಊರ್ವಶೀಮಪ್ಸರಃಶ್ರೇಷ್ಠಾಂ ಪುರಸ್ಕೃತ್ಯ ದಿವಂ ಯಯುಃ ॥ ೧೫ ॥

ಇಂದ್ರಾಯಾನಮ್ಯ ಸದಸಿ ಶೃಣ್ವತಾಂ ತ್ರಿದಿವೌಕಸಾಮ್ ।
ಊಚುರ್ನಾರಾಯಣಬಲಂ ಶಕ್ರಸ್ತತ್ರಾಸ ವಿಸ್ಮಿತಃ ॥ ೧೬ ॥

ಹಂಸಸ್ವರೂಪ್ಯವದದಚ್ಯುತ ಆತ್ಮಯೋಗಂ
ದತ್ತಃ ಕುಮಾರ ಋಷಭೋ ಭಗವಾನ್ ಪಿತಾ ನಃ ।
ವಿಷ್ಣುಃ ಶಿವಾಯ ಜಗತಾಂ ಕಲಯಾವತೀರ್ಣ-
ಸ್ತೇನಾಹೃತಾ ಮಧುಭಿದಾ ಶ್ರುತಯೋ ಹಯಾಸ್ಯೇ ॥ ೧೭ ॥

ಗುಪ್ತೋಽಪ್ಯಯೇ ಮನುರಿಲೌಷಧಯಶ್ಚ ಮಾತ್ಸ್ಯೇ
ಕ್ರೌಡೇ ಹತೋ ದಿತಿಜ ಉದ್ಧರತಾಂಭಸಃ ಕ್ಷ್ಮಾಮ್ ।
ಕೌರ್ಮೇ ಧೃತೋಽದ್ರಿರಮೃತೋನ್ಮಥನೇ ಸ್ವಪೃಷ್ಠೇ
ಗ್ರಾಹಾತ್ ಪ್ರಪನ್ನಮಿಭರಾಜಮಮುಂಚದಾರ್ತಮ್ ॥ ೧೮ ॥

ಕೆಲವರು ಸಹಿಸಲು ತುಂಬಾ ಕಷ್ಟವಾದ - ಹಸಿವು, ಬಾಯಾರಿಕೆ, ಚಳಿ, ಸೆಕೆ, ಮಳೆ, ಚಂಡಮಾರುತದಂತಹ ಕಷ್ಟಗಳನ್ನು ಹಾಗೂ ರಸನೇಂದ್ರಿಯ, ಜನನೇಂದ್ರಿಯಗಳ ವೇಗವನ್ನು ಸಹಿಸಿಕೊಳ್ಳುತ್ತಾರೆ. ಈ ಪ್ರಕಾರ ಅವರು ಅಪಾರ ಸಮುದ್ರದಂತಹ ವೇಗಗಳನ್ನಾದರೋ ದಾಟಿಹೋಗುತ್ತಾರೆ. ಆದರೆ ಕ್ರೋಧಕ್ಕೆ ವಶೀಭೂತರಾಗಿ ಸಾಮಾನ್ಯ ಗೋಷ್ಪಾದದಷ್ಟು ನೀರಿನಲ್ಲಿ ಮುಳುಗಿ ಹೋಗುತ್ತಾರೆ. ಈ ವಿಧವಾಗಿ ತಮ್ಮ ಕಠಿಣ ತಪಸ್ಸನ್ನು ವ್ಯರ್ಥವಾಗಿ ಕಳೆದುಕೊಳ್ಳುತ್ತಾರೆ. ॥ ೧೧ ॥ ಮನ್ಮಥ, ವಸಂತನೇ ಮೊದಲಾದವರು ಭಗವಂತನನ್ನು ಸ್ತುತಿಸಿದಾಗ, ಸರ್ವಶಕ್ತಿವಂತ ಭಗವಂತನು ತನ್ನ ಯೋಗಮಾಯೆಯಿಂದ ಅವರ ಎದುರಿಗೇ ಸರ್ವಾಲಂಕಾರ ಭೂಷಿತರಾದ ಅದ್ಭುತ ರೂಪಲಾವಣ್ಯಯುಕ್ತ ಅನೇಕ ರಮಣಿಯರನ್ನು ಪ್ರಕಟಿಸಿ ತೋರಿಸಿದನು. ಅವರೆಲ್ಲರೂ ಭಗವಂತನನ್ನು ಸೇವಿಸುತ್ತಿದ್ದರು. ॥ ೧೨ ॥ ದೇವರಾಜ ಇಂದ್ರನ ಅನುಚರರು ಆ ಲಕ್ಷ್ಮೀದೇವಿಗೆ ಸಮಾನರಾದ ರೂಪವತಿ ಸ್ತ್ರೀಯರನ್ನು ನೋಡಿದಾಗ, ಅವರ ಅಪಾರ ಸೌಂದರ್ಯದ ಮುಂದೆ ಇವರೆಲ್ಲರ ಕಾಂತಿಯು ಮಸಕಾಯಿತು. ಅವರ ಶರೀರದಲ್ಲಿ ಹೊರಸೂಸುತ್ತಿದ್ದ ದಿವ್ಯಗಂಧದಿಂದ ಎಲ್ಲರೂ ಮೋಹಿತರಾದರು. ॥ ೧೩ ॥ ಅವರು ವಿನಮ್ರರಾಗಿ ತಲೆಬಾಗಿದರು. ಆಗ ದೇವಾಧಿದೇವ ಭಗವಂತನು ನಗುತ್ತಾ – 'ನಿಮಗೆ ಅನುರೂಪರಾದ ಇವರಲ್ಲಿ ಯಾರನ್ನಾದರೂ ಒಬ್ಬರನ್ನು ನೀವು ತೆಗೆದುಕೊಳ್ಳಿ, ಅವಳು ನಿಮ್ಮ ಸ್ವರ್ಗಲೋಕದ ಶೋಭೆಯನ್ನು ಹೆಚ್ಚಿಸುವಳು' ಎಂದು ಹೇಳಿದನು. ॥ ೧೪ ॥ ದೇವೇಂದ್ರನ ಅನುಚರರು 'ಹಾಗೇ ಆಗಲೀ' ಎಂದು ಹೇಳುತ್ತಾ ಭಗವಂತನ ಆದೇಶವನ್ನು ಸ್ವೀಕರಿಸಿ, ಅವನನ್ನು ನಮಸ್ಕರಿಸಿ, ಸ್ತ್ರೀಯರಲ್ಲಿ ಶ್ರೇಷ್ಠಳಾದ ಊರ್ವಶೀ ಅಪ್ಸರೆಯನ್ನು ಪಡೆದು ಸ್ವರ್ಗಕ್ಕೆ ತೆರಳಿದರು. ॥ ೧೫ ॥ ಸ್ವರ್ಗವನ್ನು ಸೇರಿ ದೇವತೆಗಳು ತುಂಬಿದ ಸಭೆಯಲ್ಲಿ ಕಾಮನು ಭಗವಾನ್ ನರ-ನಾರಾಯಣರ ಬಲ, ಮಹಿಮೆಯನ್ನು ವರ್ಣಿಸಿದನು. ಇಂದ್ರನು ತಾನು ಗೈದುದನ್ನು ನೆನೆದು ಭಯಭೀತನಾದನು ಹಾಗೂ ಭಗವಂತನ ಮಹಿಮೆಯನ್ನು ನೋಡಿ ವಿಸ್ಮಿತನಾದನು. ॥ ೧೬ ॥

ಭಗವಾನ್ ನಾರಾಯಣನೇ ಹಂಸರೂಪನಾಗಿ ಆತ್ಮಯೋಗವನ್ನು ಉಪದೇಶಿಸಿದನು. ಅವನೇ ದತ್ತಾತ್ರೇಯ, ಸನತ್ಕುಮಾರ ಮತ್ತು ನಮ್ಮ ತೀರ್ಥರೂಪರಾದ ಋಷಭದೇವರ ರೂಪದಿಂದ ಆತ್ಮಯೋಗವನ್ನು ಕುರಿತು ಉಪದೇಶಿಸಿದನು. ಅದೇ ಭಗವಂತನು ಜಗತ್ತಿನ ಕಲ್ಯಾಣಕ್ಕಾಗಿ ತನ್ನ ಅಂಶದಿಂದ ಅವತರಿಸುತ್ತಾನೆ. ಅವನೇ ಹಯಗ್ರೀವನಾಗಿ ಅವತರಿಸಿ, ಮಧು-ಕೈಟಭರೆಂಬ ಅಸುರರನ್ನು ಸಂಹರಿಸಿ, ಅವರಿಂದ ಕದಿಯಲ್ಪಟ್ಟ ವೇದಗಳನ್ನು ಉದ್ಧರಿಸಿದನು. ॥ ೧೭ ॥ ಜಲಪ್ರಳಯದ ಸಮಯ ಮತ್ಸ್ಯಾವತಾರ ತಳೆದು ಅವನೇ ಸತ್ಯವ್ರತ ಮನುವನ್ನು, ಪೃಥ್ವಿಯನ್ನು ಮತ್ತು ಔಷಧಿಗಳನ್ನು ರಕ್ಷಿಸಿದನು. ವರಾಹ ಅವತಾರವನ್ನೆತ್ತಿ ಹಿರಣ್ಯಾಕ್ಷನನ್ನು ವಧಿಸಿ, ರಸಾತಲದಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ಉದ್ಧರಿಸಿದನು. ಕೂರ್ಮಾವತಾರದಲ್ಲಿ ಸಮುದ್ರಮಂಥನದ ಸಮಯ ಮಂದರಾಚಲವನ್ನು ತನ್ನ ಬೆನ್ನಮೇಲೆ ಹೊತ್ತು ಸುರರನ್ನು ಕಾಪಾಡಿದನು. ಅವನೇ ಮಕರಿಯನ್ನು ತರಿದು ಪೀಡಿತನಾದ ಗಜೇಂದ್ರನನ್ನು ಬಿಡಿಸಿದನು. ॥ ೧೮ ॥

ಸಂಸ್ತುನ್ವತೋऽಬ್ಧಿಪತಿತಾನ್ ಶ್ರಮಣಾನೃಷೀಂಶ್ಚ
ಶಕ್ರಂ ಚ ವೃತ್ರವಧತಸ್ತಮಸಿ ಪ್ರವಿಷ್ಟಮ್ ।

ದೇವಸ್ತ್ರಿಯೋऽಸುರಗೃಹೇ ಪಿಹಿತಾ ಅನಾಥಾ
ಜಘ್ನೇऽಸುರೇಂದ್ರಮಭಯಾಯ ಸತಾಂ ನೃಸಿಂಹೇ ॥ ೧೯ ॥

ದೇವಾಸುರೇ ಯುಧಿ ಚ ದೈತ್ಯಪತೀನ್ಸುರಾರ್ಥೇ
ಹತ್ವಾಂತರೇಷು ಭುವನಾನ್ಯದಧಾತ್ಕಲಾಭಿಃ ।

ಭೂತ್ವಾಥ ವಾಮನ ಇಮಾಮಹರದ್ಬಲೇಃ ಕ್ಷ್ಮಾಂ
ಯಾಚ್ಞಾಚ್ಛಲೇನ ಸಮದಾದದಿತೇಃ ಸುತೇಭ್ಯಃ ॥ ೨೦ ॥

ನಿಃಕ್ಷತ್ರಿಯಾಮಕೃತ ಗಾಂ ಚ ತ್ರಿಃ ಸಪ್ತಕೃತ್ವೋ
ರಾಮಸ್ತು ಹೈಹಯಕುಲಾಪ್ಯಯಭಾರ್ಗವಾಗ್ನಿಃ ।

ಸೋऽಬ್ಧಿಂ ಬಬಂಧ ದಶವಕ್ತ್ರಮಹನ್ಸಲಂಕಂ
ಸೀತಾಪತಿರ್ಜಯತಿ ಲೋಕಮಲಘ್ನಕೀರ್ತಿಃ ॥ ೨೧ ॥

ಭೂಮೇರ್ಭರಾವತರಣಾಯ ಯದುಷ್ವಜನ್ಮಾ
ಜಾತಃ ಕರಿಷ್ಯತಿ ಸುರೈರಪಿ ದುಷ್ಕರಾಣಿ ।

ವಾದೈರ್ವಿಮೋಹಯತಿ ಯಜ್ಞಕೃತೋऽತದರ್ಹಾನ್
ಶೂದ್ರಾನ್ಕಲೌ ಕ್ಷಿತಿಭುಜೋ ನ್ಯಹನಿಷ್ಯದಂತೇ ॥ ೨೨ ॥

ಏವಂವಿಧಾನಿ ಕರ್ಮಾಣಿ ಜನ್ಮಾನಿ ಚ ಜಗತ್ಪತೇಃ ।
ಭೂರೀಣಿ ಭೂರಿಯಶಸೋ ವರ್ಣಿತಾನಿ ಮಹಾಭುಜ
॥ ೨೩ ॥

ಹಿಂದಿನಕಾಲದ ಮಾತು – ವಾಲಖಿಲ್ಯ ಋಷಿಗಳು ತಪಸ್ಸು ಮಾಡುತ್ತಾ-ಮಾಡುತ್ತಾ ಅತ್ಯಂತ ದುರ್ಬಲರಾಗಿದ್ದರು. ಅವರು ಕಶ್ಯಪರಿಗಾಗಿ ಸಮಿಧೆಗಳನ್ನು ತರುತ್ತಿರುವಾಗ ಹಸುವಿನ ಕಾಲಿನಷ್ಟು ಹೊಂಡದಲ್ಲಿ ಬಿದ್ದುಬಿಟ್ಟರು. ಅವರಿಗೆ ಸಮುದ್ರದಲ್ಲೇ ಮುಳುಗಿ ದಂತಾಯಿತು. ಅವರು ಭಗವಂತನನ್ನು ಸ್ತುತಿಸಿದಾಗ, ಅವನು ಅವರನ್ನು ಉದ್ಧರಿಸಿದನು. ವೃತ್ರಾಸುರನನ್ನು ಕೊಂದ ಕಾರಣ ಇಂದ್ರನಿಗೆ ಬ್ರಹ್ಮಹತ್ಯೆ ತಗುಲಿತ್ತು. ಅವನು ಅದರ ಭಯದಿಂದ ಓಡಿಹೋಗಿ ಅಡಗಿದ್ದರೆ ಭಗವಂತನು ಆ ಬ್ರಹ್ಮಹತ್ಯೆಯಿಂದ ಇಂದ್ರನನ್ನು ರಕ್ಷಿಸಿದ್ದನು. ದೇವತೆಗಳ ಹೆಂಡಿರನ್ನು ಹಿರಣ್ಯಕಶಿಪು ಸೆರೆಯಲ್ಲಿಟ್ಟಿದ್ದನು. ಆಗ ಭಗವಂತನು ನರಸಿಂಹರೂಪದಿಂದ ಅವನನ್ನು ಕೊಂದು ಅಸುರನಿಂದ ಬಿಡಿಸಿ, ಪ್ರಹ್ಲಾದಾದಿ ಸಂತರನ್ನು ನಿರ್ಭಯರನ್ನಾಗಿಸಿದನು. ॥ ೧೯ ॥ ಭಗವಂತನೇ ದೇವತೆಗಳನ್ನು ರಕ್ಷಿಸಲಿಕ್ಕಾಗಿ ದೇವಾಸುರ ಸಂಗ್ರಾಮದಲ್ಲಿ ದೈತ್ಯಪತಿಗಳನ್ನು ವಧಿಸಿದನು. ಬೇರೆ-ಬೇರೆ ಮನ್ವಂತರಗಳಲ್ಲಿ ತನ್ನ ಶಕ್ತಿಯಿಂದ ಅನೇಕ ಅಂಶಾವತಾರಗಳನ್ನು ಧರಿಸಿ, ತ್ರಿಭುವನವನ್ನು ರಕ್ಷಿಸಿದನು. ಮತ್ತೆ ವಾಮನ ಅವತಾರದ ಮೂಲಕ ಬೇಡುವ ನೆಪದಿಂದ ದೇವತೆಗಳ ಸಂಪತ್ತನ್ನು ಬಲಿಯಿಂದ ಪಡೆದು ಅವರಿಗೆ ಕೊಡಿಸಿದನು. ॥ ೨೦ ॥ ಪರಶುರಾಮಾವತಾರ ವನ್ನು ಎತ್ತಿ ಇಪ್ಪತ್ತೊಂದು ಬಾರಿ ಪೃಥ್ವಿಯನ್ನು ನಿಃಕ್ಷತ್ರಿಯವಾಗಿಸಿದನು. ಇಂತಹ ಭಾರ್ಗವರಾಮನು ಹೈಹಯ ಕುಲವನ್ನು ನಾಶಗೊಳಿಸಲು ಅಗ್ನಿಸ್ವರೂಪನಾಗಿದ್ದನು. ಅವನೇ ರಾಮಾವತಾರದಲ್ಲಿ ಸಮುದ್ರಕ್ಕೆ ಸೇತುವೆಯನ್ನು ಬಿಗಿದು ದಶ ಮುಖ ರಾವಣನನ್ನು ಅವನ ಸೇನೆಸಹಿತ ಸಂಹರಿಸಿದನು. ಶೋಕ ಮತ್ತು ಭಯವನ್ನು ನಾಶಗೊಳಿಸುವಂತಹ ಪವಿತ್ರ ಕೀರ್ತಿಯುಳ್ಳ ಸೀತಾಪತಿ ಶ್ರೀರಾಮನಿಗೆ ಜಯವಾಗಲಿ. ॥ ೨೧ ॥ ಎಲೈ ರಾಜನೇ! ಅಜನ್ಮಾ ಆಗಿದ್ದರೂ ಭಗವಂತನು ಭೂಭಾರವನ್ನು ಹರಿಸಲೋಸುಗ ಯದುವಂಶದಲ್ಲಿ ಅವತರಿಸಿ, ದೊಡ್ಡ-ದೊಡ್ಡ ದೇವತೆಗಳಿಂದಲೂ ಮಾಡಲಾಗದ ಅಲೌಕಿಕ ಕಾರ್ಯಗಳನ್ನು ಮಾಡುವನು. ಮುಂದೆ ಬುದ್ಧನಾಗಿ ಅವತರಿಸುವನು. ಯಜ್ಞದ ಅನಧಿಕಾರಿಗಳು ಯಜ್ಞಮಾಡುವುದನ್ನು ನೋಡಿ, ಅವರನ್ನು ಅನೇಕ ಪ್ರಕಾರದ ವಾದಗಳಿಂದ ಮೋಹಿತಗೊಳಿಸುವನು. ಕಲಿಯುಗದ ಕೊನೆಯಲ್ಲಿ ಕಲ್ಕಿಯಾಗಿ ಅವತರಿಸಿ ಶೂದ್ರರಾಜರನ್ನು ವಧಿಸುವನು. ॥ ೨೨ ॥ ಮಹಾಬಾಹುವಾದ ವಿದೇಹರಾಜನೇ! ಭಗವಂತನ ಕೀರ್ತಿ ಅನಂತ. ಮಹಾತ್ಮರು ಜಗತ್ಪತಿ ಭಗವಂತನ ಇಂತಹ ಅನೇಕ ಜನ್ಮ ಮತ್ತು ಕರ್ಮಗಳನ್ನು ಬಹಳ ವಿಧವಾಗಿ ವರ್ಣಿಸಿರುವರು. (ಇದನ್ನು ನಾನು ತುಂಬಾ ಸಂಕ್ಷೇಪವಾಗಿ ಭಗವಂತನ ಕೆಲವು ಲೀಲೆಗಳನ್ನು ಮಾತ್ರ ವರ್ಣಿಸಿರುವೆನು. ಭಗವಂತನು ಅನಂತ, ಅವನ ಜನ್ಮ-ಕರ್ಮಗಳೂ ಅನಂತ.) ॥ ೨೩ ॥

ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ
ಚತುರ್ಥೋऽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ಭಕ್ತಿಹೀನ ಪುರುಷರ ಗತಿ ಮತ್ತು ಭಗವಂತನ ಪೂಜಾವಿಧಾನದ ವರ್ಣನೆ

*ರಾಜೋವಾಚ*

**ಭಗವಂತಂ ಹರಿಂ ಪ್ರಾಯೋ ನ ಭಜಂತ್ಯಾತ್ಮವಿತ್ತಮಾಃ ।**
**ತೇಷಾಮಶಾಂತಕಾಮಾನಾಂ ಕಾ ನಿಷ್ಠಾವಿಜಿತಾತ್ಮನಾಮ್ ॥ ೧ ॥**

**ರಾಜಾ ನಿಮಿಯು ಕೇಳಿದನು –** ಆತ್ಮ ತತ್ತ್ವವನ್ನು ಅರಿತಿರುವ ಯೋಗೀಶ್ವರರೇ! ತಮ್ಮ ಇಂದ್ರಿಯಗಳನ್ನು ಜಯಿಸದವರು, ಜೊತೆ-ಜೊತೆಗೆ ಚಿತ್ತವೂ ಭೋಗಗಳ ಲಾಲಸೆಯಿಂದ ಅಶಾಂತವಾಗಿರುವ ಜನರು ಪ್ರಾಯಶಃ ಭಗವಂತನನ್ನು ಭಜಿಸುವುದಿಲ್ಲ, ಇಂತಹವರ ಗತಿ ಏನಾಗುತ್ತದೆ? ॥ ೧ ॥

*ಚಮಸ ಉವಾಚ*

**ಮುಖಬಾಹೂರುಪಾದೇಭ್ಯಃ ಪುರುಷಸ್ಯಾಶ್ರಮೈಃ ಸಹ ।**
**ಚತ್ವಾರೋ ಜಜ್ಞಿರೇ ವರ್ಣಾ ಗುಣೈರ್ವಿಪ್ರಾದಯಃ ಪೃಥಕ್ ॥ ೨ ॥**

**ಯ ಏಷಾಂ ಪುರುಷಂ ಸಾಕ್ಷಾದಾತ್ಮಪ್ರಭವಮೀಶ್ವರಮ್ ।**
**ನ ಭಜಂತ್ಯವಜಾನಂತಿ ಸ್ಥಾನಾದ್ಭ್ರಷ್ಟಾಃ ಪತನ್ತ್ಯಧಃ ॥ ೩ ॥**

**ದೂರೇಹರಿಕಥಾಃ ಕೇಚಿದ್ದೂರೇಚಾಚ್ಯುತಕೀರ್ತನಾಃ ।**
**ಸ್ತ್ರಿಯಃ ಶೂದ್ರಾದಯಶ್ಚೈವ ತೇಽನುಕಂಪ್ಯಾ ಭವಾದೃಶಾಮ್ ॥ ೪ ॥**

**ವಿಪ್ರೋ ರಾಜನ್ಯವೈಶ್ಯೌ ಚ ಹರೇಃ ಪ್ರಾಪ್ತಾಃ ಪದಾಂತಿಕಮ್ ।**
**ಶ್ರೌತೇನ ಜನ್ಮನಾಥಾಪಿ ಮುಹ್ಯಂತ್ಯಾಮ್ನಾಯವಾದಿನಃ ॥ ೫ ॥**

**ಕರ್ಮಣ್ಯಕೋವಿದಾಃ ಸ್ತಬ್ಧಾ ಮೂರ್ಖಾಃ ಪಂಡಿತಮಾನಿನಃ ।**
**ವದಂತಿ ಚಾಟುಕಾನ್ಮೂಢಾ ಯಯಾ ಮಾಧ್ವ್ಯಾ ಗಿರೋತ್ಸುಕಾಃ ॥ ೬ ॥**

**ರಜಸಾ ಘೋರಸಂಕಲ್ಪಾಃ ಕಾಮುಕಾ ಅಹಿಮನ್ಯವಃ ।**
**ದಾಂಭಿಕಾ ಮಾನಿನಃ ಪಾಪಾ ವಿಹಸಂತ್ಯಚ್ಯುತಪ್ರಿಯಾನ್ ॥ ೭ ॥**

**ಎಂಟನೆಯವರಾದ ಶ್ರೀಚಮಸ ಯೋಗೀಶ್ವರರು ಹೇಳುತ್ತಾರೆ –** ರಾಜನೇ! ವಿರಾಟ್‌ಪುರುಷ ಪರಮಾತ್ಮನ ಮುಖ, ಬಾಹು, ಊರು, ಚರಣಗಳಿಂದ ನಾಲ್ಕೂ ವರ್ಣ ಮತ್ತು ಆಶ್ರಮಗಳ ಉತ್ಪತ್ತಿಯು ಅವರವರ ಗುಣ ಹಾಗೂ ಕರ್ಮಗಳನುಸಾರ ಆಗಿದೆ. ಭಗವಂತನ ಮುಖದಿಂದ ಸತ್ತ್ವಪ್ರಧಾನ ಬ್ರಾಹ್ಮಣರ, ಬಾಹುಗಳಿಂದ ಸತ್ತ್ವ-ರಜ ಮಿಶ್ರಿತ ಕ್ಷತ್ರಿಯರ, ತೊಡೆಯಿಂದ ರಜೋಗುಣ-ತಮೋಗುಣ ಮಿಶ್ರಿತ ವೈಶ್ಯರ, ಚರಣಗಳಿಂದ ತಮೋಗುಣ ಪ್ರಧಾನ ಶೂದ್ರರ ಉತ್ಪತ್ತಿಯಾಯಿತು. ಹೀಗೆಯೇ ಹೃದಯ, ಜಂಘೆ, ವಕ್ಷಸ್ಥಳ, ಶಿರ ಇವುಗಳಿಂದ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಆಶ್ರಮಗಳು ಉಂಟಾದುವು. ಈ ಪ್ರಕಾರ ವರ್ಣಾಶ್ರಮದ ವಿಭಾಗದಿಂದ ಇಡೀ ವಿಶ್ವವು ಭಗವಂತನಿಂದಲೇ ಉಂಟಾಗಿದೆ. ॥ ೨ ॥ ಈ ನಾಲ್ಕೂ ವರ್ಣಗಳಲ್ಲಿನ ಜನರು ಪರಾತ್ಪರ ಪರಮಾತ್ಮನನ್ನು ಭಜಿಸದವರು, ಅವನನ್ನು ಆದರಿಸದವರು ತಮ್ಮ ಸ್ಥಾನದಿಂದ ಭ್ರಷ್ಟರಾಗಿ ಅಧೋಗತಿಯನ್ನು ಪಡೆಯುತ್ತಾರೆ. ॥ ೩ ॥ ಇಂತಹ ಭಗವಂತನ ಹರಿಕಥಾ ಸತ್ಸಂಗಾದಿಗಳಿಂದ ದೂರವಿರುವ ಜನರೆಲ್ಲರೂ, ಭಗವಂತನ ಸಂಕೀರ್ತನಾದಿಗಳಿಂದ ದೂರವಾದ ಸ್ತ್ರೀ-ಶೂದ್ರಾದಿಗಳು ನಿಮ್ಮಂತಹ ಭಗವತ್ ಭಕ್ತರ ಕೃಪಾಪಾತ್ರರಾಗಿದ್ದಾರೆ. ॥ ೪ ॥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರುಗಳು ದ್ವಿಜಾತಿಗಳಾಗಿದ್ದಾರೆ. ಆದ್ದರಿಂದ ವೇದಾಧ್ಯಯನಾದಿ ಸಂಸ್ಕಾರಗಳಿಂದ ಸುಸಂಪನ್ನರಾದ ಕಾರಣ ಭಗವತ್‌ಸನ್ನಿಧಾನ ಪಡೆಯಲು ವಿಶೇಷವಾಗಿ ಯೋಗ್ಯತೆ ಇರುವವರು. ಇಂತಹ ಸೌಲಭ್ಯ ಅವರಿಗೆ ದೊರಕಿದರೂ ಕೂಡ ಅವರಲ್ಲಿನ ಕೆಲವರು ಅಜ್ಞಾನಕ್ಕೆ ವಶೀಭೂತರಾಗಿ, ವೇದಗಳಲ್ಲಿ ವರ್ಣಿಸಿದ ಸಕಾಮಕರ್ಮಗಳ ಅನುಷ್ಠಾನ ಮತ್ತು ಅವುಗಳ ಫಲಗಳಲ್ಲಿ ಮೋಹಿತರಾಗಿರುತ್ತಾರೆ. ॥ ೫ ॥ ಅಂತಹ ಜನರು ಕರ್ಮಗಳ ರಹಸ್ಯವನ್ನಾದರೋ ತಿಳಿಯುವುದೇ ಇಲ್ಲ, ಬದಲಿಗೆ ಗರ್ವಿತರೂ ಹಾಗೂ ಮೂರ್ಖರಾಗಿರುತ್ತಾರೆ ಹಾಗೂ ತಮ್ಮನ್ನು ಪಂಡಿತರೆಂದೇ ತಿಳಿದಿರುತ್ತಾರೆ. ಇಂತಹ ಉದ್ಧಟ, ಮೂರ್ಖಜನರು ಹೇಳುವ ಪುಷ್ಪಿತ ಮಧುರವಾಣಿಯನ್ನು ಕೇಳಿ, ಅಜ್ಞಾನಿಗಳು ಮತ್ತರಾಗಿ ಉಬ್ಬಿಹೋಗುತ್ತಾರೆ. ॥ ೬ ॥ ಇಂತಹ ಜನರು ರಜೋಗುಣದಿಂದ ತುಂಬಿರುತ್ತಾರೆ. ಅವರ ಸಂಕಲ್ಪಗಳೂ ಭಯಾನಕವಾಗಿರುತ್ತವೆ. ಅವರ ಕಾಮನೆಗಳು ಎಂದೂ ಕೊನೆಗೊಳ್ಳುವುದಿಲ್ಲ. ಇವರು ಬಹಳ ಕ್ರೋಧಿಗಳಾಗಿದ್ದು, ದಂಭಾಚಾರದಿಂದ ಕೂಡಿರುತ್ತಾರೆ. ಈ ಉನ್ಮತ್ತ, ಪಾಪಕರ್ಮಿಗಳಾದರೋ ಭಗವಂತನ ಭಕ್ತರ ಉಪಹಾಸವನ್ನೇ ಮಾಡುತ್ತಾರೆ. ॥ ೭ ॥

ವದಂತಿ ತೇಽನ್ಯೋನ್ಯಮುಪಾಸಿತಸ್ತ್ರಿಯೋ
ಗೃಹೇಷು ಮೈಥುನ್ಯಪರೇಷು ಚಾಶಿಷಃ ।
ಯಜಂತ್ಯಸೃಷ್ಟಾನ್ನವಿಧಾನದಕ್ಷಿಣಂ
ವೃತ್ತ್ಯೈ ಪರಂ ಘ್ನಂತಿ ಪಶೂನತದ್ವಿದಃ ॥ ೮ ॥

ಶ್ರಿಯಾ ವಿಭೂತ್ಯಾಭಿಜನೇನ ವಿದ್ಯಯಾ
ತ್ಯಾಗೇನ ರೂಪೇಣ ಬಲೇನ ಕರ್ಮಣಾ ।
ಜಾತಸ್ಮಯೇನಾಂಧಧಿಯಃ ಸಹೇಶ್ವರಾನ್
ಸತೋಽವಮನ್ಯಂತಿ ಹರಿಪ್ರಿಯಾನ್ ಖಲಾಃ ॥ ೯ ॥

ಸರ್ವೇಷು ಶಶ್ವತ್ತನುಭೃತ್ಸ್ವವಸ್ಥಿತಂ
ಯಥಾ ಖಮಾತ್ಮಾನಮಭೀಷ್ಟಮೀಶ್ವರಮ್ ।
ವೇದೋಪಗೀತಂ ಚ ನ ಶೃಣ್ವತೇಽಬುಧಾ
ಮನೋರಥಾನಾಂ ಪ್ರವದಂತಿ ವಾರ್ತಯಾ ॥ ೧೦ ॥

ಲೋಕೇ ವ್ಯವಾಯಾಮಿಷಮದ್ಯಸೇವಾ
ನಿತ್ಯಾಸ್ತು ಜಂತೋರ್ನ ಹಿ ತತ್ರ ಚೋದನಾ ।
ವ್ಯವಸ್ಥಿತಿಸ್ತೇಷು ವಿವಾಹಯಜ್ಞ-
ಸುರಾಗ್ರಹೈರಾಸು ನಿವೃತ್ತಿರಿಷ್ಟಾ ॥ ೧೧ ॥

ಧನಂ ಚ ಧರ್ಮೈಕಫಲಂ ಯತೋ ವೈ
ಜ್ಞಾನಂ ಸವಿಜ್ಞಾನಮನುಪ್ರಶಾಂತಿ ।
ಗೃಹೇಷು ಯುಂಜಂತಿ ಕಲೇವರಸ್ಯ
ಮೃತ್ಯುಂ ನ ಪಶ್ಯಂತಿ ದುರಂತವೀರ್ಯಮ್ ॥ ೧೨ ॥

ಯದ್ ಘ್ರಾಣಭಕ್ಷೋ ವಿಹಿತಃ ಸುರಾಯಾ-
ಸ್ತಥಾ ಪಶೋರಾಲಭನಂ ನ ಹಿಂಸಾ ।
ಏವಂ ವ್ಯವಾಯಃ ಪ್ರಜಯಾ ನ ರತ್ಯಾ
ಇಮಂ ವಿಶುದ್ಧಂ ನ ವಿದುಃ ಸ್ವಧರ್ಮಮ್ ॥ ೧೩ ॥

ಇಂತಹ ಸ್ತ್ರೀಪರಾಯಣರಾದ ಜನರು ಪರಸ್ಪರ ಮನೆವಾರ್ತೆ ಹಾಗೂ ವ್ಯರ್ಥ ಸಾಂಸಾರಿಕ ಚರ್ಚೆಯಲ್ಲಿ ತಮ್ಮ ಅಮೂಲ್ಯ ಸಮಯವನ್ನು ನಾಶಮಾಡಿಕೊಳ್ಳುತ್ತಾರೆ. ಸ್ತ್ರೀ ಸಹವಾಸದಲ್ಲೇ ಅವರಿಗೆ ಸುಖವೆಲ್ಲವೂ ಸೀಮಿತವಾಗಿರುತ್ತದೆ. ಈ ಅಜ್ಞಾನೀ ಜನರು ಅನ್ನದಾನವಿಲ್ಲದೆ, ದಕ್ಷಿಣೆಯಿಲ್ಲದೆ ಅವಿಧಿಪೂರ್ವಕ ಯಜ್ಞ ಮಾಡುತ್ತಿರುತ್ತಾರೆ. ತನ್ನ ಜೀವನ ನಿರ್ವಹಣೆಯ ವೃತ್ತಿಯಾಗಿ ಪಶುಗಳನ್ನು ಕೊಂದು ತಮ್ಮ ಇಂದ್ರಿಯಗಳನ್ನು ತೃಪ್ತಿಪಡಿಸುತ್ತಾರೆ. ಇಂತಹ ಜನರಿಗೆ ಯಜ್ಞಾನುಷ್ಠಾನದ ಹೆಸರಿನಲ್ಲಿ ಪಶುಹಿಂಸೆಯ ಮೂಲಕ ಗಳಿಸುವ ಪಾಪದ ಮೂಟೆಯ ಅರಿವೂ ಇರುವುದಿಲ್ಲ. ॥ ೮ ॥ ಇಂತಹ ದುಷ್ಟ ಜನರು ಧನ-ವೈಭವ, ಕುಲೀನತೆ, ವಿದ್ಯೆ, ದಾನ, ಸೌಂದರ್ಯ, ಬಲ, ಕರ್ಮ ಮುಂತಾದವುಗಳಿಂದ ಗರ್ವ, ಅಭಿಮಾನದಲ್ಲಿ ಮುಳುಗಿರುತ್ತಾರೆ. ಅದರಿಂದ ಮದಾಂಧರಾಗಿ ಭಗವಂತನ, ಭಗವಂತನ ಪ್ರಿಯ ಭಕ್ತರ, ಸಂತ-ಮಹಾತ್ಮರ ನಿಂದೆ ಮಾಡುತ್ತಾ ಇರುತ್ತಾರೆ. ॥ ೯ ॥ ಆಕಾಶವು ಸಮಾನವಾಗಿ ಸರ್ವತ್ರ ವ್ಯಾಪ್ತವಿರುವಂತೆಯೇ ಪರಮಾತ್ಮನು ಎಲ್ಲ ದೇಹಧಾರಿಗಳ ಒಳ-ಹೊರಗೆ ಎಲ್ಲೆಡೆ ಪರಿಪೂರ್ಣನಾಗಿದ್ದಾನೆ. ವೇದಗಳೂ ಕೂಡ ಇದನ್ನು ಅನೇಕ ಬಾರಿ ವರ್ಣಿಸಿವೆ. ಆದರೆ ಆ ಅಜ್ಞಾನಿಗಳು ಇವೆಲ್ಲ ಮಾತುಗಳನ್ನು ಕೇಳುವುದೇ ಇಲ್ಲ. ಇದಕ್ಕೆ ವಿಪರೀತವಾಗಿ ಅನೇಕ ವಿಧದ ಮನೋರಥಗಳ ವ್ಯರ್ಥಮಾತುಗಳನ್ನು ತಮ್ಮ-ತಮ್ಮಲ್ಲಿ ಆಡುತ್ತಾ ಕೇಳುತ್ತಾ ಇರುತ್ತಾರೆ. ॥ ೧೦ ॥ ಜೀವಿಗಳಲ್ಲಿ ಮೈಥುನ, ಮಾಂಸ, ಮದ್ಯ ಇವುಗಳ ಸೇವನೆಯ ಕಡೆಗೆ ಸ್ವಾಭಾವಿಕವಾಗಿಯೇ ಪ್ರವೃತ್ತಿ ಇರುತ್ತದೆ. ಇವು ಮೂರೂ ಪತನವಾಗಿಸುವಂತಹುದು. ವಿವಾಹದ ಬಳಿಕ ಋತುಕಾಲದಲ್ಲಿ ಸ್ತ್ರೀ ಸಹವಾಸ ಮತ್ತು ಸೌತ್ರಾಮಣಿ ಯಜ್ಞದಲ್ಲಿ ಸುರೆಯನ್ನು ಕೇವಲ ಮೂಸಿಬಿಡುವ ವಿಧಾನವನ್ನು ಶಾಸ್ತ್ರಗಳಲ್ಲಿ ತಿಳಿಸಲಾಗಿದೆ. ಇವೆಲ್ಲದರಲ್ಲಿ ಈ ವಸ್ತುಗಳಿಂದ ದೂರ ಉಳಿಯಲೆಂದೇ ಶಾಸ್ತ್ರಗಳ ಅಭಿಪ್ರಾಯವಾಗಿದೆ. ಜನರ ಲೌಲ್ಯ ಪ್ರವೃತ್ತಿಯನ್ನು ಮರ್ಯಾದಿತವಾಗಿ ಇಡಲೆಂದೇ ಶಾಸ್ತ್ರಗಳು ಅವುಗಳ ಸೇವನೆಗೆ ಒಂದು ಸೀಮೆಯನ್ನು ವಿಧಿಸಿವೆ. ॥ ೧೧ ॥ ಧನವನ್ನು ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸುವುದೇ ಎಲ್ಲಕ್ಕಿಂತ ಒಳ್ಳೆಯ ಉಪಾಯವಾಗಿದೆ. ಏಕೆಂದರೆ, ಧರ್ಮದಿಂದ ಜ್ಞಾನ ಪ್ರಾಪ್ತವಾಗುತ್ತದೆ. ಜ್ಞಾನದಿಂದ ಪರಮಾತ್ಮನ ಪ್ರಾಪ್ತಿ ಹಾಗೂ ಪರಮ ಶಾಂತಿ ಪ್ರಾಪ್ತವಾಗುತ್ತದೆ. ಆದರೆ ಧನವನ್ನು ಕೇವಲ ತನ್ನ ಮನೆಗಾಗಿ ಹಾಗೂ ಸಂಸಾರಕ್ಕಾಗಿ ಖರ್ಚುಮಾಡುವ ಜನರು ಈ ಶರೀರವನ್ನು ನಾಶಗೊಳಿಸುವಂತಹ ಕರಾಳ ಕಾಲವನ್ನು ನೋಡುವುದಿಲ್ಲ. ॥ ೧೨ ॥ ಸೌತ್ರಾಮಣಿಯಜ್ಞದಲ್ಲಿ ಸುರೆಯನ್ನು ಆಘ್ರಾಣಿಸುವ ವಿಧಾನ ಮಾತ್ರ ಹೇಳಲಾಗಿದೆ. (ಅದನ್ನು ಕುಡಿಯಲು ಇಲ್ಲ) ಯಜ್ಞದಲ್ಲಿ ಪಶುವನ್ನು ಸ್ಪರ್ಶಿಸುವ ವಿಧಾನ ಮಾತ್ರವಿದೆ, (ಅದನ್ನು ಕೊಲ್ಲುವುದಕ್ಕಾಗಿ ಇಲ್ಲ) ಹಾಗೆಯೇ ಮೈಥುನವೂ ಸಂತತಿ ಪರಂಪರೆಯನ್ನು ಬೆಳೆಸಲಿಕ್ಕಾಗಿಯೇ ವಿಧಿಸಿದೆ ; ರತಿಸುಖಕ್ಕಾಗಿ ಅಲ್ಲ. ಇಂತಹ ವಿಶುದ್ಧ ಧರ್ಮವನ್ನು ಅಜ್ಞಾನಿಗಳು ತಿಳಿಯುವುದಿಲ್ಲ. ॥ ೧೩ ॥

ಯೇ ತ್ವನೇವಂವಿದೋಽಸಂತಃ ಸ್ತಬ್ಧಾಃ ಸದಭಿಮಾನಿನಃ ।
ಪಶೂಂದ್ರುಹ್ಯಂತಿ ವಿಸ್ರಬ್ಧಾಃ ಪ್ರೇತ್ಯ ಖಾದಂತಿ ತೇ ಚ ತಾನ್
॥ ೧೪ ॥

ದ್ವಿಷಂತಃ ಪರಕಾಯೇಷು ಸ್ವಾತ್ಮಾನಂ ಹರಿಮೀಶ್ವರಮ್ ।
ಮೃತಕೇ ಸಾನುಬಂಧೇಽಸ್ಮಿನ್ ಬದ್ಧಸ್ನೇಹಾಃ ಪತಂತ್ಯಧಃ
॥ ೧೫ ॥

ಯೇ ಕೈವಲ್ಯಮಸಂಪ್ರಾಪ್ತಾ ಯೇ ಚಾತೀತಾಶ್ಚ ಮೂಢತಾಮ್ ।
ತ್ರೈವರ್ಗಿಕಾ ಹ್ಯಕ್ಷಣಿಕಾ ಆತ್ಮಾನಂ ಘಾತಯಂತಿ ತೇ
॥ ೧೬ ॥

ಏತ ಆತ್ಮಹನೋಽಶಾಂತಾ ಅಜ್ಞಾನೇ ಜ್ಞಾನಮಾನಿನಃ ।
ಸೀದಂತ್ಯಕೃತಕೃತ್ಯಾ ವೈ ಕಾಲಧ್ವಸ್ತಮನೋರಥಾಃ
॥ ೧೭ ॥

ಹಿತ್ವಾತ್ಮಾಯಾಸರಚಿತಾ ಗೃಹಾಪತ್ಯಸುಹೃಚ್ಛ್ರಿಯಃ ।
ತಮೋ ವಿಶಂತ್ಯನಿಚ್ಛಂತೋ ವಾಸುದೇವಪರಾಙ್ಮುಖಾಃ
॥ ೧೮ ॥

*ರಾಜೋವಾಚ*

ಕಸ್ಮಿನ್ಕಾಲೇ ಸ ಭಗವಾನ್ ಕಿಂ ವರ್ಣಃ ಕೀದೃಶೋ ನೃಭಿಃ ।
ನಾಮ್ನಾ ವಾ ಕೇನ ವಿಧಿನಾ ಪೂಜ್ಯತೇ ತದಿಹೋಚ್ಯತಾಮ್
॥ ೧೯ ॥

*ಕರಭಾಜನ ಉವಾಚ*

ಕೃತಂ ತ್ರೇತಾ ದ್ವಾಪರಂ ಚ ಕಲಿರಿತ್ಯೇಷು ಕೇಶವಃ ।
ನಾನಾವರ್ಣಾಭಿಧಾಕಾರೋ ನಾನೈವ ವಿಧಿನೇಜ್ಯತೇ
॥ ೨೦ ॥

ಕೃತೇ ಶುಕ್ಲಶ್ಚತುರ್ಬಾಹುರ್ಜಟಿಲೋ ವಲ್ಕಲಾಂಬರಃ ।
ಕೃಷ್ಣಾಜಿನೋಪವೀತಾಕ್ಷಾನ್ ಬಿಭ್ರದ್ ದಂಡಕಮಂಡಲೂ
॥ ೨೧ ॥

ಇಂತಹ ವಿಶುದ್ಧ ಧರ್ಮವನ್ನು ತಿಳಿಯದ ಗರ್ವಿಷ್ಠರಾದ ಜನರು ತಮ್ಮದೇ ಮಾತಿನಲ್ಲಿ ಹಟತೊಟ್ಟು, ತಮ್ಮದೇ ಮಾತಿನಲ್ಲಿ ಶ್ರದ್ಧೆಯಿರಿಸಿಕೊಂಡು ಮೂಕಪಶುಗಳ ಹತ್ಯೆ ಮಾಡುತ್ತಿರುತ್ತಾರೆ. ಸತ್ತಬಳಿಕ ಆ ಪಶುಗಳೇ ಈ ಕೊಲ್ಲುವವರನ್ನು ತಿಂದುಬಿಡುತ್ತವೆ. ॥ ೧೪ ॥ ಇಂತಹ ಜನರು ಈ ಮರಣಧರ್ಮಿ ಶರೀರದಲ್ಲೇ ಹಾಗೂ ತಮ್ಮ ಪರಿವಾರದಲ್ಲೇ ತಮ್ಮ ಮಮತೆಯನ್ನು ಇಟ್ಟುಕೊಳ್ಳುತ್ತಾರೆ. ಅವರು ಬೇರೆ ಜನರೊಂದಿಗೆ ದ್ವೇಷಮಾಡುತ್ತಾರೆ. ಭಗವಾನ್ ಶ್ರೀಹರಿಯೇ ಎಲ್ಲರ ಆತ್ಮಾ ಆಗಿದ್ದಾನೆ, ಈ ಮಾತನ್ನು ಅವರು ಯೋಚಿಸುವುದೇ ಇಲ್ಲ. ॥ ೧೫ ॥ ಇಂತಹ ಮೂರ್ಖರಿಗೆ ಮೋಕ್ಷದ ಪ್ರಾಪ್ತಿಯಾದರೋ ದೂರವುಳಿಯಿತು, ಅವರು ಮೂರ್ಖತೆಯ ಸೀಮೆಯನ್ನು ದಾಟಿದ ಮಹಾ ಮೂರ್ಖರು, ಅರ್ಥಾತ್ ವಜ್ರಮೂಢರು. ಈ ಜನರು ವೇದವಾದರೂಪೀ ಕ್ಷಣಭಂಗುರವಾದ, ನಾಶವುಳ್ಳ ಧರ್ಮ, ಅರ್ಥ, ಕಾಮ ಈ ಮೂರನ್ನೇ ಪುರುಷಾರ್ಥಗಳೆಂದು ಭಾವಿಸುತ್ತಾರೆ. ಈ ವಿಧವಾಗಿ ಕಾಮ್ಯಕರ್ಮಗಳ ಸುಳಿಯಲ್ಲಿ ಸಿಕ್ಕಿಹಾಕಿಕೊಂಡ ಜನರು ತಮ್ಮ ಆತ್ಮನನ್ನೇ ಕೊಲ್ಲುವವರಾಗಿದ್ದಾರೆ. ॥ ೧೬ ॥ ಈ ಪ್ರಕಾರ ಆತ್ಮಘಾತಿ ಜನರಿಗೆ ಎಂದೂ ಶಾಂತಿ ದೊರೆಯುವುದಿಲ್ಲ, ಇವರು ಅಜ್ಞಾನವನ್ನೇ ಜ್ಞಾನವೆಂದು ತಿಳಿದಿರುವರು. ಮನುಷ್ಯ ಶರೀರವು ಪರಮಾತ್ಮನ ಪ್ರಾಪ್ತಿಗಾಗಿಯೇ ದೊರೆತಿದೆ. ಆದರೆ ಇವರು ಇಂತಹ ಅಮೂಲ್ಯ ಜೀವನವನ್ನು ಪಡೆದುಕೊಂಡಿದ್ದರೂ ಪರಮ ಲಾಭದಿಂದ ವಂಚಿತರೇ ಆಗಿರುತ್ತಾರೆ ಹಾಗೂ ಕಷ್ಟಗಳನ್ನು ಭೋಗಿಸುತ್ತಲೇ ಇರುತ್ತಾರೆ. ಅವರ ಮನೋರಥಗಳು ಎಂದೂ ಪೂರ್ಣಗೊಳ್ಳುವುದಿಲ್ಲ. ॥ ೧೭ ॥ ಇಂತಹ ಜನರು ಭಗವಂತನ ಭಕ್ತಿಯಿಂದ ಪೂರ್ಣವಾಗಿ ವಿಮುಖರಾಗಿರುತ್ತಾರೆ. ಇವರು ಬಹಳ ಕಷ್ಟಪಟ್ಟು, ಭಾರೀ ಪರಿಶ್ರಮದಿಂದ ಗಳಿಸಿದ ಮನೆ, ಪುತ್ರ, ಸ್ನೇಹಿತರು, ಧನ-ಸಂಪತ್ತು ಇವನ್ನು ಬಯಸದೆಯೇ ಬಿಟ್ಟುಹೋಗಬೇಕಾಗುತ್ತದೆ ಹಾಗೂ ನರಕಭಾಜನರಾಗಬೇಕಾಗುತ್ತದೆ. (ಈ ಪ್ರಕಾರ ಭಗವಂತನ ಭಜನೆ ಮಾಡದವರ ಗತಿಯ ಕುರಿತು ನೀನು ಕೇಳಿದ್ದನ್ನು ನಾನು ಹೇಳಿರುವೆ.) ॥ ೧೮ ॥

**ರಾಜಾ ನಿಮಿಯು ಕೇಳಿದನು –** ಯೋಗೀಶ್ವರರೇ ! ಭಗವಂತನು ಯಾವಾಗ ಯಾವ ಬಣ್ಣವನ್ನು ಹೆಸರನ್ನು, ಆಕಾರವನ್ನು ಸ್ವೀಕರಿಸುತ್ತಾನೆ ? ಮನುಷ್ಯರು ಯಾವ ಹೆಸರುಗಳಿಂದ ಹಾಗೂ ಯಾವ ವಿಧಿಯಿಂದ ಅವನನ್ನು ಉಪಾಸಿಸುತ್ತಾರೆ ? ದಯವಿಟ್ಟು ನೀವು ತಿಳಿಸುವವರಾಗಿರಿ. ॥ ೧೯ ॥

**ಒಂಭತ್ತನೆಯವರಾದ ಕರಭಾಜನ ಯೋಗೀಶ್ವರರು ಹೇಳುತ್ತಾರೆ –** ರಾಜನೇ ! ಕೃತ, ತ್ರೇತಾ, ದ್ವಾಪರ, ಕಲಿ ಈ ನಾಲ್ಕೂ ಯುಗಗಳಲ್ಲಿ ಭಗವಾನ್ ಕೇಶವನ ಅನೇಕ ಬಣ್ಣ, ಹೆಸರು, ಆಕಾರಗಳಿರುತ್ತವೆ ಹಾಗೂ ಅನೇಕ ವಿಧದಿಂದ ಅವನ ಪೂಜೆ ಮಾಡಲಾಗುತ್ತದೆ. ॥ ೨೦ ॥ ಕೃತಯುಗದಲ್ಲಿ ಭಗವಂತನ ಶ್ರೀವಿಗ್ರಹದ ಬಣ್ಣ ಶ್ವೇತವಾಗಿರುತ್ತದೆ. ಅವನಿಗೆ ನಾಲ್ಕು ಭುಜಗಳಿದ್ದು ತಲೆಯಮೇಲೆ ಜಟೆ ಇರುತ್ತದೆ. ಅವನು ವಲ್ಕಲವನ್ನು ಧರಿಸಿರುತ್ತಾನೆ. ಕೃಷ್ಣಮೃಗ ಚರ್ಮ, ಯಜ್ಞೋಪವೀತ, ರುದ್ರಾಕ್ಷಮಾಲೆ, ದಂಡ, ಕಮಂಡಲು ಧರಿಸಿರುತ್ತಾನೆ. ॥ ೨೧ ॥

ಮನುಷ್ಯಾಸ್ತು ತದಾ ಶಾಂತಾ ನಿರ್ವೈರಾಃ ಸುಹೃದಃ ಸಮಾಃ ।
ಯಜಂತಿ ತಪಸಾ ದೇವಂ ಶಮೇನ ಚ ದಮೇನ ಚ ॥ ೨೨ ॥

ಹಂಸಃಸುಪರ್ಣೋ ವೈಕುಂಠೋ ಧರ್ಮೋ ಯೋಗೇಶ್ವರೋಽಮಲಃ ।
ಈಶ್ವರಃ ಪುರುಷೋಽವ್ಯಕ್ತಃ ಪರಮಾತ್ಮೇತಿ ಗೀಯತೇ ॥ ೨೩ ॥

ತ್ರೇತಾಯಾಂ ರಕ್ತವರ್ಣೋಽಸೌ ಚತುರ್ಬಾಹುಸ್ತ್ರಿಮೇಖಲಃ ।
ಹಿರಣ್ಯಕೇಶಸ್ತ್ರಯ್ಯಾತ್ಮಾ ಸ್ರುಕ್ಸ್ರುವಾದ್ಯುಪಲಕ್ಷಣಃ ॥ ೨೪ ॥

ತಂ ತದಾ ಮನುಜಾ ದೇವಂ ಸರ್ವದೇವಮಯಂ ಹರಿಮ್ ।
ಯಜಂತಿ ವಿದ್ಯಯಾ ತ್ರಯ್ಯಾ ಧರ್ಮಿಷ್ಠಾ ಬ್ರಹ್ಮವಾದಿನಃ ॥ ೨೫ ॥

ವಿಷ್ಣುರ್ಯಜ್ಞಃ ಪೃಶ್ನಿಗರ್ಭಃ ಸರ್ವದೇವ ಉರುಕ್ರಮಃ ।
ವೃಷಾಕಪಿರ್ಜಯಂತಶ್ಚ ಉರುಗಾಯ ಇತೀರ್ಯತೇ ॥ ೨೬ ॥

ದ್ವಾಪರೇ ಭಗವಾನ್ ಶ್ಯಾಮಃ ಪೀತವಾಸಾ ನಿಜಾಯುಧಃ ।
ಶ್ರೀವತ್ಸಾದಿಭಿರಂಕೈಶ್ಚ ಲಕ್ಷಣೈರುಪಲಕ್ಷಿತಃ ॥ ೨೭ ॥

ತಂ ತದಾ ಪುರುಷಂ ಮರ್ತ್ಯಾ ಮಹಾರಾಜೋಪಲಕ್ಷಣಮ್ ।
ಯಜಂತಿ ವೇದತಂತ್ರಾಭ್ಯಾಂ ಪರಂ ಜಿಜ್ಞಾಸವೋ ನೃಪ ॥ ೨೮ ॥

ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ತುಭ್ಯಂ ಭಗವತೇ ನಮಃ ॥ ೨೯ ॥

ನಾರಾಯಣಾಯ ಋಷಯೇ ಪುರುಷಾಯ ಮಹಾತ್ಮನೇ ।
ವಿಶ್ವೇಶ್ವರಾಯ ವಿಶ್ವಾಯ ಸರ್ವಭೂತಾತ್ಮನೇ ನಮಃ ॥ ೩೦ ॥

ಇತಿ ದ್ವಾಪರ ಉರ್ವೀಶ ಸ್ತುವಂತಿ ಜಗದೀಶ್ವರಮ್ ।
ನಾನಾತಂತ್ರ ವಿಧಾನೇನ ಕಲಾವಪಿ ಯಥಾ ಶೃಣು ॥ ೩೧ ॥

ಕೃತಯುಗದಲ್ಲಿ ಮನುಷ್ಯರು ತುಂಬಾ ಶಾಂತರೂ, ಪರಸ್ಪರ ವೈರರಹಿತರೂ, ಎಲ್ಲರ ಹಿತೈಷಿಗಳೂ, ಸಮದರ್ಶಿಗಳೂ ಆಗಿರುತ್ತಾರೆ. ಅವರು ಇಂದ್ರಿಯ-ಮನವನ್ನು ವಶದಲ್ಲಿರಿಸಿಕೊಂಡು ಧ್ಯಾನರೂಪೀ ತಪಸ್ಸಿನಿಂದ ಪರಮಾತ್ಮನನ್ನು ಆರಾಸುತ್ತಾರೆ. ॥ ೨೨ ॥ ಅವರು ಪರಮಾತ್ಮನನ್ನು ಹಂಸ, ಸುಪರ್ಣ, ವೈಕುಂಠ, ಧರ್ಮ, ಯೋಗೇಶ್ವರ, ಅಮಲ, ಈಶ್ವರ, ಪುರುಷ, ಅವ್ಯಕ್ತ ಈ ಹೆಸರುಗಳಿಂದ ಭಗವಂತನ ಗುಣ-ಲೀಲೆಗಳನ್ನು ಕೊಂಡಾಡುತ್ತಾರೆ. ॥ ೨೩ ॥ ರಾಜನೇ! ತ್ರೇತಾಯುಗದಲ್ಲಿ ಭಗವಂತನ ಶ್ರೀವಿಗ್ರಹದ ಬಣ್ಣ ಕೆಂಪಾಗಿರುತ್ತದೆ. ನಾಲ್ಕು ಭುಜಗಳಿದ್ದು ಕಟಿಭಾಗದಲ್ಲಿ ಮೂರು ಮೇಖಲೆಗಳಿರುತ್ತವೆ. ಅವನ ಕೇಶಗಳು ಬಂಗಾರ ವರ್ಣದ್ದಾಗಿರುತ್ತವೆ. ಅವನು ವೇದ ಪ್ರತಿಪಾದಿತ ಯಜ್ಞದ ರೂಪದಲ್ಲಿದ್ದು ಸ್ರುಕ್, ಸ್ರುವೇ ಮುಂತಾದ ಯಜ್ಞಪಾತ್ರೆಗಳನ್ನು ಧರಿಸಿರುತ್ತಾನೆ. ॥ ೨೪ ॥ ಈ ಯುಗದಲ್ಲಿ ಮನುಷ್ಯರು ತಮ್ಮ ಧರ್ಮದಲ್ಲಿ ನಿಷ್ಠೆಯುಳ್ಳವರಾಗಿದ್ದು, ವೇದಗಳ ಅಧ್ಯಯನ, ಅಧ್ಯಾಪನೆಯಲ್ಲಿ ತುಂಬಾ ಪ್ರವೀಣರಾಗಿರುತ್ತಾರೆ. ಅವರು ಋಗ್ವೇದ, ಯಜುರ್ವೇದ, ಸಾಮವೇದರೂಪೀ ವೇದತ್ರಯಿಯ ಮೂಲಕ ಸರ್ವದೇವ ಸ್ವರೂಪ ದೇವಾಧಿದೇವ ಭಗವಾನ್ ಶ್ರೀಹರಿಯನ್ನು ಆರಾಧಿಸುತ್ತಾರೆ. ॥ ೨೫ ॥ ಈ ತ್ರೇತಾಯುಗದಲ್ಲಿ ಹೆಚ್ಚಿನ ಜನರು ಭಗವಂತನನ್ನು ವಿಷ್ಣು, ಯಜ್ಞ, ಪ್ರಶ್ನಿಗರ್ಭ, ಸರ್ವದೇವ, ಉರುಕ್ರಮ, ವೃಷಾಕಪಿ, ಜಯಂತ, ಉರುಗಾಯ ಮುಂತಾದ ನಾಮಗಳಿಂದ ಕರೆದು, ಅವನ ಗುಣ-ಲೀಲಾದಿಗಳನ್ನು ಕೀರ್ತಿಸುತ್ತಾರೆ. ॥ ೨೬ ॥ ರಾಜನೇ! ದ್ವಾಪರ ಯುಗದಲ್ಲಿ ಭಗವಂತನ ಶ್ರೀವಿಗ್ರಹದ ಬಣ್ಣ ಶ್ಯಾಮಲವಾಗಿರುತ್ತದೆ. ಅವನು ಪೀತಾಂಬರ, ಶಂಖ, ಚಕ್ರ, ಗದಾ, ಪದ್ಮ ಮುಂತಾದ ಆಯುಧಗಳನ್ನು ಧರಿಸುತ್ತಾನೆ. ವಕ್ಷಸ್ಥಳದಲ್ಲಿ ಶ್ರೀವತ್ಸದ ಚಿಹ್ನೆ, ಭೃಗುಲಾಂಛನ, ಕೌಸ್ತುಭಮಣಿ ಮುಂತಾದ ಲಕ್ಷಣಗಳಿಂದ ಲಕ್ಷಿತನಾಗಿರುತ್ತಾನೆ. ॥ ೨೭ ॥ ಆಗ ಜಿಜ್ಞಾಸು ಜನರು ಮಹಾರಾಜರ ಚಿಹ್ನೆಗಳಾದ ಛತ್ರ, ಚಾಮರಾದಿಗಳಿಂದ ಯುಕ್ತ ಪರಮಪುರುಷ ಭಗವಂತನನ್ನು ವೈದಿಕ, ಆಗಮವಿಧಿಗಳಿಂದ ಆರಾಸುತ್ತಾರೆ.॥೨೮॥ ಅವರು ಭಗವಂತನನ್ನು ಈ ವಿಧವಾಗಿ ಸ್ತುತಿಸುತ್ತಾರೆ - "ಹೇ ಜ್ಞಾನಸ್ವರೂಪ ಭಗವಾನ್ ವಾಸುದೇವಾ! ಕ್ರಿಯಾಶಕ್ತಿರೂಪೀ ಸಂಕರ್ಷಣಾ! ನಾವು ನಿನಗೆ ಪದೇ-ಪದೇ ನಮಸ್ಕರಿಸುತ್ತೇವೆ. ಭಗವಾನ್ ಪ್ರದ್ಯುಮ್ನ ಮತ್ತು ಅನಿರುದ್ಧ ರೂಪದಲ್ಲಿರುವ ನಿನಗೆ ನಾವು ವಂದಿಸುತ್ತೇವೆ. ನಾರಾಯಣ ಋಷಿಯೇ! ಮಹಾತ್ಮಾ ನರನೇ! ವಿಶ್ವೇಶ್ವರ, ವಿಶ್ವರೂಪೀ, ಭಗವಾನ್ ಸರ್ವಭೂತಾತ್ಮಾ! ನಾವು ನಮಸ್ಕರಿಸುತ್ತೇವೆ. ॥ ೨೯-೩೦ ॥ ರಾಜನೇ! ದ್ವಾಪರ ಯುಗದಲ್ಲಿ ಜನರು ಈ ಪ್ರಕಾರ ಜಗದೀಶ್ವರ ಭಗವಂತನನ್ನು ಸ್ತುತಿಸುತ್ತಾರೆ. ಹೀಗೆಯೇ ಕಲಿಯುಗದಲ್ಲಿಯೂ ಅನೇಕ ಆಗಮೋಕ್ತ ರೀತಿಯಿಂದ ಭಗವಂತನನ್ನು ಹೇಗೆ ಪೂಜಿಸುತ್ತಾರೋ ಅದರ ವರ್ಣನೆಯನ್ನು ಕೇಳು. ॥ ೩೧ ॥

ಕೃಷ್ಣವರ್ಣಂ ತ್ವಿಷಾಕೃಷ್ಣಂ ಸಾಂಗೋಪಾಂಗಾಸ್ತ್ರಪಾರ್ಷದಮ್ ।
ಯಜ್ಞೈಃ ಸಂಕೀರ್ತನಪ್ರಾಯೈರ್ಯಜಂತಿ ಹಿ ಸುಮೇಧಸಃ ॥ ೩೨ ॥

ಕಲಿಯುಗದಲ್ಲಿ ಭಗವಂತನ ಬಣ್ಣವಾದರೋ ಕೃಷ್ಣವಾಗಿ ರುತ್ತದೆ, ಆದರೆ ಆ ಕೃಷ್ಣವರ್ಣವು ಇಂದ್ರನೀಲಕಾಂತಿಯಂತೆ ಉಜ್ವಲವಾಗಿರುತ್ತದೆ. ಅರ್ಥಾತ್ – ಬಹಳ ಮನೋಹರ ರೂಪ ಅವನದಾಗಿರುತ್ತದೆ. ಎಲ್ಲರನ್ನು ತನ್ನತ್ತ ಸೆಳೆದುಕೊಂಡು ಆನಂದಿತ ರನ್ನಾಗಿಸುತ್ತಾನೆ. ಅವನು ಹೃದಯಾದಿ ಅಂಗ, ಕೌಸ್ತುಭಾದಿ ಉಪಾಂಗಗಳಿಂದಲೂ, ಸುದರ್ಶನಾದಿ ಅಸ್ತ್ರ, ಸುನಂದಾದಿ ಪಾರ್ಷದರಿಂದಲೂ ಕೂಡಿಕೊಂಡಿರುತ್ತಾನೆ. ಈ ಯುಗದಲ್ಲಿ ಶ್ರೇಷ್ಠ ಬುದ್ಧಿ ಸಂಪನ್ನರಾದ ಜನರು ಅವನ ನಾಮ, ಗುಣ, ಲೀಲೆ ಮುಂತಾದವುಗಳು ಪ್ರಧಾನವಿರುವ ಸಂಕೀರ್ತನ ಯಜ್ಞದ ಮೂಲಕ ಅವನನ್ನು ಆರಾಧಿಸುತ್ತಾರೆ. ॥ ೩೨ ॥ ಅವರು ಈ ವಿಧವಾಗಿ ಭಗವಂತನನ್ನು ಸ್ತುತಿಸುತ್ತಾರೆ – ಓ ಶರಣಾಗತವತ್ಸಲ ಪ್ರಭೋ! ಮಹಾಪುರುಷನೇ! ನಿನ್ನ ಚರಣಾರವಿಂದಗಳಲ್ಲಿ ಪದೇ-ಪದೇ ನಾವು ನಮಸ್ಕರಿಸುತ್ತೇವೆ. ನಿನ್ನ ಚರಣಕಮಲಗಳು ಸದಾಕಾಲ ಧ್ಯಾನಿಸಲು ಯೋಗ್ಯವಾಗಿವೆ. ಅವು ಧ್ಯಾನ ಮಾಡು ವವರ ಎಲ್ಲ ಪ್ರಕಾರದ ಸಂಕಟಗಳನ್ನು ಇಲ್ಲವಾಗಿಸುವಂತಹವುಗಳು. ಭಕ್ತರಿಗೆ ಅಭೀಷ್ಟಪ್ರದವಾಗಿವೆ. ತೀರ್ಥಸ್ವರೂಪವಾಗಿವೆ. ಶಿವ, ಬ್ರಹ್ಮಾದಿ ದೇವತೆಗಳು ಅನವರತ ಇವನನ್ನು ವಂದಿಸುತ್ತಿರುತ್ತಾರೆ. ಶರಣಾಗಲು ಯೋಗ್ಯವಾಗಿದ್ದು ಭಕ್ತರ ಎಲ್ಲ ವಿಘ್ನ-ಬಾಧೆಗಳನ್ನು ಕಳೆಯುವಂತಹವುಗಳು. ಸಂಸಾರಸಾಗರವನ್ನು ದಾಟಿಹೋಗಲು ದೋಣಿಯಂತಿವೆ. ಇಂತಹ ನಿನ್ನ ಚರಣಕಮಲಗಳಿಗೆ ಪುನಃ-ಪುನಃ ವಂದಿಸುತ್ತೇವೆ. ॥ ೩೩ ॥ ಓ ಧರ್ಮಪಾಲಕಾ! ಮಹಾಪುರುಷನೇ! ನಾವು ನಿನ್ನ ಚರಣಕಮಲಗಳಲ್ಲಿ ಅನಂತ ಪ್ರಣಾಮಗಳನ್ನು ಮಾಡುತ್ತೇವೆ. ದೇವತೆಗಳೂ ಕೂಡ ಆಶಿಸುತ್ತಿರುವ ಅಯೋಧ್ಯೆಯ ರಾಜ್ಯಲಕ್ಷ್ಮಿಯನ್ನು ತ್ಯಾಗಮಾಡುವುದು ಬೇರೆಯವರಿಗೆ ತುಂಬು ಕಠಿಣವೇ ಆಗಿದೆ. ಆದರೆ ಪಿತೃವಾಕ್ಯ ಪರಿಪಾಲನೆಗಾಗಿ ಅದನ್ನು ಬಿಟ್ಟು ವನಕ್ಕೆ ನಡೆದ ಚರಣಕಮಲಗಳಿಗೆ, ಪ್ರಿಯ ಪತ್ನೀ ಸೀತೆಗಾಗಿ ಮಾಯಾಮೃಗದ ಹಿಂದೆ ಓಡಿದ ಚರಣಾರವಿಂದಗಳಿಗೆ ನಾವು ಕೋಟಿ-ಕೋಟಿ ಪ್ರಣಾಮ ಸಲ್ಲಿಸುತ್ತೇವೆ. ॥ ೩೪ ॥

ಧ್ಯೇಯಂ ಸದಾ ಪರಿಭವಘ್ನಮಭೀಷ್ಟದೋಹಂ
ತೀರ್ಥಾಸ್ಪದಂ ಶಿವವಿರಿಂಚಿನುತಂ ಶರಣ್ಯಮ್ ।
ಭೃತ್ಯಾರ್ತಿಹಂ ಪ್ರಣತಪಾಲ ಭವಾಬ್ಧಿಪೋತಂ
ವಂದೇ ಮಹಾಪುರುಷ ತೇ ಚರಣಾರವಿಂದಮ್ ॥ ೩೩ ॥

ತ್ಯಕ್ತ್ವಾ ಸುದುಸ್ತ್ಯಜಸುರೇಪ್ಸಿತರಾಜ್ಯಲಕ್ಷ್ಮೀಂ
ಧರ್ಮಿಷ್ಠ ಆರ್ಯವಚಸಾ ಯದಗಾದರಣ್ಯಮ್ ।
ಮಾಯಾಮೃಗಂ ದಯಿತಯೇಪ್ಸಿತಮನ್ವಧಾವದ್
ವಂದೇ ಮಹಾಪುರುಷ ತೇ ಚರಣಾರವಿಂದಮ್ ॥ ೩೪ ॥

ಏವಂ ಯುಗಾನುರೂಪಾಭ್ಯಾಂ ಭಗವಾನ್ ಯುಗವರ್ತಿಭಿಃ ।
ಮನುಜೈರಿಜ್ಯತೇ ರಾಜನ್ ಶ್ರೇಯಸಾಮೀಶ್ವರೋ ಹರಿಃ ॥ ೩೫ ॥

ರಾಜನೇ! ಈ ವಿಧವಾಗಿ ವಿಭಿನ್ನ ಯುಗದ ಜನರು ತಮ್ಮ-ತಮ್ಮ ಯುಗಕ್ಕನುರೂಪವಾಗಿ ನಾಮ ಮತ್ತು ರೂಪಗಳ ಮೂಲಕ ಬೇರೆ-ಬೇರೆ ಪ್ರಕಾರದಿಂದ ಭಗವಂತನನ್ನು ಆರಾಧಿಸುತ್ತಾರೆ. ಧರ್ಮ, ಅರ್ಥ, ಕಾಮ, ಮೋಕ್ಷ ಮೊದಲಾದ ಎಲ್ಲ ಪುರುಷಾರ್ಥಗಳ ಏಕಮಾತ್ರ ಸ್ವಾಮಿಯಾದರೋ ಭಗವಾನ್ ಶ್ರೀಹರಿಯೇ ಆಗಿರುವನು ಇದರಲ್ಲಿ ಸಂದೇಹವೇ ಇಲ್ಲ. ॥ ೩೫ ॥ ಯುಗಗಳ ಗುಣಗಳನ್ನು ಬಲ್ಲವರು, ಸಾರಗ್ರಾಹಿಗಳು ಕಲಿಯುಗವನ್ನು ತುಂಬಾ ಪ್ರಶಂಸಿಸುತ್ತಾರೆ. ಕಾರಣ ಈ ಕಲಿಯುಗದಲ್ಲಿ ಕೇವಲ ಭಗವಂತನ ನಾಮಸಂಕೀರ್ತನದಿಂದಲೇ ಎಲ್ಲ ಪ್ರಕಾರದ ಸ್ವಾರ್ಥ ಮತ್ತು ಪರಮಾರ್ಥ ಲಭಿಸುತ್ತದೆ. ॥ ೩೬ ॥ ದೇಹಾಭಿಮಾನಿ ಜೀವರು ಈ ಸಂಸಾರಚಕ್ರದಲ್ಲಿ ಸುತ್ತುತ್ತಾ ಇರುತ್ತಾರೆ. ಅವರಿಗಾಗಿ ಭಗವಂತನ ನಾಮ ಸಂಕೀರ್ತನೆಯಂತಹ ಸರಳ ಸಾಧನೆಯಿದೆ. ಇದರಿಂದ ಪರಮ ಶಾಂತಿಯು ಸಿಗುತ್ತದೆ ಹಾಗೂ ಎಂದೆಂದಿಗೂ ಜನ್ಮ-ಮರಣಗಳ ಪರಿಭ್ರಮಣೆ ಮುಗಿದು ಹೋಗುತ್ತದೆ. ಮನುಷ್ಯನಿಗೆ ಇದರಿಂದ ಮಿಗಿಲಾದ ಇನ್ನೊಂದು ಲಾಭವು ಇಲ್ಲವೇ ಇಲ್ಲ. ॥ ೩೭ ॥

ಕಲಿಂ ಸಭಾಜಯಂತ್ಯಾರ್ಯಾ ಗುಣಜ್ಞಾಃ ಸಾರಭಾಗಿನಃ ।
ಯತ್ರ ಸಂಕೀರ್ತನೇನೈವ ಸರ್ವಃ ಸ್ವಾರ್ಥೋಽಭಿಲಭ್ಯತೇ ॥ ೩೬ ॥

ನ ಹ್ಯತಃ ಪರಮೋ ಲಾಭೋ ದೇಹಿನಾಂ ಭ್ರಾಮ್ಯತಾಮಿಹ ।
ಯತೋ ವಿಂದೇತ ಪರಮಾಂ ಶಾಂತಿಂ ನಶ್ಯತಿ ಸಂಸೃತಿಃ ॥ ೩೭ ॥

**ಕೃತಾದಿಷು ಪ್ರಜಾ ರಾಜನ್ ಕಲಾವಿಚ್ಛಂತಿ ಸಂಭವಮ್ ।**
**ಕಲೌ ಖಲು ಭವಿಷ್ಯಂತಿ ನಾರಾಯಣಪರಾಯಣಾಃ**
**॥ ೩೮ ॥**

**ಕ್ವಚಿತ್ ಕ್ವಚಿನ್ಮಹಾರಾಜ ದ್ರವಿಡೇಷು ಚ ಭೂರಿಶಃ ।**
**ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ**
**॥ ೩೯ ॥**

**ಕಾವೇರೀ ಚ ಮಹಾಪುಣ್ಯಾ ಪ್ರತೀಚೀ ಚ ಮಹಾನದೀ ।**
**ಯೇ ಪಿಬಂತಿ ಜಲಂ ತಾಸಾಂ ಮನುಜಾ ಮನುಜೇಶ್ವರ ।**
**ಪ್ರಾಯೋ ಭಕ್ತಾ ಭಗವತಿ ವಾಸುದೇವೇಽಮಲಾಶಯಾಃ**
**॥ ೪೦ ॥**

**ದೇವರ್ಷಿಭೂತಾಪ್ತನೃಣಾಂ ಪಿತೄಣಾಂ**
**ನ ಕಿಂಕರೋ ನಾಯಮೃಣೀ ಚ ರಾಜನ್ ।**
**ಸರ್ವಾತ್ಮನಾ ಯಃ ಶರಣಂ ಶರಣ್ಯಂ**
**ಗತೋ ಮುಕುಂದಂ ಪರಿಹೃತ್ಯ ಕರ್ತಮ್ ॥ ೪೧ ॥**

**ಸ್ವಪಾದಮೂಲಂ ಭಜತಃ ಪ್ರಿಯಸ್ಯ**
**ತ್ಯಕ್ತಾನ್ಯಭಾವಸ್ಯ ಹರಿಃ ಪರೇಶಃ ।**
**ವಿಕರ್ಮ ಯಚ್ಚೋತ್ಪತಿತಂ ಕಥಂಚಿದ್**
**ಧುನೋತಿ ಸರ್ವಂ ಹೃದಿ ಸನ್ನಿವಿಷ್ಟಃ ॥ ೪೨ ॥**

*ನಾರದ ಉವಾಚ*

**ಧರ್ಮಾನ್ಭಾಗವತಾನಿತ್ಥಂ ಶ್ರುತ್ವಾಥ ಮಿಥಿಲೇಶ್ವರಃ ।**
**ಜಾಯಂತೇಯಾನ್ ಮುನೀನ್ಪ್ರೀತಃ ಸೋಪಾಧ್ಯಾಯೋ ಹ್ಯಪೂಜಯತ್**
**॥ ೪೩ ॥**

**ತತೋಽಂತರ್ದಧಿರೇ ಸಿದ್ಧಾಃ ಸರ್ವಲೋಕಸ್ಯ ಪಶ್ಯತಃ ।**
**ರಾಜಾ ಧರ್ಮಾನುಪಾತಿಷ್ಠನ್ನವಾಪ ಪರಮಾಂ ಗತಿಮ್**
**॥ ೪೪ ॥**

**ತ್ವಮಪ್ಯೇತಾನ್ಮಹಾಭಾಗ ಧರ್ಮಾನ್ಭಾಗವತಾನ್ ಶ್ರುತಾನ್ ।**
**ಆಸ್ಥಿತಃ ಶ್ರದ್ಧಯಾ ಯುಕ್ತೋ ನಿಃಸಂಗೋ ಯಾಸ್ಯಸೇ ಪರಮ್**
**॥ ೪೫ ॥**

ರಾಜನೇ ! ಕೃತಯುಗವೇ ಮೊದಲಾದ ಯುಗಗಳಲ್ಲಿ ಹುಟ್ಟಿದ ಜನರೂ ಕೂಡ ಈ ಕಲಿಯುಗದಲ್ಲಿ ಜನ್ಮತಳೆಯಲು ಬಯಸುತ್ತಾರೆ. ಏಕೆಂದರೆ, ಕಲಿಯುಗದಲ್ಲಿ ಅಲ್ಲಲ್ಲಿ ಭಗವಾನ್ ನಾರಾಯಣನ ಶರಣಾಗತರು ಮತ್ತು ಅವನ ಆಶ್ರಿತರಾದ ಅನೇಕ ಭಕ್ತರು ಉಂಟಾಗುವರು. ॥ ೩೮ ॥ ಎಲೈ ರಾಜನೇ ! ಕಲಿಯುಗದಲ್ಲಿ ದ್ರವಿಡದೇಶದಲ್ಲಿ (ದಕ್ಷಿಣಭಾರತದಲ್ಲಿ) ಅನೇಕ ಭಕ್ತರಾಗುವರು. ತಾಮ್ರಪರ್ಣೀ, ಕೃತಮಾಲಾ, ಪಯಸ್ವಿನೀ, ಪರಮಪವಿತ್ರ ಕಾವೇರಿ, ಮಹಾನದಿ ಹಾಗೂ ಪ್ರತೀಚೀ ಮೊದಲಾದ ನದಿಗಳು ಹರಿಯುವಲ್ಲೆಲ್ಲ ಭಕ್ತರು ಹುಟ್ಟುವರು. ರಾಜನೇ ! ಈ ಪವಿತ್ರ ನದಿಗಳ ನೀರನ್ನು ಕುಡಿದವರ ಅಂತಃಕರಣ ಶುದ್ಧವಾಗಿ ಅವರು ಭಗವಾನ್ ವಾಸುದೇವನ ಪರಮ ಭಕ್ತರಾಗುವರು. ॥ ೩೯-೪೦ ॥

ಶರಣಾಗಲು ಏಕಮಾತ್ರ ಭಗವಂತನೇ ಯೋಗ್ಯನಾಗಿದ್ದಾನೆ. ಪೂರ್ಣರೂಪದಿಂದ ಭಗವಂತನಿಗೆ ಶರಣಾದ ಭಕ್ತನು ದೇವತೆಗಳು, ಋಷಿಗಳು, ಪಿತೃಗಳು, ಕುಟುಂಬಿಗಳು, ಅತಿಥಿಗಳು ಹೀಗೆ ಇವರೆಲ್ಲರ ಋಣದಿಂದ ಮುಕ್ತನಾಗುತ್ತಾನೆ. ಅವನು ಇವರಲ್ಲಿ ಯಾರ ಕಿಂಕರನೂ ಆಗಿರುವುದಿಲ್ಲ. ಅವನು ಎಲ್ಲ ಕರ್ಮವಾಸನೆಗಳಿಂದ, ಕರ್ಮಬಂಧನದಿಂದ ಪೂರ್ಣವಾಗಿ ಮುಕ್ತನಾಗಿ, ಮುಕ್ತಿಯ ಮತ್ತು ಪ್ರೇಮದ ದಾತೃ ಭಗವಂತನನ್ನು ಪಡೆದುಕೊಳ್ಳುತ್ತಾನೆ. ॥ ೪೧ ॥ ಭಗವಂತನ ಅನನ್ಯ ಶರಣಾಗತಿಯನ್ನು ಪಡೆದ ಭಕ್ತರಿಂದ ಪಾಪಕರ್ಮಗಳಾದರೋ ಆಗುವುದೇ ಇಲ್ಲ. ಕದಾಚಿತ್ ಯಾವುದಾದರೂ ಪಾಪಕರ್ಮ, ನಿಷಿದ್ಧಕರ್ಮ ನಡೆದು ಹೋದರೂ, ಎಲ್ಲರ ಹೃದಯದಲ್ಲಿ ವಿರಾಜಮಾನನಾದ ಸರ್ವೇಶ್ವರ ಭಗವಾನ್ ಶ್ರೀಹರಿಯು ಸ್ವತಃ ಅವನ ಹೃದಯದ ಪಾಪಗಳನ್ನು ಮತ್ತು ಪಾಪವಾಸನೆಗಳನ್ನು ತೊಳೆದು ಅವನನ್ನು ಶುದ್ಧವಾಗಿಸುತ್ತಾನೆ. ॥ ೪೨ ॥*

**ನಾರದರು ಹೇಳುತ್ತಾರೆ** – ವಸುದೇವನೇ ! ಮಿಥಿಲಾಧೀಶ ರಾಜಾ ನಿಮಿಯು ಒಂಭತ್ತು ಯೋಗೀಶ್ವರರಿಂದ ಈ ವಿಧವಾಗಿ ಭಾಗವತಧರ್ಮಗಳ ವರ್ಣನೆಯನ್ನು ಕೇಳಿ ಬಹಳ ಆನಂದಿತನಾದನು. ಅವನು ತನ್ನ ಋತ್ವಿಜರು ಮತ್ತು ಆಚಾರ್ಯರೊಂದಿಗೆ ಋಷಭನಂದನ ** ನವಯೋಗೀಶ್ವರರನ್ನು ಭಕ್ತಿಯಿಂದ ಪೂಜಿಸಿದನು. ॥ ೪೩ ॥ ಇದಾದ ಬಳಿಕ ಎಲ್ಲರೂ ನೋಡುತ್ತಿರುವಂತೆಯೇ ಆ ಸಿದ್ಧರು ಅಂತರ್ಧಾನರಾದರು. ವಿದೇಹರಾಜಾ ನಿಮಿಯು ಅವರಿಂದ ಕೇಳಿದ ಭಾಗವತ ಧರ್ಮಗಳನ್ನು ಆಚರಿಸುತ್ತಾ, ಪರಮಗತಿಯನ್ನು ಪಡೆದುಕೊಂಡನು. ॥ ೪೪ ॥ ಮಹಾಭಾಗ್ಯವಂತನಾದ ವಸುದೇವನೇ ! ನಾನು ನಿನ್ನ ಮುಂದೆಯೂ ಭಾಗವತ ಧರ್ಮಗಳನ್ನು ವರ್ಣಿಸಿರುವೆನು. ನೀನೂ ಕೂಡ ಶ್ರದ್ಧೆಯಿಂದ ಇವುಗಳನ್ನು ಆಚರಿಸಿದರೆ ಕೊನೆಗೆ ಎಲ್ಲ ಆಸಕ್ತಿಗಳಿಂದ ಬಿಡುಗಡೆಹೊಂದಿ ಪರಮಪದವನ್ನು ಪಡೆದುಕೊಳ್ಳಬಲ್ಲೆ. ॥ ೪೫ ॥

* (ಈ ಪ್ರಕಾರ ನವಯೋಗೀಶ್ವರರ ಪ್ರಕರಣವು ಶರಣಾಗತಿಯಿಂದ ಪ್ರಾರಂಭವಾಗಿ, ಪರ್ಯವಸಾನವೂ ಶರಣಾಗತಿಯಲ್ಲೇ ಆಗಿದೆ. ಆತ್ಯಂತಿಕ ಶ್ರೇಯಸ್ಸನ್ನು ಪಡೆಯಲು ಶರಣಾಗತಿಯೇ ಸರ್ವೋತ್ಕೃಷ್ಟ ಸಾಧನೆಯಾಗಿದೆ.)

** ಈ ಯೋಗೀಶ್ವರರ ತಾಯಿಯ ಹೆಸರು ಜಯಂತಿ ಎಂದಿದ್ದು ತಂದೆ ಭಗವಾನ್ ಋಷಭದೇವರಾಗಿದ್ದಾರೆ. ಅದಕ್ಕಾಗಿ ಶ್ಲೋಕದಲ್ಲಿ 'ಜಾಯಂತೇಯಾನ್' ಎಂಬ ಶಬ್ದದಿಂದ ಇವರ ತಾಯಿ ಜಯಂತಿಯೆಂದು ತಿಳಿದುಕೊಳ್ಳಬೇಕು.

ಯುವಯೋಃ ಖಲು ದಂಪತ್ಯೋರ್ಯಶಸಾ ಪೂರಿತಂ ಜಗತ್ ।
ಪುತ್ರತಾಮಗಮದ್ಯದ್ವಾಂ ಭಗವಾನೀಶ್ವರೋ ಹರಿಃ ॥ ೪೬ ॥

ದರ್ಶನಾಲಿಂಗನಾಲಾಪೈಃ ಶಯನಾಸನಭೋಜನೈಃ ।
ಆತ್ಮಾ ವಾಂ ಪಾವಿತಃ ಕೃಷ್ಣೇ ಪುತ್ರಸ್ನೇಹಂ ಪ್ರಕುರ್ವತೋಃ ॥ ೪೭ ॥

ವೈರೇಣ ಯಂ ನೃಪತಯಃ ಶಿಶುಪಾಲಪೌಂಡ್ರ-
ಶಾಲ್ವಾದಯೋ ಗತಿವಿಲಾಸವಿಲೋಕನಾದ್ಯೈಃ ।
ಧ್ಯಾಯಂತ ಆಕೃತಧಿಯಃ ಶಯನಾಸನಾದೌ
ತತ್ಸಾಮ್ಯಮಾಪುರನುರಕ್ತಧಿಯಾಂ ಪುನಃ ಕಿಮ್ ॥ ೪೮ ॥

ಮಾಽಪತ್ಯಬುದ್ಧಿಮಕೃಥಾಃ ಕೃಷ್ಣೇ ಸರ್ವಾತ್ಮನೀಶ್ವರೇ ।
ಮಾಯಾಮನುಷ್ಯಭಾವೇನ ಗೂಢೈಶ್ವರ್ಯೇ ಪರೇಽವ್ಯಯೇ ॥ ೪೯ ॥

ಭೂಭಾರಾಸುರರಾಜನ್ಯಹಂತವೇ ಗುಪ್ತಯೇ ಸತಾಮ್ ।
ಅವತೀರ್ಣಸ್ಯ ನಿರ್ವೃತ್ಯೈ ಯಶೋ ಲೋಕೇ ವಿತನ್ಯತೇ ॥ ೫೦ ॥

ಶ್ರೀಶುಕ ಉವಾಚ

ಏತಚ್ಛ್ರುತ್ವಾ ಮಹಾಭಾಗೋ ವಸುದೇವೋಽತಿವಿಸ್ಮಿತಃ ।
ದೇವಕೀ ಚ ಮಹಾಭಾಗಾ ಜಹತುರ್ಮೋಹಮಾತ್ಮನಃ ॥ ೫೧ ॥

ಇತಿಹಾಸಮಿಮಂ ಪುಣ್ಯಂ ಧಾರಯೇದ್ಯಃ ಸಮಾಹಿತಃ ।
ಸ ವಿಧೂಯೇಹ ಶಮಲಂ ಬ್ರಹ್ಮಭೂಯಾಯ ಕಲ್ಪತೇ ॥ ೫೨ ॥

ವಸುದೇವನೇ! ನಿನ್ನ ಮತ್ತು ದೇವಕಿಯ ಕೀರ್ತಿಯಿಂದಲಾದರೋ ಇಡೀ ವಿಶ್ವವೇ ತುಂಬಿಹೋಗಿದೆ. ಏಕೆಂದರೆ, ಸರ್ವಶಕ್ತಿವಂತ ಭಗವಾನ್ ಶ್ರೀಕೃಷ್ಣನು ನಿಮ್ಮ ಪುತ್ರನಾಗಿ ಅವತರಿಸಿರುವನು. ॥ ೪೬ ॥ ನೀವುಗಳೆಲ್ಲ ಭಗವಂತನ ದರ್ಶನ, ಆಲಿಂಗನ ಹಾಗೂ ಮಾತು-ಕತೆಗಳಿಂದ, ಅವನನ್ನು ಮಲಗಿಸುವುದು, ಆಡಿಸುವುದು ಇವುಗಳ ಮೂಲಕ ವಾತ್ಸಲ್ಯಸ್ನೇಹಗೈದು ನಿಮ್ಮ ಹೃದಯವನ್ನು ಪವಿತ್ರವಾಗಿಸಿಕೊಂಡಿರುವಿರಿ. ಇದರಿಂದ ನೀವು ಪರಮ ಪವಿತ್ರರಾಗಿ ಹೋಗಿದ್ದೀರಿ. ॥ ೪೭ ॥ ವಸುದೇವನೇ! ಶಿಶುಪಾಲ, ಪೌಂಡ್ರಕ, ಶಾಲ್ವ ಮುಂತಾದ ರಾಜರಾದರೋ ವೈರಭಾವದಿಂದ ಶ್ರೀಕೃಷ್ಣನ ನಡೆ-ನುಡಿ, ಲೀಲಾವಿಲಾಸ, ನೋಟ ಮಾಟ ಮುಂತಾದವುಗಳನ್ನು ಸ್ಮರಿಸಿದ್ದರು. ಅದೂ ಕೂಡ ನಿಯಮಾನುಸಾರವಲ್ಲ, ಮಲಗುವಾಗ, ಕುಳಿತಿರುವಾಗ, ಓಡಾಡುವಾಗ ಸ್ವಾಭಾವಿಕವಾಗಿಯೇ ಇತ್ತು. ಆದರೂ ಕೂಡ ಅವರ ಚಿತ್ತವೃತ್ತಿ ಶ್ರೀಕೃಷ್ಣಾಕಾರವಾಯಿತು ಹಾಗೂ ಸಾರೂಪ್ಯ ಮುಕ್ತಿಯ ಅಧಿಕಾರಿಗಳಾದರು. ಹಾಗಿರುವಾಗ ಪ್ರೇಮಭಾವದಿಂದ, ಅನುರಾಗಪೂರ್ವಕ ಶ್ರೀಕೃಷ್ಣನನ್ನು ಚಿಂತಿಸುವವರಿಗೆ ಶ್ರೀಕೃಷ್ಣನ ಪ್ರಾಪ್ತಿಯಾಗುವುದರಲ್ಲಿ ಸಂದೇಹವೇನಿದೆ? ॥ ೪೮ ॥ ವಸುದೇವಾ! ನೀನು ಶ್ರೀಕೃಷ್ಣನನ್ನು ಕೇವಲ ನಿನ್ನ ಪುತ್ರನೆಂದೇ ತಿಳಿಯಬೇಡ. ಅವನು ಸರ್ವಾತ್ಮಾ ಸರ್ವೇಶ್ವರ, ಕಾರಣಾತೀತ, ಅವಿನಾಶಿಯಾಗಿದ್ದಾನೆ. ಅವನು ಲೀಲೆಗಾಗಿ ಮನುಷ್ಯರೂಪದಿಂದ ಪ್ರಕಟನಾಗಿ, ತನ್ನ ಐಶ್ವರ್ಯವನ್ನು ಅಡಗಿಸಿಟ್ಟಿರುವನು. ॥ ೪೯ ॥ ಅವನು ಪೃಥ್ವಿಯ ಭಾರರೂಪೀ ರಾಜವೇಷಧಾರೀ ಅಸುರರನ್ನು ನಾಶಗೊಳಿಸಲು ಮತ್ತು ಸಂತರನ್ನು ರಕ್ಷಿಸಲು, ಜೀವಿಗಳಿಗೆ ಪರಮ ಶಾಂತಿ, ಮುಕ್ತಿ ಕೊಡಲೋಸುಗವೇ ಅವತರಿಸಿರುವನು. ಅದಕ್ಕಾಗಿಯೇ ಜಗತ್ತಿನಲ್ಲಿ ಅವನ ಕೀರ್ತಿಯು ಹಾಡಲ್ಪಡುತ್ತಿದೆ. ॥ ೫೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪ್ರಿಯ ಪರೀಕ್ಷಿತನೇ! ನಾರದರ ಬಾಯಿಂದ ಇದೆಲ್ಲವನ್ನು ಕೇಳಿ ಪರಮಭಾಗ್ಯವಂತ ವಸುದೇವನು ಮತ್ತು ಪರಮಭಾಗ್ಯವತಿ ದೇವಕಿಗೆ ಭಾರೀ ವಿಸ್ಮಯವಾಯಿತು. ಅವರಲ್ಲಿದ್ದ ಅಲ್ಪ-ಸ್ವಲ್ಪ ಮಾಯಾ-ಮೋಹ ಶೇಷವನ್ನು ಅವರು ತಕ್ಷಣ ತ್ಯಜಿಸಿದರು. ॥ ೫೧ ॥ ರಾಜನೇ ಈ ಪರಮ ಪವಿತ್ರ ಇತಿಹಾಸವನ್ನು ಧರಿಸುವವನು ತನ್ನ ಎಲ್ಲ ಶೋಕ-ಮೋಹಗಳನ್ನು ದೂರಗೈದು ಬ್ರಹ್ಮಪದವನ್ನು ಪಡೆದುಕೊಳ್ಳುವನು. ॥ ೫೨ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಪಂಚಮೋಽಧ್ಯಾಯಃ ॥ ೫ ॥**

# ಆರನೆಯ ಅಧ್ಯಾಯ

## ದೇವತೆಗಳು ಶ್ರೀಕೃಷ್ಣನನ್ನು ತನ್ನ ಪರಮಪದಕ್ಕೆ ಹಿಂದಿರುಗಲು ಪ್ರಾರ್ಥಿಸಿದುದು ; ಯಾದವರು ಪ್ರಭಾಸ ಕ್ಷೇತ್ರಕ್ಕೆ ಹೊರಡಲು ಸಿದ್ಧರಾಗುತ್ತಿರುವುದನ್ನು ನೋಡಿ, ಉದ್ಧವನು ಶ್ರೀಕೃಷ್ಣನ ಬಳಿಗೆ ಹೋದುದು

*ಶ್ರೀಶುಕ ಉವಾಚ*

ಅಥ ಬ್ರಹ್ಮಾಽತ್ಮಜೈರ್ದೇವೈಃ ಪ್ರಜೇಶೈರಾವೃತೋಽಭ್ಯಗಾತ್ ।
ಭವಶ್ಚ ಭೂತಭವ್ಯೇಶೋ ಯಯೌ ಭೂತಗಣೈರ್ವೃತಃ ॥ ೧ ॥

ಇಂದ್ರೋ ಮರುದ್ಭಿರ್ಭಗವಾನಾದಿತ್ಯಾ ವಸವೋಽಶ್ವಿನೌ ।
ಋಭವೋಽಂಗಿರಸೋ ರುದ್ರಾ ವಿಶ್ವೇ ಸಾಧ್ಯಾಶ್ಚ ದೇವತಾಃ ॥ ೨ ॥

ಗಂಧರ್ವಾಪ್ಸರಸೋ ನಾಗಾಃ ಸಿದ್ಧಚಾರಣಗುಹ್ಯಕಾಃ ।
ಋಷಯಃ ಪಿತರಶ್ಚೈವ ಸವಿದ್ಯಾಧರಕಿನ್ನರಾಃ ॥ ೩ ॥

ದ್ವಾರಕಾಮುಪಸಂಜಗ್ಮುಃ ಸರ್ವೇ ಕೃಷ್ಣದಿದೃಕ್ಷವಃ ।
ವಪುಷಾ ಯೇನ ಭಗವಾನ್ ನರಲೋಕಮನೋರಮಃ ।
ಯಶೋ ವಿತೇನೇ ಲೋಕೇಷು ಸರ್ವಲೋಕಮಲಾಪಹಮ್ ॥ ೪ ॥

ತಸ್ಯಾಂ ವಿಭ್ರಾಜಮಾನಾಯಾಂ ಸಮೃದ್ಧಾಯಾಂ ಮಹರ್ದ್ಧಿಭಿಃ ।
ವ್ಯಚಕ್ಷತಾವಿತೃಪ್ತಾಕ್ಷಾಃ ಕೃಷ್ಣಮದ್ಭುತದರ್ಶನಮ್ ॥ ೫ ॥

ಸ್ವರ್ಗೋದ್ಯಾನೋಪಗೈರ್ಮಾಲ್ಯೈಶ್ಛಾದಯಂತೋ ಯದೂತ್ತಮಮ್ ।
ಗೀರ್ಭಿಶ್ಚಿತ್ರಪದಾರ್ಥಾಭಿಸ್ತುಷ್ಟುವುರ್ಜಗದೀಶ್ವರಮ್ ॥ ೬ ॥

*ದೇವಾ ಊಚುಃ*

ನತಾಃ ಸ್ಮ ತೇ ನಾಥ ಪದಾರವಿಂದಂ
ಬುದ್ಧೀಂದ್ರಿಯಪ್ರಾಣಮನೋವಚೋಭಿಃ ।
ಯಚ್ಚಿಂತ್ಯತೇಽಂತರ್ಹೃದಿ ಭಾವಯುಕ್ತೈ-
ರ್ಮುಮುಕ್ಷುಭಿಃ ಕರ್ಮಮಯೋರುಪಾಶಾತ್ ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪ್ರಿಯ ಪರೀಕ್ಷಿತರಾಜನೇ ! ಮಹರ್ಷಿಗಳಾದ ನಾರದರು ವಸುದೇವನಿಗೆ ಭಾಗವತಧರ್ಮವನ್ನು ಉಪದೇಶಿಸಿ ಹೊರಟುಹೋದ ಬಳಿಕ, ಒಮ್ಮೆ ಬ್ರಹ್ಮದೇವರು ಭಗವಾನ್ ಶ್ರೀಕೃಷ್ಣನನ್ನು ದರ್ಶಿಸುವ ಇಚ್ಛೆಯಿಂದ ದ್ವಾರಕೆಗೆ ಬಂದರು. ಅವರೊಂದಿಗೆ ಅವರ ಪುತ್ರರಾದ ಸನಕಾದಿಗಳು, ಬೇರೆ ದೇವತೆಗಳೂ, ಪ್ರಜಾಪತಿಗಳೂ ಇದ್ದರು. ಶಂಕರನೂ ಭೂತಗಣಗಳೊಂದಿಗೆ ಬಂದರು. ಮರುದ್ಗಣರೊಡನೆ ದೇವರಾಜ ಇಂದ್ರನೂ ಆಗಮಿಸಿದನು. ಇಂದ್ರನನ್ನು ಅನುಸರಿಸಿ ದ್ವಾದಶ ಆದಿತ್ಯರೂ, ಅಷ್ಟವಸುಗಳೂ, ಅಶ್ವಿನೀ ದೇವತೆಗಳೂ, ಋಭು, ಆಂಗೀರಸ ವಂಶಜ ಋಷಿಗಳೂ, ಏಕಾದಶ ರುದ್ರರೂ, ವಿಶ್ವೇದೇವತೆಗಳೂ, ಸಾಧ್ಯದೇವತೆಗಳೂ, ಗಂಧರ್ವಾಪ್ಸರೆಯರೂ, ನಾಗರೂ, ಸಿದ್ಧರೂ, ಚಾರಣರೂ, ಗುಹ್ಯಕರೂ, ಋಷಿಗಳೂ, ಪಿತೃಗಳೂ, ವಿದ್ಯಾಧರ-ಕಿನ್ನರರೂ ಶ್ರೀಕೃಷ್ಣನನ್ನು ಸಂದರ್ಶಿಸಲು ದ್ವಾರಕೆಗೆ ಬಂದರು. ಭಗವಂತನ ಶ್ಯಾಮಸುಂದರ ವಿಗ್ರಹ ಶ್ರೀಕೃಷ್ಣನ ಸ್ವರೂಪವು ಎಲ್ಲರ ಮನಸ್ಸನ್ನು ಆನಂದಿತವಾಗಿಸುವಂತಹುದು. ಶ್ರೀಕೃಷ್ಣಾವತಾರದ ಮೂಲಕ ಗೈದ ಲೀಲೆಗಳನ್ನು ಗಾಯನ, ಶ್ರವಣ, ವರ್ಣನೆ ಮಾಡುವುದರಿಂದ ಎಲ್ಲ ಪಾಪರಾಶಿಗಳು ಸುಟ್ಟುಹೋಗುವಂತಹ ಮಂಗಲಮಯ ಕೀರ್ತಿಯನ್ನು ವಿಸ್ತರಿಸಿದನು. ॥ ೧-೪ ॥ ಸರ್ವಸಂಪತ್ತಿನಿಂದಲೂ ಸಮೃದ್ಧವಾಗಿ, ಲೋಕೋತ್ತರವಾದ ಪ್ರಕಾಶದಿಂದ ಬೆಳಗುತ್ತಿರುವ ದ್ವಾರಕಾಪಟ್ಟಣದಲ್ಲಿ ಅದ್ಭುತದರ್ಶನನಾದ ಶ್ರೀಕೃಷ್ಣನನ್ನು ಎಷ್ಟು ನೋಡಿದರೂ ತೃಪ್ತಿಹೊಂದದ ಕಣ್ಣುಗಳಿಂದ ಬ್ರಹ್ಮಾದಿದೇವತೆಗಳು ನೋಡುತ್ತಿದ್ದರು. ॥ ೫ ॥ ಶ್ರೀಕೃಷ್ಣನ ದಿವ್ಯ ದರ್ಶನದಿಂದ ಆನಂದತುಂದಿಲರಾದ ಅವರು ಸ್ವರ್ಗದ ಉದ್ಯಾನವಾದ ನಂದನ ವನದಿಂದಲೂ, ಚೈತ್ರರಥವನದಿಂದಲೂ ತಂದಿರುವ ದಿವ್ಯವಾದ ಪುಷ್ಪಮಾಲಿಕೆಗಳಿಂದ ಜಗದೀಶ್ವರನಾದ ಭಗವಾನ್ ಶ್ರೀಕೃಷ್ಣನನ್ನು ನಾನಾ ವಿಧವಾಗಿ ಅಲಂಕರಿಸಿ, ಸುಂದರ ಸ್ತೋತ್ರಗಳಿಂದ ಹಾಗೂ ಅರ್ಥವತ್ತಾದ ಸವಿಮಾತುಗಳ ಮೂಲಕ ಭಗವಂತನನ್ನು ಸ್ತುತಿಸತೊಡಗಿದರು. ॥ ೬ ॥

**ದೇವತೆಗಳು ಇಂತೆಂದರು** – ಸ್ವಾಮಿಯೇ ! ನಾವೆಲ್ಲರೂ ನಿನ್ನ ಚರಣಕಮಲಗಳಲ್ಲಿ ವಂದಿಸಿಕೊಳ್ಳುವೆವು. ಕರ್ಮಗಳೆಂಬ ಮಹಾಪಾಶಗಳಿಂದ ಬಿಡಿಸಿಕೊಳ್ಳುವ ಸಲುವಾಗಿ ಮೋಕ್ಷವನ್ನು ಬಯಸುವ ಜನರು ಭಕ್ತಿಭಾವದಿಂದ ಯಾವ ನಿನ್ನ ದಿವ್ಯ ಪಾದಾರವಿಂದಗಳನ್ನು ತಮ್ಮ ಹೃದಯದಲ್ಲಿ ಚಿಂತಿಸುವರೋ ಅಂತಹ ನಿನ್ನ ಚರಣ

ತ್ವಂ ಮಾಯಯಾ ತ್ರಿಗುಣಯಾಽಽತ್ಮನಿ ದುರ್ವಿಭಾವ್ಯಂ
ವ್ಯಕ್ತಂ ಸೃಜಸ್ಯವಸಿ ಲುಂಪಸಿ ತದ್ಗುಣಸ್ಥಃ ।
ನೈತೈರ್ಭವಾನಜಿತ ಕರ್ಮಭಿರಜ್ಯತೇ ವೈ
ಯತ್ ಸ್ವೇ ಸುಖೇಽವ್ಯವಹಿತೇಽಭಿರತೋಽನವದ್ಯಃ ॥ ೮ ॥

ಶುದ್ಧಿರ್ನೃಣಾಂ ನ ತು ತಥೇಡ್ಯ ದುರಾಶಯಾನಾಂ
ವಿದ್ಯಾಶ್ರುತಾಧ್ಯಯನದಾನತಪಃ ಕ್ರಿಯಾಭಿಃ ।
ಸತ್ತ್ವಾತ್ಮನಾಮೃಷಭ ತೇ ಯಶಸಿ ಪ್ರವೃದ್ಧ-
ಸಚ್ಛ್ರದ್ಧಯಾ ಶ್ರವಣಸಂಭೃತಯಾ ಯಥಾ ಸ್ಯಾತ್ ॥ ೯ ॥

ಸ್ಯಾನ್ನಸ್ತವಾಂಘ್ರಿರಶುಭಾಶಯಧೂಮಕೇತುಃ
ಕ್ಷೇಮಾಯ ಯೋ ಮುನಿಭಿರಾರ್ದ್ರಹೃದೋಹ್ಯಮಾನಃ ।
ಯಃ ಸಾತ್ವತೈಃ ಸಮವಿಭೂತಯ ಆತ್ಮವದ್ಭಿ-
ರ್ವ್ಯೂಹೇಽರ್ಚಿತಃ ಸವನಶಃ ಸ್ವರತಿಕ್ರಮಾಯ ॥ ೧೦ ॥

ಯಶ್ಚಿಂತ್ಯತೇ ಪ್ರಯತಪಾಣಿಭಿರಧ್ವರಾಗ್ನೌ
ತ್ರಯ್ಯಾ ನಿರುಕ್ತವಿಧಿನೇಶ ಹವಿರ್ಗೃಹೀತ್ವಾ ।
ಅಧ್ಯಾತ್ಮಯೋಗ ಉತ ಯೋಗಿಭಿರಾತ್ಮಮಾಯಾಂ
ಜಿಜ್ಞಾಸುಭಿಃ ಪರಮಭಾಗವತೈಃ ಪರೀಷ್ಟಃ ॥ ೧೧ ॥

ಕಮಲಗಳಿಗೆ ನಾವು ಬುದ್ಧಿ, ಇಂದ್ರಿಯ, ಪ್ರಾಣ, ಮನಸ್ಸು ಮಾತು ಇವುಗಳ ಮೂಲಕ ನಿನಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತೇವೆ. * ॥ ೭ ॥ ಓ ಭಗವಂತಾ! ನಿನ್ನ ತ್ರಿಗುಣಮಯ ಮಾಯೆಯನ್ನು ತಿಳಿದುಕೊಳ್ಳುವುದು ತುಂಬಾ ಕಠಿಣವು. ಇಂತಹ ಮಾಯೆಯ ಮೂಲಕ ನಿನ್ನಲ್ಲೇ ನೀನು ಈ ದೃಶ್ಯಜಗತ್ತನ್ನು ಲೀಲೆಯಿಂದಲೇ ರಜೋಗುಣದಿಂದ ನಿರ್ಮಿಸಿರುವೆ. ಸತ್ತ್ವಗುಣದಿಂದ ಪಾಲಿಸುತ್ತಿರುವೆ. ತಮೋಗುಣದಿಂದ ಸಂಹಾರವನ್ನೂ ಮಾಡುವೆ. ಇದೆಲ್ಲವನ್ನು ಮಾಡುತ್ತಿದ್ದರೂ ನೀನು ಇವುಗಳೊಂದಿಗೆ ಲಿಪ್ತನಾಗುವುದಿಲ್ಲ. ನೀನು ನಿನ್ನ ಅಖಂಡ ಆನಂದದಲ್ಲಿ ಮಗ್ನನಾಗಿರುವೆ. ನಿನ್ನೊಳಗೆ ಮಾಯೆಯ ಯಾವುದೇ ವ್ಯವಧಾನವಿಲ್ಲ. ನೀನು ನಿರಂಜನನಾಗಿದ್ದು, ನಿನ್ನ ಅಖಂಡ ಸ್ವರೂಪ ಪರಮಾನಂದದಲ್ಲಿ ಮುಳುಗಿರುವೆ. ॥ ೮ ॥ ಸ್ತುತಿಸಲು ಯೋಗ್ಯನಾದ ಓ ಪರಮಾತ್ಮನೇ! ಅಂತಃಕರಣ ಶುದ್ಧವಿಲ್ಲದ ಜನರ ಚಿತ್ತಶುದ್ಧಿಯು ವಿದ್ಯಾಭ್ಯಾಸದಿಂದಾಗಲೀ, ವೇದಾಧ್ಯಯನದಿಂದಾಗಲೀ, ದಾನ, ತಪಸ್ಸು, ಯಜ್ಞಾದಿ ಕ್ರಿಯೆಗಳಿಂದಾಗಲೀ, ಆಗುವುದಿಲ್ಲ. ಆದರೆ ಓ ದೇವಶ್ರೇಷ್ಠನೇ! ಶುದ್ಧ ಅಂತಃಕರಣವುಳ್ಳ ನಿನ್ನ ಭಕ್ತರು ನಿನ್ನ ಲೀಲಾಕಥೆಗಳನ್ನು, ಮಹಿಮೆಯನ್ನು, ಯಶಸ್ಸನ್ನು, ನಿನ್ನ ಕಲ್ಯಾಣ ಗುಣಗಳನ್ನು ವರ್ಣಿಸುತ್ತಾ, ಶ್ರವಣಿಸುತ್ತಾರೆ. ಈ ಶ್ರವಣದಿಂದ ಉಂಟಾದ ಶ್ರದ್ಧೆಯಿಂದ ಉತ್ಕಟಭಕ್ತಿ ಉಂಟಾಗುತ್ತದೆ. ಅದರಿಂದ ಅವರ ಅಂತಃಕರಣವು ತತ್ಕಾಲವೇ ಪವಿತ್ರವಾಗುತ್ತದೆ. ॥ ೯ ॥ ಓ ಪ್ರಭುವೇ! ನಿನ್ನ ಚರಣಕಮಲಗಳು ನಮ್ಮ ಎಲ್ಲ ಅಮಂಗಳಗಳನ್ನು ಬೆಂಕಿಯಾಗಿ ಸುಟ್ಟು ನಾಶವಾಗಿಸಲಿ. ನಿನ್ನ ಇವೇ ಚರಣಕಮಲಗಳನ್ನು ನಿನ್ನ ಭಕ್ತರು ಪ್ರೇಮಮಗ್ನರಾಗಿ ತಮ್ಮ ಹೃದಯದಲ್ಲಿ ಧರಿಸುತ್ತಿರುವರು. ಇವು ನಮ್ಮ ಶ್ರೇಯಸ್ಸನ್ನು ವಿಸ್ತರಿಸುವಂತಾಗಲಿ. ಇಂದ್ರಿಯಗಳನ್ನು ವಶದಲ್ಲಿರಿಸಿಕೊಂಡಂತಹ ನಿನ್ನ ಭಕ್ತರು ನಿನ್ನ ಸಾಯುಜ್ಯವನ್ನು ಪಡೆಯುವುದಕ್ಕಾಗಿ ಮೂರೂ ಕಾಲಗಳಲ್ಲಿ ವಾಸುದೇವ - ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧರ ವ್ಯೂಹದಲ್ಲಿ ನಿನ್ನ ಇವೇ ಚರಣಕಮಲಗಳನ್ನು ಉಪಾಸಿಸುತ್ತಾ ಸ್ವರ್ಗವನ್ನು ಅತಿಕ್ರಮಿಸಿ ನಿನ್ನ ಧಾಮಕ್ಕೆ ತೆರಳುತ್ತಾರೆ. ॥ ೧೦ ॥ ನಿನ್ನ ಭಕ್ತರು ವೇದೋಕ್ತವಿಧಿಯಿಂದ ಪುರೋಡಾಶಾದಿ ಹವಿಸ್ಸನ್ನು ಮೂರು ವೇದಗಳ ಮಂತ್ರಗಳಿಂದಲೂ, ನಿರುಕ್ತದ ವಿಧಾನವನ್ನು ಅನುಸರಿಸಿ ಅಗ್ನಿಯಲ್ಲಿ ಹೋಮಮಾಡುವಾಗಲೂ ಇವೇ ಚರಣಕಮಲಗಳನ್ನು ಚಿಂತಿಸುವರು. ಜ್ಞಾನಮಾರ್ಗದ ಮೂಲಕ ಸಾಕ್ಷಾತ್ಕಾರ ಪಡೆಯಲು ಯೋಗಿಗಳು ಇವೇ ಚರಣಕಮಲಗಳನ್ನು ಧ್ಯಾನಿಸುವರು. ಹೀಗೆಯೇ ನಿನ್ನ ಮಾಯೆಯ ಸ್ವರೂಪವನ್ನು ತಿಳಿಯಬಯಸುವ

* ಇಲ್ಲಿ ಸಾಷ್ಟಾಂಗ ಪ್ರಣಾಮವನ್ನು ಹೇಳಿದ್ದಾರೆ –
**ದೋರ್ಭ್ಯಾಂ ಪದ್ಭ್ಯಾಂ ಚ ಜಾನುಭ್ಯಾಮುರಸಾ ಶಿರಸಾ ದೃಶಾ । ಮನಸಾ ವಚಸಾ ಚೈವ ಪ್ರಣಾಮೋಽಷ್ಟಾಂಗ ಈರಿತಃ ॥**
ಏಕಕಾಲದಲ್ಲಿ ಕೈಗಳಿಂದಲೂ, ಕಾಲುಗಳಿಂದಲೂ, ಮಂಡಿಗಳಿಂದಲೂ, ವಕ್ಷಸ್ಥಳದಿಂದಲೂ, ಶಿರಸ್ಸಿನಿಂದಲೂ, ಕಣ್ಣುಗಳಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಮಾಡುವ ನಮಸ್ಕಾರಕ್ಕೆ ಸಾಷ್ಟಾಂಗನಮಸ್ಕಾರವೆಂದು ಹೇಳುತ್ತಾರೆ.
ಇಲ್ಲಿ ಭಗವಂತನ ಪಾದಾರವಿಂದಗಳಲ್ಲಿ ಮಾನಸಿಕ ಪ್ರಣಾಮ, ವಾಚಿಕ ಪ್ರಣಾಮ, ಕಾಯಿಕ ಪ್ರಣಾಮ ಎಂಬ ಮೂರು ಬಗೆಯ ಪ್ರಣಾಮ ಹೇಳಿದೆ. ಬುದ್ಧಿ ಶಬ್ದದಿಂದ ಮಾನಸಿಕ, ವಚಃಶಬ್ದದಿಂದ ವಾಚಿಕ ಮತ್ತು ಇಂದ್ರಿಯ, ಪ್ರಾಣ ಇವುಗಳಿಂದ ಕಾಯಿಕ ನಮಸ್ಕಾರವೂ ಹೇಳಲ್ಪಟ್ಟಿದೆ.

ಪರ್ಯುಷ್ಟಯಾ ತವ ವಿಭೋ ವನಮಾಲಯೇಯಂ
ಸಂಸ್ಪರ್ಧಿನೀ ಭಗವತೀ ಪ್ರತಿಪತ್ನಿವಚ್ಛ್ರೀಃ ।
ಯಃ ಸುಪ್ರಣೀತಮಮುಯಾರ್ಹಣಮಾದದನ್ನೋ
ಭೂಯಾತ್ಸದಾಂಘ್ರಿರಶುಭಾಶಯಧೂಮಕೇತುಃ ॥ ೧೨ ॥

ಕೇತುಸ್ತ್ರಿವಿಕ್ರಮಯುತಸ್ತ್ರಿಪತತ್ಪತಾಕೋ
ಯಸ್ತೇ ಭಯಾಭಯಕರೋಽಸುರದೇವಚಮ್ವೋಃ ।
ಸ್ವರ್ಗಾಯ ಸಾಧುಷು ಖಲೇಷ್ವಿತರಾಯ ಭೂಮನ್
ಪಾದಃ ಪುನಾತು ಭಗವನ್ ಭಜತಾಮಘಂ ನಃ ॥ ೧೩ ॥

ನಸ್ಯೋತಗಾವ ಇವ ಯಸ್ಯ ವಶೇ ಭವಂತಿ
ಬ್ರಹ್ಮಾದಯಸ್ತನುಭೃತೋ ಮಿಥುರರ್ದ್ಯಮಾನಾಃ ।
ಕಾಲಸ್ಯ ತೇ ಪ್ರಕೃತಿಪೂರುಷಯೋಃ ಪರಸ್ಯ
ಶಂ ನಸ್ತನೋತು ಚರಣಃ ಪುರುಷೋತ್ತಮಸ್ಯ ॥ ೧೪ ॥

ಜಿಜ್ಞಾಸುಭಕ್ತರೂ ಕೂಡ ನಿನ್ನ ಚರಣಗಳನ್ನೇ ನೆನೆಯುತ್ತಾರೆ. ಈ ವಿಧವಾಗಿ ನಿನ್ನ ಪ್ರೇಮಿಭಕ್ತರು ನಿನ್ನ ಚರಣಕಮಲಗಳನ್ನೇ ತಮ್ಮ ಸರ್ವೋತ್ಕೃಷ್ಟ ಪರಮ ಆರಾಧ್ಯವೆಂದು ತಿಳಿದು ಇವುಗಳನ್ನೇ ಉಪಾಸಿಸುತ್ತಾರೆ. ॥ ೧೧ ॥ ಓ ಪ್ರಭುವೇ! ನಿನ್ನ ಭಕ್ತರು ಪ್ರೇಮದಿಂದ ಅರ್ಪಿಸುವ ವನಮಾಲೆಯನ್ನು ನೀನು ತುಂಬಾ ಸಮ್ಮಾನದಿಂದ ಸ್ವೀಕರಿಸುತ್ತಿರುವೆ. ಭಕ್ತರ ಕುರಿತು ನಿನಗಿರುವ ವಿಲಕ್ಷಣಪ್ರೇಮದ ಪ್ರತ್ಯಕ್ಷ ಉದಾಹರಣೆ ಇದಾಗಿದೆ. ಸಾಕ್ಷಾತ್ ಭಗವತಿ ಲಕ್ಷ್ಮಿಯೂ ನಿನ್ನಲ್ಲಿ ಪ್ರೇಮವಿಟ್ಟಿರುವಳು. ಆದರೆ ನಿನ್ನ ವಕ್ಷಃಸ್ಥಳದಲ್ಲಿ ಸುತ್ತಲೂ ಹರಡಿಕೊಂಡಿರುವ ವನಮಾಲೆಯನ್ನು ನೋಡಿ ಹಾಗೂ ಭಕ್ತರ ಕುರಿತು ನಿನಗಿರುವ ವಿಶೇಷ ಪ್ರೇಮವನ್ನು ನೋಡಿ ಸವತಿಯಂತೆ ವನಮಾಲೆಯೊಂದಿಗೆ ಸ್ಪರ್ಧಿಸುತ್ತಿರುವಳು. ಆ ವನಮಾಲೆಯಲ್ಲಿ ತುಳಸಿಯೂ ಇರುತ್ತದೆ. ತುಳಸಿಯನ್ನು ಅರ್ಪಿಸುವುದರಿಂದ ನಿನ್ನ ಪೂಜೆಯು ಸಾಂಗವಾಗಿ ಪೂರ್ಣಗೊಂಡು, ನೀನು ಇನ್ನೂ ಹೆಚ್ಚು ಪ್ರಸನ್ನನಾಗುವೆ. ಅಂತಹ ವನಮಾಲೆಯಿಂದ ಸಮಲಂಕೃತವಾದ ನಿನ್ನ ಚರಣಕಮಲಗಳು ನಮ್ಮ ಎಲ್ಲ ವಿಷಯವಾಸನೆಗಳನ್ನು ಭಸ್ಮಮಾಡುವ ಅಗ್ನಿಯಂತಾಗಲಿ. ॥ ೧೨ ॥ ವಾಮನಾವತಾರದಲ್ಲಿ ದೈತ್ಯನಾದ ಬಲಿಯು ದಾನಮಾಡಿದ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಅಳೆಯುವಾಗ ಮೊದಲನೆಯ ಹೆಜ್ಜೆಯಿಂದ ಭೂಮಂಡಲವನ್ನೇ ವ್ಯಾಪಿಸಿ, ಎರಡನೆಯ ಹೆಜ್ಜೆಯು ವ್ಯೋಮವನ್ನು ಅತಿಕ್ರಮಿಸಿದಾಗ ಸತ್ಯಲೋಕವನ್ನೂ ವ್ಯಾಪಿಸಿದ ಆ ದಿವ್ಯಪಾದವು ದೊಡ್ಡದಾದ ವಿಜಯಧ್ವಜದಂತೆ ಕಂಗೊಳಿಸಿತು. ಆಗ ಬ್ರಹ್ಮದೇವರು ಆ ಪವಿತ್ರಪಾದವನ್ನು ತೊಳೆದು ಆ ಪಾದೋದಕವನ್ನು ತನ್ನ ಕಮಂಡಲುವಿನಲ್ಲಿರಿಸಿಕೊಂಡರು. ಅಲ್ಲಿಂದ ಹೊರಟ ಮೂರು ಪ್ರವಾಹಗಳು ಭಾಗೀರಥಿ ಗಂಗೆಯಾಗಿ ಹರಿದು ನಿನ್ನ ಕೀರ್ತಿ ಪತಾಕೆಯಂತೆ ಕಾಣುತ್ತಿದ್ದವು. ಇದನ್ನು ನೋಡಿ ಅಸುರ ಸೈನ್ಯವು ಭಯಗೊಂಡಿತು. ಭಕ್ತರು, ದೇವತೆಗಳು ನಿರ್ಭಯರಾದರು. ಹೇ ಪರಬ್ರಹ್ಮ ಸ್ವರೂಪಿಯೇ! ಅಂತಹ ನಿನ್ನ ಪಾದಕಮಲವು ಸಾಧು-ಸತ್ಪುರುಷರನ್ನು ಪರಮಧಾಮಕ್ಕೆ ಒಯ್ಯುವುದಕ್ಕೂ, ದುಷ್ಟರನ್ನು ಅಧೋಗತಿಗೆ ತಳ್ಳುವುದಕ್ಕೂ ಕಾರಣವಾಗಿದೆ. ಅಂತಹ ನಿನ್ನ ದಿವ್ಯ-ಸುಂದರ-ಪವಿತ್ರ ಪಾದಾರವಿಂದವು ಪ್ರಾರ್ಥಿಸುತ್ತಿರುವ ನಮ್ಮ ಪಾಪಗಳನ್ನು ಕಳೆದು ನಮ್ಮನ್ನು ಅನವರತವಾಗಿ ರಕ್ಷಿಸಲಿ. ॥ ೧೩ ॥ ಸತ್ತ್ವ-ರಜ-ತಮೋಗುಣಗಳಾದ ಬ್ರಹ್ಮನೇ ಮೊದಲಾದ ಸಮಸ್ತ ಶರೀರಧಾರೀ ಜೀವರು ಪರಸ್ಪರವಾಗಿ ಡಿಕ್ಕಿಹೊಡೆಯುತ್ತಿದ್ದರೂ ಮೂಗುದಾರವನ್ನು ಹಾಕಿದ ಎತ್ತು ಒಡೆಯನ ಹಿಡಿತದಲ್ಲಿರುವಂತೆ ಅವರೆಲ್ಲರೂ ನಿನ್ನ ವಶವರ್ತಿಗಳಾಗಿಯೇ ಇರುತ್ತಾರೆ. ನೀನು ಪ್ರಕೃತಿ ಮತ್ತು ಪುರುಷರಿಗಿಂತಲೂ ಮೀರಿದ ಕಾಲಸ್ವರೂಪವಾಗಿರುವೆ. ಅಂತಹ ಪುರುಷೋತ್ತಮ ಸ್ವರೂಪೀ ನಿನ್ನ ಚರಣಕಮಲಗಳು ನಮ್ಮ ಶ್ರೇಯಸ್ಸನ್ನು ವಿಸ್ತರಿಸಲಿ. ॥ ೧೪ ॥

ಅಸ್ಯಾಸಿ ಹೇತುರುದಯಸ್ಥಿತಿಸಂಯಮಾನಾ-
ಮವ್ಯಕ್ತಜೀವಮಹತಾಮಪಿ ಕಾಲಮಾಹುಃ ।
ಸೋಽಯಂ ತ್ರಿಣಾಭಿರಖಿಲಾಪಚಯೇ ಪ್ರವೃತ್ತಃ
ಕಾಲೋ ಗಭೀರರಯ ಉತ್ತಮಪೂರುಷಸ್ತ್ವಮ್ ॥ ೧೫ ॥

ನೀನೇ ಈ ಜಗತ್ತಿನ ಉತ್ಪತ್ತಿ , ಸ್ಥಿತಿ, ಸಂಹಾರ ಇವುಗಳ ಪರಮ ಕಾರಣನಾಗಿರುವೆ. ನೀನೇ ಅವ್ಯಕ್ತ (ಮೂಲಪ್ರಕೃತಿ), ಪುರುಷ, ಮಹತ್ತತ್ತ್ವ ಇವೆಲ್ಲದರ ನಿಯಾಮಕನಾಗಿರುವೆ. ಕಾಲಸ್ವರೂಪನೂ ನೀನೇ ಆಗಿರುವೆ. ಸಂವತ್ಸರ ರೂಪದಿಂದ ಶೀತಕಾಲ, ಬೇಸಿಗೆ ಕಾಲ, ಮಳೆಗಾಲ ಎಂಬ ಈ ಮೂರು ಋತುಗಳು ಮೂರು ಸುಳಿಗಳ ರೂಪದಲ್ಲಿ ನಿನ್ನ ಕಾಲಚಕ್ರ ವನ್ನು ಅತಿವೇಗವಾಗಿ ತಿರುಗಿಸುತ್ತಿವೆ. ಆ ಕಾಲವು ಎಲ್ಲರ ನಾಶ ಮಾಡುವುದರಲ್ಲಿ ವೇಗವಾಗಿ ತೊಡಗಿದೆ. ಹೀಗೆ ಇವೆಲ್ಲದರ ಶಾಸಕ ಉತ್ತರ ಪುರುಷನು ನೀನೇ ಆಗಿರುವೆ. ॥ ೧೫ ॥ ಸೂತ್ರಾತ್ಮಾ ಹಿರಣ್ಯ ಗರ್ಭನು ನಿನ್ನಿಂದಲೇ ಶಕ್ತಿಯನ್ನು ಪಡೆದು ಅಮೋಘವೀರ್ಯನಾಗಿ ಮಾಯೆಯೊಡನೆ ಸೇರಿಕೊಂಡು ಜಗತ್ತಿನ ಗರ್ಭದಂತಿರುವ ಮಹತ್ತತ್ತ್ವವನ್ನು ಧರಿಸುವನು. ಮತ್ತೆ ಆ ಮಹತ್ತತ್ತ್ವವೇ (ಹಿರಣ್ಯಗರ್ಭ ಬ್ರಹ್ಮಾ) ತ್ರಿಗುಣಾತ್ಮಕವಾದ ಮಾಯೆಯನ್ನು ಅನುಸರಿಸಿ, ಪೃಥಿವಿ, ಜಲ, ತೇಜಸ್ಸು, ವಾಯು, ಆಕಾಶ, ಅಹಂಕಾರ ಮತ್ತು ಮಹತ್ತತ್ತ್ವ ಇವುಗಳ ರೂಪವಾದ ಏಳು ಆವರಣಗಳಿಂದ ಕೂಡಿದ ಸುವರ್ಣಮಯವಾದ ಬ್ರಹ್ಮಾಂಡವನ್ನು ಸೃಷ್ಟಿಸಿತು. ಈ ವಿರಾಟ್ ಬ್ರಹ್ಮಾಂಡವು ನಿನ್ನಿಂದಲೇ ಪ್ರಕಟವಾಗಿದೆ. ॥ ೧೬ ॥ ನೀನೇ ಈ ಚರಾಚರ ಜಗತ್ತಿನ ಅಧೀಶ್ವರನಾಗಿರುವೆ. ಇಡೀ ಈ ಜಗತ್ತು ಮಾಯೆಯ ಗುಣಗಳಿಂದ ಮತ್ತು ಅವುಗಳ ವಿಕ್ರಿಯೆಯಿಂದಲೇ ಉಂಟಾಗಿದೆ. ಹೇ ಹೃಷೀಕೇಶಾ! ನೀನೇ ಎಲ್ಲ ಇಂದ್ರಿಯಗಳ ಒಡೆಯನಾಗಿದ್ದು, ಅವುಗಳ ವಿಷಯಗಳ ಭೋಕ್ತಾನೂ ನೀನೇ ಆಗಿರುವೆ. ಆದರೆ ನೀನಾದರೋ ಅವುಗಳನ್ನು ಭೋಗಿಸುತ್ತಿದ್ದರೂ ಅವುಗಳಲ್ಲಿ ಲಿಪ್ತನಾಗಿರುವುದಿಲ್ಲ, ಇದು ನಿನ್ನ ಆಶ್ಚರ್ಯವೇ ಆಗಿದೆ. ಆದರೆ ಬೇರೆಯವರು ಸ್ವತಃ ಆ ಭೋಗಗಳನ್ನು ತ್ಯಾಗ ಮಾಡಿಬಿಡುವರು. ಅವರು ತ್ಯಾಗಮಾಡಿದ ಬಳಿಕವೂ ಆ ವಿಷಯಗಳೊಂದಿಗೆ ಹೆದರುತ್ತಿರುತ್ತಾರೆ. ॥ ೧೭ ॥ ಹದಿನಾರು ಸಾವಿರ ರಾಣಿಯರು ನಿನ್ನ ಅಂತಃಪುರದಲ್ಲಿದ್ದು, ಅವರೆಲ್ಲರೂ ತಮ್ಮ-ತಮ್ಮ ಕಿರುನಗೆಯಿಂದಲೂ, ಕುಡಿಗಣ್ಣಿನ ನೋಟದಿಂದ, ಮನೋಹರ ಹಾವ-ಭಾವದಿಂದ ನಿನ್ನನ್ನು ನೋಡುತ್ತಿರುತ್ತಾರೆ. ಸುರತ ಮಂತ್ರದಲ್ಲಿ ಪ್ರವೀಣರಾದ ಅವರೆಲ್ಲರೂ ತಮ್ಮ ಕಾಮ ಬಾಣಗಳನ್ನು ನಿನ್ನ ಮೇಲೆ ಎಸೆಯುತ್ತಿರುತ್ತಾರೆ. ಆದರೆ ಅವರು ನಿನ್ನ ಇಂದ್ರಿಯಗಳನ್ನು ಅಸ್ಥಿರಗೊಳಿಸಲು ಸ್ವಲ್ಪವೂ ಸಮರ್ಥರಾಗಲಿಲ್ಲ. ॥ ೧೮ ॥ ಆದರೆ ನಿನ್ನ ಎರಡು ಪುಣ್ಯಮಯ ನದಿಗಳು ತ್ರಿಲೋಕಗಳ ಎಲ್ಲ ಪಾಪಗಳನ್ನು ತೊಳೆಯಲು ಪೂರ್ಣವಾಗಿ ಸಮರ್ಥವಾಗಿವೆ. ಒಂದು :– ನಿನ್ನ ಅಮೃತಮಯವಾದ ಲೀಲೆಗಳಿಂದ ಸಮೃದ್ಧವಾದ ಹರಿಕಥಾನದಿ. ಅದನ್ನು ನಿರಂತರ ಕಿವಿಗಳಿಂದ ಶ್ರವಣಿಸಿದರೆ ಹೃದಯ ನಿರ್ಮಲವಾಗುತ್ತದೆ. ಇನ್ನೊಂದು ನಿನ್ನ ಪಾದ ಪ್ರಕ್ಷಾಳನದಿಂದ ಹೊರಟ ಗಂಗಾನದಿ. ಅದರಲ್ಲಿ ಸ್ನಾನಮಾಡಿದರೆ ಜನರು ಪುನೀತರಾಗುತ್ತಾರೆ. ಹೀಗೆ ಇವೆರಡೂ ಪವಿತ್ರ ನದಿಗಳನ್ನು ಪುಣ್ಯಾತ್ಮರಾದ ಸಜ್ಜನರು ನಿರಂತರ ಸೇವಿಸುತ್ತಾ ಇರುತ್ತಾರೆ. ॥ ೧೯ ॥

ತ್ವತ್ತಃ ಪುಮಾನ್ಸಮಧಿಗಮ್ಯ ಯಯಾ ಸ್ವವೀರ್ಯಂ
ಧತ್ತೇ ಮಹಾಂತಮಿವ ಗರ್ಭಮಮೋಘವೀರ್ಯಃ ।
ಸೋಽಯಂ ತಯಾನುಗತ ಆತ್ಮನ ಆಂಡಕೋಶಂ
ಹೈಮಂ ಸಸರ್ಜ ಬಹಿರಾವರಣೈರುಪೇತಮ್ ॥ ೧೬ ॥

ತತ್ತಸ್ಥುಷಶ್ಚ ಜಗತಶ್ಚ ಭವಾನಧೀಶೋ
ಯನ್ಮಾಯಯೋತ್ಥಗುಣವಿಕ್ರಿಯಯೋಪನೀತಾನ್ ।
ಅರ್ಥಾನ್ ಜುಷನ್ನಪಿ ಹೃಷೀಕಪತೇ ನ ಲಿಪ್ತೋ
ಯೇಽನ್ಯೇ ಸ್ವತಃ ಪರಿಹೃತಾದಪಿ ಬಿಭ್ಯತಿ ಸ್ಮ ॥ ೧೭ ॥

ಸ್ಮಾಯಾವಲೋಕಲವದರ್ಶಿತಭಾವಹಾರಿ-
ಭ್ರೂಮಂಡಲಪ್ರಹಿತಸೌರತಮಂತ್ರಶೌಂಡೈಃ ।
ಪತ್ನ್ಯಸ್ತು ಷೋಡಶಸಹಸ್ರಮನಂಗಬಾಣೈ-
ರ್ಯಸ್ಯೇಂದ್ರಿಯಂ ವಿಮಥಿತುಂ ಕರಣೈರ್ನ ವಿಭ್ವ್ಯಃ ॥ ೧೮ ॥

ವಿಭ್ವ್ಯಸ್ತವಾಮೃತಕಥೋದವಹಾಸ್ತ್ರಿಲೋಕ್ಯಾಃ
ಪಾದಾವನೇಜಸರಿತಃ ಶಮಲಾನಿ ಹಂತುಮ್ ।
ಆನುಶ್ರವಂ ಶ್ರುತಿಭಿರಂಘ್ರಿಜಮಂಗಸಂಗೈ-
ಸ್ತೀರ್ಥದ್ವಯಂ ಶುಚಿಷದಸ್ತ ಉಪಸ್ಪೃಶಂತಿ ॥ ೧೯ ॥

ಶ್ರೀಶುಕ ಉವಾಚ

**ಇತ್ಯಭಿಷ್ಟೂಯ ವಿಬುಧೈಃ ಸೇಶಃ ಶತಧೃತಿರ್ಹರಿಮ್ ।**
**ಅಭ್ಯಭಾಷತ ಗೋವಿಂದಂ ಪ್ರಣಮ್ಯಾಂಬರಮಾಶ್ರಿತಃ ॥ ೨೦ ॥**

ಬ್ರಹ್ಮೋವಾಚ

**ಭೂಮೇರ್ಭಾರಾವತಾರಾಯ ಪುರಾ ವಿಜ್ಞಾಪಿತಃ ಪ್ರಭೋ ।**
**ತ್ವಮಸ್ಮಾಭಿರಶೇಷಾತ್ಮಂಸ್ತತ್ತಥೈವೋಪಪಾದಿತಮ್ ॥ ೨೧ ॥**

**ಧರ್ಮಶ್ಚ ಸ್ಥಾಪಿತಃ ಸತ್ಸು ಸತ್ಯಸಂಧೇಷು ವೈ ತ್ವಯಾ ।**
**ಕೀರ್ತಿಶ್ಚ ದಿಕ್ಷು ವಿಕ್ಷಿಪ್ತಾ ಸರ್ವಲೋಕಮಲಾಪಹಾ ॥ ೨೨ ॥**

**ಅವತೀರ್ಯ ಯದೋರ್ವಂಶೇ ಬಿಭ್ರದ್ರೂಪಮನುತ್ತಮಮ್ ।**
**ಕರ್ಮಾಣ್ಯುದ್ದಾಮವೃತ್ತಾನಿ ಹಿತಾಯ ಜಗತೋಽಕೃಥಾಃ ॥ ೨೩ ॥**

**ಯಾನಿ ತೇ ಚರಿತಾನೀಶ ಮನುಷ್ಯಾಃ ಸಾಧವಃ ಕಲೌ ।**
**ಶೃಣ್ವಂತಃ ಕೀರ್ತಯಂತಶ್ಚ ತರಿಷ್ಯಂತ್ಯಂಜಸಾ ತಮಃ ॥ ೨೪ ॥**

**ಯದುವಂಶೇಽವತೀರ್ಣಸ್ಯ ಭವತಃ ಪುರುಷೋತ್ತಮ ।**
**ಶರಚ್ಛತಂ ವ್ಯತೀಯಾಯ ಪಂಚವಿಂಶಾಧಿಕಂ ಪ್ರಭೋ ॥ ೨೫ ॥**

**ನಾಧುನಾ ತೇಽಖಿಲಾಧಾರ ದೇವಕಾರ್ಯಾವಶೇಷಿತಮ್ ।**
**ಕುಲಂ ಚ ವಿಪ್ರಶಾಪೇನ ನಷ್ಟಪ್ರಾಯಮಭೂದಿದಮ್ ॥ ೨೬ ॥**

**ತತಃ ಸ್ವಧಾಮ ಪರಮಂ ವಿಶಸ್ವ ಯದಿ ಮನ್ಯಸೇ ।**
**ಸಲೋಕಾನ್ಲೋಕಪಾಲಾನ್ ನಃ ಪಾಹಿ ವೈಕುಂಠ ಕಿಂಕರಾನ್ ॥ ೨೭ ॥**

ಶ್ರೀಭಗವಾನುವಾಚ

**ಅವಧಾರಿತಮೇತನ್ಮೇ ಯದಾತ್ಥ ವಿಬುಧೇಶ್ವರ ।**
**ಕೃತಂ ವಃ ಕಾರ್ಯಮಖಿಲಂ ಭೂಮೇರ್ಭಾರೋಽವತಾರಿತಃ ॥ ೨೮ ॥**

**ತದಿದಂ ಯಾದವಕುಲಂ ವೀರ್ಯಶೌರ್ಯಶ್ರಿಯೋದ್ಧತಮ್ ।**
**ಲೋಕಂ ಜಿಘೃಕ್ಷದ್ರುದ್ಧಂ ಮೇ ವೇಲಯೇವ ಮಹಾರ್ಣವಃ ॥ ೨೯ ॥**

**ಶ್ರೀಶುಕಮುನಿಗಳು ಹೇಳುತ್ತಾರೆ** – ಪರೀಕ್ಷಿತ ಮಹಾರಾಜಾ! ಸಮಸ್ತ ದೇವತೆಗಳೂ, ಮತ್ತು ಭಗವಾನ್ ಶಂಕರನೊಂದಿಗೆ ಬ್ರಹ್ಮದೇವರು ಈ ವಿಧವಾಗಿ ಭಗವಂತನನ್ನು ಸ್ತುತಿಸಿದರು. ಬಳಿಕ ಅವರು ವಂದಿಸಿ ತಮ್ಮ ಸ್ವಧಾಮಕ್ಕೆ ಹಿಂದಿರುಗಲು ಸಿದ್ಧರಾಗಿ ಅಂತರಿಕ್ಷದಲ್ಲಿ ನಿಂತು ಭಗವಾನ್ ಗೋವಿಂದನನ್ನು ಕುರಿತು ಇಂತೆಂದರು – ॥ ೨೦ ॥

**ಬ್ರಹ್ಮದೇವರು ಹೇಳಿದರು** – "ಸರ್ವಾತ್ಮನಾದ ಪ್ರಭುವೇ! ಈ ಮೊದಲು ನಾವು ನಿನ್ನಲ್ಲಿ ಭೂಭಾರಹರಣಕ್ಕಾಗಿ ಭುವಿಯಲ್ಲಿ ಅವತರಿಸಲು ಪ್ರಾರ್ಥಿಸಿದ್ದೆವು. ಅದನ್ನು ನೀನು ನಮ್ಮ ಪ್ರಾರ್ಥನೆಗನುಸಾರ ಯಥೋಚಿತವಾದ ರೀತಿಯಲ್ಲಿ ಪೂರ್ಣಗೊಳಿಸಿದೆ ॥ ೨೧ ॥ ಸತ್ಯಪರಾಯಣನಾದ ನೀನು ಸಾಧುಸತ್ಪುರುಷರ ಕಲ್ಯಾಣಾರ್ಥವಾಗಿ ಧರ್ಮವನ್ನು ಪುನಃ ನೆಲೆಗೊಳಿಸಿರುವೆ. ಸಮಸ್ತ ಲೋಕಗಳ ಪಾಪಗಳನ್ನು ಪರಿಹರಿಸುವ ನಿನ್ನ ಧವಳಕೀರ್ತಿಯನ್ನು ಎಲ್ಲ ದಿಕ್ಕುಗಳಲ್ಲಿಯೂ ಹರಡಿರುವೆ. ॥ ೨೨ ॥ ನೀನು ಈ ಸರ್ವೋತ್ತಮ ರೂಪವನ್ನು ಧರಿಸಿ ಯದುವಂಶದಲ್ಲಿ ಅವತರಿಸಿದೆ. ಜಗತ್ತಿನ ಹಿತಕ್ಕಾಗಿ ಉದಾರ ಪರಾಕ್ರಮವುಳ್ಳ ಅನೇಕ ಲೀಲೆಗಳನ್ನು ನಡೆಸಿದೆ. ॥ ೨೩ ॥ ಪ್ರಭುವೇ! ಕಲಿಯುಗದಲ್ಲಿ ನಿನ್ನ ಈ ಲೀಲೆಗಳನ್ನು ಶ್ರವಣಿಸುವ, ಕೀರ್ತಿಸುವ, ಸಾಧುಸ್ವಭಾವವುಳ್ಳ ಮನುಷ್ಯರು ಬಹಳ ಸುಲಭವಾಗಿ ಅಜ್ಞಾನಾಂಧಕಾರವನ್ನು ದಾಟಿಬಿಡುತ್ತಾರೆ. ॥ ೨೪ ॥ ಪುರುಷೋತ್ತಮನೇ! ಸರ್ವಶಕ್ತ ಪ್ರಭುವೇ! ನೀನು ಯದುವಂಶದಲ್ಲಿ ಅವತರಿಸಿ ಒಂದುನೂರಿಪ್ಪತ್ತೈದು ವರ್ಷಗಳು ಕಳೆದುಹೋಗಿವೆ. ॥ ೨೫ ॥ ಸರ್ವಾಧಾರನೇ! ಈಗ ದೇವತೆಗಳಾದ ನಮ್ಮ ಎಲ್ಲ ಕಾರ್ಯಗಳನ್ನು ಚೆನ್ನಾಗಿ ನೀನು ನಡೆಸಿಕೊಟ್ಟಿರುವೆ. ಈಗ ಯಾವುದೇ ಕಾರ್ಯವು ಬಾಕಿ ಉಳಿಯಲಿಲ್ಲ. ಬ್ರಾಹ್ಮಣರ ಶಾಪದ ಕಾರಣ ಈ ಯದುವಂಶವೂ ಕೂಡ ಒಂದು ರೀತಿಯಿಂದ ನಾಶವಾಗಿಯೇ ಹೋಗಿದೆ. ॥ ೨೬ ॥ ಆದುದರಿಂದ ಹೇ ವೈಕುಂಠನಾಥನೇ! ನಿನಗೆ ಉಚಿತವೆನಿಸಿದರೆ ನಿನ್ನ ಪರಮಧಾಮಕ್ಕೆ ಹಿಂದಿರುಗುವವನಾಗು. ಅಲ್ಲಿ ನಿನ್ನ ಸೇವಕರಾದ ನಮ್ಮನ್ನೂ, ಲೋಕಪಾಲಕರನ್ನೂ ಮತ್ತು ನಮ್ಮ ಲೋಕಗಳನ್ನು ಪಾಲಿಸಿ ಪೋಷಿಸುವವನಾಗು." ॥ ೨೭ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ದೇವತೆಗಳೊಡೆಯ ಬ್ರಹ್ಮನೇ! ನೀನು ಹೇಳಿದುದನ್ನೇ ನಾನೂ ಕೂಡ ಮೊದಲೇ ನಿಶ್ಚಯ ಮಾಡಿರುವೆನು. ನಾನು ನಿಮ್ಮ ಕಾರ್ಯಗಳನ್ನೆಲ್ಲ ಪೂರೈಸಿ ಭೂಮಿಯ ಭಾರವನ್ನು ಇಳುಹಿಸಿರುವೆನು. ॥ ೨೮ ॥ ಆದರೆ ಒಂದು ಕಾರ್ಯ ಹಾಗೆಯೇ ಉಳಿದಿದೆ. ಈ ಯದುವಂಶೀಯರು ಬಲ-ವಿಕ್ರಮಗಳಿಂದಲೂ, ವೀರ್ಯ-ಶೌರ್ಯಾದಿಗಳಿಂದಲೂ, ಧನ-ಸಂಪತ್ತಿನಿಂದಲೂ ಉನ್ಮತ್ತರಾಗಿ ಬಿಟ್ಟಿದ್ದಾರೆ. ಲೋಕವನ್ನೇ ನುಂಗಿಹಾಕಬೇಕೆಂದಿರುವ ಅವರ ತವಕವನ್ನು ನಾನು ಕಡಲದಡವು ಕಡಲನ್ನು ತಡೆಹಿಡಿದಂತೆ ತಡೆ ಹಿಡಿದಿಟ್ಟಿರುವೆನು. ॥ ೨೯ ॥ ನಾನೇನಾದರೂ

ಯದ್ಯಸಂಹೃತ್ಯ ದೃಪ್ತಾನಾಂ ಯದೂನಾಂ ವಿಪುಲಂ ಕುಲಮ್ ।
ಗಂತಾಸ್ಮ್ಯನೇನ ಲೋಕೋಽಯಮುದ್ವೇಲೇನ ವಿನಂಕ್ಷ್ಯತಿ
॥ ೩೦ ॥

ಇದಾನೀಂ ನಾಶ ಆರಬ್ಧಃ ಕುಲಸ್ಯ ದ್ವಿಜಶಾಪತಃ ।
ಯಾಸ್ಯಾಮಿ ಭವನಂ ಬ್ರಹ್ಮನ್ನೇತದಂತೇ ತವಾನಘ
॥ ೩೧ ॥

*ಶ್ರೀಶುಕ ಉವಾಚ*

ಇತ್ಯುಕ್ತೋ ಲೋಕನಾಥೇನ ಸ್ವಯಂಭೂಃ ಪ್ರಣಿಪತ್ಯ ತಮ್ ।
ಸಹ ದೇವಗಣೈರ್ದೇವಃ ಸ್ವಧಾಮ ಸಮಪದ್ಯತ
॥ ೩೨ ॥

ಅಥ ತಸ್ಯಾಂ ಮಹೋತ್ಪಾತಾಂದ್ವಾರವತ್ಯಾನ್ ಸಮುತ್ಥಿತಾನ್ ।
ವಿಲೋಕ್ಯ ಭಗವಾನಾಹ ಯದುವೃದ್ಧಾನ್ಸಮಾಗತಾನ್
॥ ೩೩ ॥

*ಶ್ರೀಭಗವಾನುವಾಚ*

ಏತೇ ವೈ ಸುಮಹೋತ್ಪಾತಾ ವ್ಯುತ್ತಿಷ್ಠಂತೀಹ ಸರ್ವತಃ ।
ಶಾಪಶ್ಚ ನಃ ಕುಲಸ್ಯಾಸೀದ್ಬ್ರಾಹ್ಮಣೇಭ್ಯೋ ದುರತ್ಯಯಃ
॥ ೩೪ ॥

ನ ವಸ್ತವ್ಯಮಿಹಾಸ್ಮಾಭಿರ್ಜಿಜೀವಿಷುಭಿರಾರ್ಯಕಾಃ ।
ಪ್ರಭಾಸಂ ಸುಮಹತ್ಪುಣ್ಯಂ ಯಾಸ್ಯಾಮೋಽದ್ಯೈವ ಮಾ ಚಿರಮ್
॥ ೩೫ ॥

ಯತ್ರ ಸ್ನಾತ್ವಾ ದಕ್ಷಶಾಪಾದ್ ಗೃಹೀತೋ ಯಕ್ಷ್ಮಣೋಡುರಾಟ್ ।
ವಿಮುಕ್ತಃ ಕಿಲ್ಬಿಷಾತ್ಸದ್ಯೋ ಭೇಜೇ ಭೂಯಃ ಕಲೋದಯಮ್
॥ ೩೬ ॥

ವಯಂ ಚ ತಸ್ಮಿನ್ನಾಪ್ಲುತ್ಯ ತರ್ಪಯಿತ್ವಾ ಪಿತೄನ್ಸುರಾನ್ ।
ಭೋಜಯಿತ್ವೋಶಿಜೋ ವಿಪ್ರಾನ್ ನಾನಾಗುಣವತಾಂಧಸಾ
॥ ೩೭ ॥

ತೇಷು ದಾನಾನಿ ಪಾತ್ರೇಷು ಶ್ರದ್ಧಯೋಪ್ತ್ವಾ ಮಹಾಂತಿ ವೈ ।
ವೃಜಿನಾನಿ ತರಿಷ್ಯಾಮೋ ದಾನೈರ್ನೌಭಿರಿವಾರ್ಣವಮ್
॥ ೩೮ ॥

*ಶ್ರೀಶುಕ ಉವಾಚ*

ಏವಂ ಭಗವತಾಽಽದಿಷ್ಟಾ ಯಾದವಾಃ ಕುಲನಂದನ ।
ಗಂತುಂ ಕೃತಧಿಯಸ್ತೀರ್ಥಂ ಸ್ಯಂದನಾನ್ಸಮಯೂಯುಜನ್
॥ ೩೯ ॥

ಮದಾಂಧರೂ, ಸ್ವೇಚ್ಛಾಚಾರಿಗಳೂ ಆದ ಯದುವಂಶೀಯರ ಈ ವಿಶಾಲ ವಂಶವನ್ನು ವಿನಾಶಗೊಳಿಸದೇ ಸ್ವಧಾಮವನ್ನು ಸೇರಿಕೊಂಡರೆ ಇವರು ಎಲ್ಲ ಲೋಕಮರ್ಯಾದೆಗಳನ್ನು ಉಲ್ಲಂಘಿಸಿ, ಹದ್ದುಮೀರಿ ನಡೆದು ಸಮಸ್ತ ಲೋಕಗಳನ್ನು ವಿನಾಶಗೊಳಿಸುವರು. ॥ ೩೦ ॥ ಪುಣ್ಯಾತ್ಮನಾದ ಬ್ರಹ್ಮನೇ! ಈ ಬ್ರಾಹ್ಮಣರ ಶಾಪದಿಂದ ಈ ವಂಶದ ನಾಶ ಪ್ರಾರಂಭವಾಗಿಬಿಟ್ಟಿದೆ. ಇದರ ಅಂತ್ಯವಾಗುತ್ತಲೇ ನಾನು ನಿನ್ನ ಧಾಮದ ಮೂಲಕ ಸ್ವಧಾಮಕ್ಕೆ ತೆರಳುವೆನು.'' ॥ ೩೧ ॥

**ಶ್ರೀಶುಕಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಅಖಿಲ ಲೋಕಾಧಿಪತಿ ಭಗವಾನ್ ಶ್ರೀಕೃಷ್ಣನು ಹೀಗೆ ಹೇಳಲು, ಬ್ರಹ್ಮದೇವರು ಅವನಿಗೆ ವಂದಿಸಿ ದೇವತೆಗಳೊಂದಿಗೆ ತಮ್ಮ ಧಾಮಕ್ಕೆ ಹೊರಟುಹೋದರು. ॥ ೩೨ ॥ ಬ್ರಹ್ಮಾದಿಗಳು ಹೊರಟುಹೋಗುತ್ತಲೇ ದ್ವಾರಕೆಯಲ್ಲಿ ದೊಡ್ಡ-ದೊಡ್ಡ ಉತ್ಪಾತಗಳೂ, ಅಪಶಕುನಗಳೂ ಕಾಣಿಸಿಕೊಂಡವು. ಇದನ್ನು ನೋಡಿ ಗಾಬರಿಗೊಂಡು ಕೆಲವು ಯದುವಂಶದ ಹಿರಿಯರು ಶ್ರೀಕೃಷ್ಣನ ಬಳಿಗೆ ಬಂದು ತಮ್ಮ ಆತಂಕವನ್ನು ತೋಡಿಕೊಂಡರು. ಆಗ ಭಗವಾನ್ ಶ್ರೀಕೃಷ್ಣನು ಅವರನ್ನು ಸಮಾಧಾನಪಡಿಸುತ್ತಾ ಇಂತೆಂದನು. ॥ ೩೩ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಹಿರಿಯರೇ! ನಿಮ್ಮ ಆತಂಕವು ಸಹಜವಾಗಿಯೇ ಇದೆ. ಇಂದು ದ್ವಾರಕೆಯಲ್ಲಿ ಎಲ್ಲಿ ನೋಡಿದಲ್ಲಿ ದೊಡ್ಡ-ದೊಡ್ಡ ಅಪಶಕುನಗಳೂ, ಉತ್ಪಾತಗಳೂ ವಿಶೇಷವಾಗಿ ಉಂಟಾಗುತ್ತಿವೆ. ಬ್ರಾಹ್ಮಣರು ನಮ್ಮ ವಂಶಕ್ಕೆ ಪರಿಹರಿಸಲು ಬಹಳ ಕಠಿಣವಾದ ಶಾಪವನ್ನು ಕೊಟ್ಟಿರುವುದು ನಿಮಗೆ ತಿಳಿದೇ ಇದೆ. ನಾವೆಲ್ಲ ನಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳಬೇಕಿದ್ದರೆ ನಾವು ಇಲ್ಲಿ ಇರದೆ, ಇಂದೇ ಪ್ರಭಾಸಕ್ಷೇತ್ರಕ್ಕೆ ಹೊರಡಬೇಕೆಂದು ನನಗನಿಸುತ್ತದೆ. ॥ ೩೪-೩೫ ॥ ಪ್ರಭಾಸ ಕ್ಷೇತ್ರದ ಮಹಿಮೆ ಬಹಳ ಪ್ರಸಿದ್ಧವಾಗಿದೆ. ದಕ್ಷ ಪ್ರಜಾಪತಿಯ ಶಾಪದಿಂದ ಚಂದ್ರನಿಗೆ ರಾಜಯಕ್ಷ್ಮ (ಕ್ಷಯ) ರೋಗವು ಆವರಿಸಿದ್ದಾಗ, ಚಂದ್ರನು ಪ್ರಭಾಸಕ್ಷೇತ್ರಕ್ಕೆ ಹೋಗಿ ಸ್ನಾನಮಾಡಿದನು. ಆಗಲೇ ಆ ಪಾಪಜನ್ಯ ರೋಗದಿಂದ ಬಿಡುಗಡೆ ಹೊಂದಿದನು. ಜೊತೆಗೆ ಅವನಿಗೆ ಕಲೆಗಳ ಅಭಿವೃದ್ಧಿಯು ಪ್ರಾಪ್ತವಾಯಿತು. ॥ ೩೬ ॥ ನಾವೂ ಕೂಡ ಪ್ರಭಾಸಕ್ಷೇತ್ರಕ್ಕೆ ಹೋಗಿ ಸ್ನಾನಮಾಡಿ, ದೇವತೆಗಳಿಗೆ, ಪಿತೃಗಳಿಗೆ ತರ್ಪಣವಿತ್ತು, ಜೊತೆಗೆ ನಾನಾಗುಣಗಳಿಂದ ಕೂಡಿದ ಪಕ್ವಾನ್ನಗಳನ್ನು ಮಾಡಿ ಶ್ರೇಷ್ಠ ಬ್ರಾಹ್ಮಣರಿಗೆ ಉಣಬಡಿಸೋಣ. ಅಲ್ಲಿ ನಾವು ಆ ಸತ್ಪಾತ್ರ ಬ್ರಾಹ್ಮಣರಿಗೆ ಶ್ರದ್ಧೆಯಿಂದ ಭಾರೀ ದಕ್ಷಿಣೆಗಳನ್ನು ಕೊಟ್ಟು ಅವರ ಮೂಲಕ, ಹಡಗಿನ ಮೂಲಕ ಸಮುದ್ರವನ್ನು ದಾಟುವಂತೆ ನಾವು ದೊಡ್ಡಸಂಕಟದಿಂದ ಪಾರಾಗಿ ಹೋಗೋಣ. ॥ ೩೭-೩೮ ॥

**ಶ್ರೀಶುಕಮುನಿಗಳು ಹೇಳುತ್ತಾರೆ** – ಕುರುಕುಲನಂದನನೇ! ಭಗವಾನ್ ಶ್ರೀಕೃಷ್ಣನು ಈ ವಿಧವಾಗಿ ಆಜ್ಞೆಮಾಡಿದಾಗ ಯದುವಂಶೀಯರು ಒಮ್ಮತದಿಂದ ಪ್ರಭಾಸಕ್ಷೇತ್ರಕ್ಕೆ ಹೋಗಲು ನಿಶ್ಚಯಿಸಿದರು. ಎಲ್ಲರೂ ತಮ್ಮ-ತಮ್ಮ ರಥಗಳನ್ನು ಸಜ್ಜುಗೊಳಿಸತೊಡಗಿದರು. ॥ ೩೯ ॥

ತನ್ನಿರೀಕ್ಷ್ಯೋದ್ಧವೋ ರಾಜನ್ ಶ್ರುತ್ವಾ ಭಗವತೋದಿತಮ್ ।
ದೃಷ್ಟ್ವಾರಿಷ್ಟಾನಿ ಘೋರಾಣಿ ನಿತ್ಯಂ ಕೃಷ್ಣಮನುವ್ರತಃ ॥ ೪೦ ॥

ವಿವಿಕ್ತ ಉಪಸಂಗಮ್ಯ ಜಗತಾಮೀಶ್ವರೇಶ್ವರಮ್ ।
ಪ್ರಣಮ್ಯ ಶಿರಸಾ ಪಾದೌ ಪ್ರಾಂಜಲಿಸ್ತಮಭಾಷತ ॥ ೪೧ ॥

ಉದ್ಧವ ಉವಾಚ

ದೇವದೇವೇಶ ಯೋಗೇಶ ಪುಣ್ಯಶ್ರವಣಕೀರ್ತನ ।
ಸಂಹೃತ್ಯೈತತ್ಕುಲಂ ನೂನಂ ಲೋಕಂ ಸಂತ್ಯಕ್ಷ್ಯತೇ ಭವಾನ್ ।
ವಿಪ್ರಶಾಪಂ ಸಮರ್ಥೋಽಪಿ ಪ್ರತ್ಯಹನ್ನ ಯದೀಶ್ವರಃ ॥ ೪೨ ॥

ನಾಹಂ ತವಾಂಘ್ರಿಕಮಲಂ ಕ್ಷಣಾರ್ಧಮಪಿ ಕೇಶವ ।
ತ್ಯಕ್ತುಂ ಸಮುತ್ಸಹೇ ನಾಥ ಸ್ವಧಾಮ ನಯ ಮಾಮಪಿ ॥ ೪೩ ॥

ತವ ವಿಕ್ರೀಡಿತಂ ಕೃಷ್ಣ ನೃಣಾಂ ಪರಮಮಂಗಲಮ್ ।
ಕರ್ಣಪೀಯೂಷಮಾಸ್ವಾದ್ಯ ತ್ಯಜತ್ಯನ್ಯಸ್ಪೃಹಾಂ ಜನಃ ॥ ೪೪ ॥

ಶಯ್ಯಾಸನಾಟನಸ್ಥಾನಸ್ನಾನಕ್ರೀಡಾಶನಾದಿಷು ।
ಕಥಂ ತ್ವಾಂ ಪ್ರಿಯಮಾತ್ಮಾನಂ ವಯಂ ಭಕ್ತಾಸ್ತ್ಯಜೇಮಹಿ ॥ ೪೫ ॥

ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ ।
ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥ ೪೬ ॥

ವಾತರಶನಾ ಯ ಋಷಯಃ ಶ್ರಮಣಾ ಊರ್ಧ್ವಮಂಥಿನಃ ।
ಬ್ರಹ್ಮಾಖ್ಯಂ ಧಾಮ ತೇ ಯಾಂತಿ ಶಾಂತಾಃ ಸಂನ್ಯಾಸಿನೋಽಮಲಾಃ ॥ ೪೭ ॥

ಪರೀಕ್ಷಿತನೇ! ಉದ್ಧವನು ಭಗವಾನ್ ಶ್ರೀಕೃಷ್ಣನ ಭಕ್ತನೂ, ಸೇವಕನೂ ಆಗಿದ್ದನು. ಅವನು ಯದುವಂಶೀಯರ ಯಾತ್ರೆಯ ಸಿದ್ಧತೆಯನ್ನು ನೋಡಿ, ಭಗವಂತನ ಆಜ್ಞೆಯನ್ನು ಕೇಳಿ, ಅತ್ಯಂತ ಘೋರ ಅಪಶಕುನಗಳನ್ನು ಗಮನಿಸಿದಾಗ ಉದ್ಧವನು ಜಗತ್ತಿನ ಏಕಮಾತ್ರ ಅಧೀಶ್ವರ ಭಗವಾನ್ ಶ್ರೀಕೃಷ್ಣನ ಏಕಾಂತವನ್ನು ಪ್ರವೇಶಿಸಿ ಅವನ ಚರಣಗಳಲ್ಲಿ ಶಿರಸ್ಸನ್ನಿಟ್ಟು ವಂದಿಸಿ, ಕೈಜೋಡಿಸಿ ಕೊಂಡು ಅವನಲ್ಲಿ ಪ್ರಾರ್ಥಿಸತೊಡಗಿದನು. ॥ ೪೦-೪೧ ॥

ಉದ್ಧವನಿಂತೆಂದನು – ಯೋಗೇಶ್ವರನೇ! ದೇವಾಧಿ ದೇವನೇ! ನಿನ್ನ ಲೀಲೆಗಳ ಶ್ರವಣ-ಕೀರ್ತನದಿಂದ ಜಗತ್ತು ಪವಿತ್ರ ವಾಗುತ್ತದೆ. ನೀನು ಸರ್ವಶಕ್ತ ಪರಮೇಶ್ವರನಾಗಿರುವೆ. ಬ್ರಾಹ್ಮಣರ ಶಾಪವನ್ನು ತೊಡೆದುಹಾಕುವಲ್ಲಿ ನೀನು ಸಮರ್ಥನಾಗಿದ್ದರೂ ಹಾಗೆ ಮಾಡಲಿಲ್ಲ, ಈಗ ನೀನು ಯದುವಂಶವನ್ನು ಸಂಹರಿಸಿ, ಇದನ್ನು ಕೊನೆಗಾಣಿಸಿ ನೀನು ಅವಶ್ಯವಾಗಿ ಈ ಲೋಕವನ್ನು ಪರಿತ್ಯಜಿಸುವೆ ಎಂದು ನಾನು ತಿಳಿದುಕೊಂಡೆ. ॥ ೪೨ ॥

ಓ ಶ್ಯಾಮಸುಂದರಾ! ಪ್ರಾಣನಾಥನೇ! ನಾನು ನಿನ್ನ ದಿವ್ಯ ವಾದ ಚರಣಕಮಲಗಳನ್ನು ಕ್ಷಣಾರ್ಧವೂ ಬಿಟ್ಟಿರಲಾರೆನು. ನನ್ನ ಜೀವನ ಸರ್ವಸ್ವವಾದ ಸ್ವಾಮಿಯೇ! ನೀನು ನನ್ನನ್ನೂ ನಿನ್ನ ಧಾಮಕ್ಕೆ ಕೊಂಡುಹೋಗಿಬಿಡು. ॥ ೪೩ ॥ ಪ್ರಿಯಕೃಷ್ಣಾ! ನಿನ್ನ ಒಂದೊಂದು ಲೀಲೆಯೂ ಮನುಷ್ಯರಿಗಾಗಿ ಪರಮ ಮಂಗಳ ದಾಯಕವಾಗಿದೆ. ಕಿವಿಗಳಿಗೆ ಅಮೃತಪ್ರಾಯವಾಗಿದೆ. ಒಮ್ಮೆ ಆ ಅಮೃತದ ಸವಿಯನ್ನು ಮೆದ್ದವನ ಮನಸ್ಸು ಮತ್ತೆ ಬೇರೆಡೆಗೆ ಹೋಗುವುದಿಲ್ಲ, ಸ್ವಾಮಿ! ನಾವಾದರೋ ಎದ್ದಾಗ-ಕೂತಾಗ, ಮಲಗಿ ಎದ್ದಾಗ, ಅಡ್ಡಾಡುವಾಗ ನಿನ್ನ ಜೊತೆಯಲ್ಲೇ ಇದ್ದೆವು. ನಾವು ನಿನ್ನೊಡನೆ ಸ್ನಾನಮಾಡಿದೆವು, ಆಟವಾಡಿದೆವು, ಊಟ ಮಾಡಿದೆವು, ಎಷ್ಟೊಂದು ಹೇಳಲೀ, ನಮ್ಮ ಎಲ್ಲ ಕ್ರಿಯೆಗಳು ನಿನ್ನೊಡನೇ ನಡೆಯುತ್ತಿತ್ತು. ನೀನು ನಮ್ಮ ಪ್ರಿಯತಮನಾಗಿರುವೆ. ಹೆಚ್ಚೇನು ನಮ್ಮ ಆತ್ಮನೇ ಆಗಿರುವೆ. ಇಂತಹ ಸ್ಥಿತಿಯಲ್ಲಿ ಪ್ರೇಮಿ ಭಕ್ತರಾದ ನಾವು ನಿನ್ನನ್ನು ಹೇಗೆ ಬಿಡಬಲ್ಲೆವು! ॥ ೪೪-೪೫ ॥ ನೀನು ಧರಿಸಿದ ವನಮಾಲೆಯನ್ನು ನಾವು ಪ್ರಸಾದರೂಪವಾಗಿ ಧರಿಸಿದೆವು. ನೀನು ಧರಿಸಿದ ಚಂದನಾದಿ ಅಲಂಕಾರಗಳನ್ನು ನಿನ್ನ ಪ್ರಸಾದವೆಂದು ಪಡೆದುಕೊಂಡೆವು. ನಾವು ನಿನ್ನ ಪ್ರಸಾದವನ್ನು ಪಡೆಯುವ ಸೇವಕರಾಗಿದ್ದೇವೆ. ಆದಕ್ಕಾಗಿ ನಾವು ನಿನ್ನ ಮಾಯೆಯ ಮೇಲೆ ಅವಶ್ಯವಾಗಿ ವಿಜಯವನ್ನು ಪಡೆದುಕೊಂಡೆವು. (ಆದ್ದ ರಿಂದ ಸ್ವಾಮಿ! ನಮಗೆ ನಿನ್ನ ಮಾಯೆಯ ಭಯವಿಲ್ಲ ಭಯವಿರುವುದಾದರೆ ಕೇವಲ ನಿನ್ನ ವಿಯೋಗದ್ದು) ॥ ೪೬ ॥ ದೊಡ್ಡ ದೊಡ್ಡ ಋಷಿ-ಮುನಿಗಳು ದಿಗಂಬರರಾಗಿದ್ದು ಆಜೀವನ ನೈಷ್ಠಿಕ ಬ್ರಹ್ಮಚರ್ಯವನ್ನು ಪಾಲಿಸುತ್ತಾ ಅಧ್ಯಾತ್ಮವಿದ್ಯೆಗಾಗಿ ಅತ್ಯಂತ ಪರಿಶ್ರಮ ಪಡುವರು. ಈ ವಿಧವಾಗಿ ಕಠಿಣ ಸಾಧನೆಯಿಂದ ಆ ಸಂನ್ಯಾಸಿಗಳ ಹೃದಯ ನಿರ್ಮಲವಾಗುತ್ತದೆ. ಆಗ ಎಲ್ಲಾದರೂ ಅವರು ಸಮಸ್ತ ವೃತ್ತಿಗಳ ಶಾಂತಿರೂಪೀ ನೈಷ್ಕರ್ಮ್ಯ ಅವಸ್ಥೆಯಲ್ಲಿ ಸ್ಥಿರರಾಗಿ ನಿನ್ನ ಬ್ರಹ್ಮನಾಮಕ ಧಾಮವನ್ನು ಪಡೆದುಕೊಳ್ಳುತ್ತಾರೆ. ॥ ೪೭ ॥

ವಯಂ ತ್ವಿಹ ಮಹಾಯೋಗಿನ್ ಭ್ರಮಂತಃ ಕರ್ಮವರ್ತ್ಮಸು ।
ತ್ವದ್ವಾರ್ತಯಾ ತರಿಷ್ಯಾಮಸ್ತಾವಕೈರ್ದುಸ್ತರಂ ತಮಃ ॥ ೪೮ ॥

ಸ್ಮರಂತಃ ಕೀರ್ತಯಂತಸ್ತೇ ಕೃತಾನಿ ಗದಿತಾನಿ ಚ ।
ಗತ್ಯುತ್ಸ್ಮಿತೇಕ್ಷಣಕ್ಷ್ವೇಲಿ ಯನ್ನೃಲೋಕವಿಡಂಬನಮ್ ॥ ೪೯ ॥

ಓ ಮಹಾಯೋಗಿಯೇ! ನಾವಾದರೋ ಕರ್ಮಮಾರ್ಗದಲ್ಲೇ ಅಲೆಯುತ್ತಿದ್ದೇವೆ. ಆದರೆ ನಾವು ನಿನ್ನ ಭಕ್ತರೊಡನೆ ನಿನ್ನ ಗುಣ-ಲೀಲೆಗಳನ್ನು ಚರ್ಚಿಸುತ್ತಾ, ಮನುಷ್ಯರಂತೆ ಲೀಲೆಗಳನ್ನು ಮಾಡುತ್ತಾ ನೀನು ಹೇಳಿದುದನ್ನು ಸ್ಮರಣ-ಕೀರ್ತನೆ ಮಾಡುತ್ತಾ ಇರುವೆವು. ಜೊತೆಗೆ ನಿನ್ನ ನಡೆ-ನಿಲುವು, ಮಂದಹಾಸ, ಓರೆನೋಟ, ಹಾಸ-ಪರಿಹಾಸಗಳ ಸ್ಮೃತಿಯಲ್ಲಿ ತಲ್ಲೀನವಾಗಿ ಹೋಗುವೆವು. ಕೇವಲ ಇದರಿಂದಲೇ ನಾವು ದುಸ್ತರವಾದ ಮಾಯೆಯನ್ನು ದಾಟಿಹೋಗುವೆವು. (ಅದಕ್ಕಾಗಿ ನಮಗೆ ಮಾಯೆಯನ್ನು ದಾಟಲು ಚಿಂತೆಯಿಲ್ಲ, ನಿನ್ನ ವಿರಹದ್ದೇ ಚಿಂತೆ ಇದೆ. ನೀನು ನಮ್ಮ ಕೈಬಿಡದೆ, ಜೊತೆಗೆ ಕರೆದುಕೊಂಡು ಹೋಗು.) ॥ ೪೮-೪೯ ॥

*ಶ್ರೀಶುಕ ಉವಾಚ*

ಏವಂ ವಿಜ್ಞಾಪಿತೋ ರಾಜನ್ ಭಗವಾನ್ ದೇವಕೀಸುತಃ ।
ಏಕಾಂತಿನಂ ಪ್ರಿಯಂ ಭೃತ್ಯಮುದ್ಧವಂ ಸಮಭಾಷತ ॥ ೫೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತ್ತನೇ! ಉದ್ಧವನು ದೇವಕಿನಂದನ ಭಗವಾನ್ ಶ್ರೀಕೃಷ್ಣನಲ್ಲಿ ಈ ಪ್ರಕಾರ ಪ್ರಾರ್ಥಿಸಿದಾಗ ಅವನು ತನ್ನ ಅನನ್ಯ ಪ್ರೇಮಿಯೂ, ಸಖನೂ, ಸೇವಕನೂ ಆದ ಉದ್ಧವನಲ್ಲಿ ಇಂತೆಂದನು – ॥ ೫೦ ॥

ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ಅವಧೂತೋಪಾಖ್ಯಾನ
## ಪೃಥ್ವಿಯಿಂದ ಪಾರಿವಾಳದ ತನಕ ಎಂಟು ಗುರುಗಳ ಕಥೆ

*ಶ್ರೀಭಗವಾನುವಾಚ*

ಯದಾತ್ಥ ಮಾಂ ಮಹಾಭಾಗ ತಚ್ಚಿಕೀರ್ಷಿತಮೇವ ಮೇ ।
ಬ್ರಹ್ಮಾ ಭವೋ ಲೋಕಪಾಲಾಃ ಸ್ವರ್ವಾಸಂ ಮೇಽಭಿಕಾಂಕ್ಷಿಣಃ ॥ ೧ ॥

ಮಯಾ ನಿಷ್ಪಾದಿತಂ ಹ್ಯತ್ರ ದೇವಕಾರ್ಯಮಶೇಷತಃ ।
ಯದರ್ಥಮವತೀರ್ಣೋಽಹಮಂಶೇನ ಬ್ರಹ್ಮಣಾರ್ಥಿತಃ ॥ ೨ ॥

ಕುಲಂ ವೈ ಶಾಪನಿರ್ದಗ್ಧಂ ನಂಕ್ಷ್ಯತ್ಯನ್ಯೋನ್ಯ ವಿಗ್ರಹಾತ್ ।
ಸಮುದ್ರಃ ಸಪ್ತಮೇಽಹ್ನ್ಯೇತಾಂ ಪುರೀಂ ಚ ಪ್ಲಾವಯಿಷ್ಯತಿ ॥ ೩ ॥

ಯರ್ಹ್ಯೇವಾಯಂ ಮಯಾ ತ್ಯಕ್ತೋ
ಲೋಕೋಽಯಂ ನಷ್ಟಮಂಗಲಃ ।
ಭವಿಷ್ಯತ್ಯಚಿರಾತ್ ಸಾಧೋ
ಕಲಿನಾಪಿ ನಿರಾಕೃತಃ ॥ ೪ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಮಹಾಭಾಗ್ಯಶಾಲಿಯಾದ ಉದ್ಧವನೇ! ನೀನು ನನ್ನೊಡನೆ ಹೇಳಿದುದನ್ನೇ ನಾನು ಮಾಡಲು ಅಪೇಕ್ಷಿಸಿದ್ದೇನೆ. ಬ್ರಹ್ಮ, ರುದ್ರಾದಿ, ಇಂದ್ರನೇ ಮೊದಲಾದ ಲೋಕಪಾಲರೂ ಕೂಡ ನಾನು ಭೂಲೋಕವನ್ನು ತ್ಯಜಿಸಿ ಸ್ವಧಾಮದಲ್ಲಿ ವಾಸಿಸಬೇಕೆಂದು ಅಪೇಕ್ಷಿಸುತ್ತಿದ್ದಾರೆ. ॥ ೧ ॥ ಬ್ರಹ್ಮನ ಪ್ರಾರ್ಥನೆಯಂತೆ ನಾನು ನನ್ನ ಅಂಶ ಬಲರಾಮನೊಂದಿಗೆ ಭೂತಲದಲ್ಲಿ ಅವತರಿಸಿದ್ದೆ. ದೇವತೆಗಳ ಸಲುವಾಗಿ ಇದ್ದ ಎಲ್ಲ ಕಾರ್ಯಗಳನ್ನು ಮಾಡಿ ಮುಗಿಸಿದೆ. ॥ ೨ ॥ ನಮ್ಮ ಕುಲವು ಈಗಾಗಲೇ ಬ್ರಾಹ್ಮಣರ ಶಾಪದಿಂದ ದಗ್ಧವಾಗಿದ್ದು, ಪರಸ್ಪರ ಕಲಹದಿಂದ ಮತ್ತು ಯುದ್ಧದಿಂದ ವಿನಾಶ ಹೊಂದುತ್ತದೆ. ಇಂದಿನಿಂದ ಏಳನೆಯ ದಿನ ಸಮುದ್ರವು ಈ ದ್ವಾರಕಾಪುರಿಯನ್ನು ಮುಳುಗಿಸಿಬಿಡುತ್ತದೆ. ॥ ೩ ॥ ಪ್ರಿಯ ಉದ್ಧವನೇ! ಈ ಮರ್ತ್ಯಲೋಕವನ್ನು ನಾನು ಪರಿತ್ಯಜಿಸಿ ಹೊರಟುಹೋದೊಡನೆಯೇ ಇದರ ಎಲ್ಲ ಮಂಗಳಗಳೂ ನಾಶವಾಗಿ ಹೋಗುವವು ಮತ್ತು ಕೆಲವೇ ದಿನಗಳಲ್ಲಿ ಕಲಿಯುಗವು ಪೂರ್ಣವಾಗಿ ಆವರಿಸಿಬಿಡುವುದು. ॥ ೪ ॥

ನ ವಸ್ತವ್ಯಂ ತ್ವಯೈವೇಹ ಮಯಾ ತ್ಯಕ್ತೇ ಮಹೀತಲೇ ।
ಜನೋಽಧರ್ಮರುಚಿರ್ಭದ್ರ ಭವಿಷ್ಯತಿ ಕಲೌ ಯುಗೇ
॥ ೫ ॥

ತ್ವಂ ತು ಸರ್ವಂ ಪರಿತ್ಯಜ್ಯ ಸ್ನೇಹಂ ಸ್ವಜನಬಂಧುಷು ।
ಮಯ್ಯಾವೇಶ್ಯ ಮನಃ ಸಮ್ಯಕ್ ಸಮದೃಗ್ವಿಚರಸ್ವ ಗಾಮ್
॥ ೬ ॥

ಯದಿದಂ ಮನಸಾ ವಾಚಾ ಚಕ್ಷುರ್ಭ್ಯಾಂ ಶ್ರವಣಾದಿಭಿಃ ।
ನಶ್ವರಂ ಗೃಹ್ಯಮಾಣಂ ಚ ವಿದ್ಧಿ ಮಾಯಾ ಮನೋಮಯಮ್
॥ ೭ ॥

ಪುಂಸೋಽಯುಕ್ತಸ್ಯ ನಾನಾರ್ಥೋ ಭ್ರಮಃ ಸ ಗುಣದೋಷಭಾಕ್ ।
ಕರ್ಮಾಕರ್ಮವಿಕರ್ಮೇತಿ ಗುಣದೋಷಧಿಯೋ ಭಿದಾ
॥ ೮ ॥

ತಸ್ಮಾದ್ಯುಕ್ತೇಂದ್ರಿಯಗ್ರಾಮೋ ಯುಕ್ತಚಿತ್ತ ಇದಂ ಜಗತ್ ।
ಆತ್ಮನೀಕ್ಷಸ್ವ ವಿತತಮಾತ್ಮಾನಂ ಮಯ್ಯಧೀಶ್ವರೇ
॥ ೯ ॥

ಜ್ಞಾನವಿಜ್ಞಾನಸಂಯುಕ್ತ ಆತ್ಮಭೂತಃ ಶರೀರಿಣಾಮ್ ।
ಆತ್ಮಾನುಭವತುಷ್ಟಾತ್ಮಾ ನಾಂತರಾಯೈರ್ವಿಹನ್ಯಸೇ
॥ ೧೦ ॥

ದೋಷಬುದ್ಧ್ಯೋಭಯಾತೀತೋ ನಿಷೇಧಾನ್ನ ನಿವರ್ತತೇ ।
ಗುಣಬುದ್ಧ್ಯಾ ಚ ವಿಹಿತಂ ನ ಕರೋತಿ ಯಥಾರ್ಭಕಃ
॥ ೧೧ ॥

ಸರ್ವಭೂತಸುಹೃಚ್ಛಾಂತೋ ಜ್ಞಾನವಿಜ್ಞಾನನಿಶ್ಚಯಃ ।
ಪಶ್ಯನ್ಮದಾತ್ಮಕಂ ವಿಶ್ವಂ ನ ವಿಪದ್ಯೇತ ವೈ ಪುನಃ
॥ ೧೨ ॥

ಶ್ರೀಶುಕ ಉವಾಚ

ಇತ್ಯಾದಿಷ್ಟೋ ಭಗವತಾ ಮಹಾಭಾಗವತೋ ನೃಪ ।
ಉದ್ಧವಃ ಪ್ರಣಿಪತ್ಯಾಹ ತತ್ತ್ವಜಿಜ್ಞಾಸುರಚ್ಯುತಮ್
॥ ೧೩ ॥

ಸಾಧು ಉದ್ಧವನೇ! ನಾನು ಪೃಥ್ವಿಯನ್ನು ತ್ಯಜಿಸಿದ ಬಳಿಕ ನೀನೂ ಇಲ್ಲಿರಬಾರದು. ಏಕೆಂದರೆ ಕಲಿಯುಗದಲ್ಲಿ ಜನರು ಅಧರ್ಮದಲ್ಲಿಯೇ ಹೆಚ್ಚು ಅಭಿರುಚಿಯುಳ್ಳವರಾಗಿರುತ್ತಾರೆ. ಅಂತಹವರ ಮಧ್ಯದಲ್ಲಿ ನೀನು ಇರಬಾರದು. ॥ ೫ ॥ ಈಗ ನೀನಾದರೋ ನಿನ್ನ ಆತ್ಮೀಯ ಸ್ವಜನ ಬಂಧು-ಬಾಂಧವರಲ್ಲಿದ್ದ ಸ್ನೇಹಸಂಬಂಧವನ್ನು ತೊರೆದು, ನಿನ್ನ ಮನಸ್ಸನ್ನು ಅನನ್ಯಭಕ್ತಿಯಿಂದ ನನ್ನಲ್ಲಿ ತೊಡಗಿಸಿ, ಚರಾಚರ ಪ್ರಾಣಿಗಳನ್ನು ಸಮದೃಷ್ಟಿಯಿಂದ ನೋಡುತ್ತಾ ಭೂಮಿಯಲ್ಲಿ ಸ್ವಚ್ಛಂದವಾಗಿ ಸಂಚರಿಸುತ್ತಿರು.॥ ೬ ॥ ಈ ಜಗತ್ತಿನಲ್ಲಿ ಮನಸ್ಸಿನಿಂದ ಯೋಚಿಸಲಾಗುವ, ವಾಣಿಯಿಂದ ನುಡಿಯಲಾಗುವ, ಕಣ್ಣುಗಳಿಂದ ನೋಡಲಾಗುವ, ಕಿವಿಗಳಿಂದ ಕೇಳಲಾಗುವ, ಮೂಗಿನಿಂದ ಮೂಸುವ, ಚರ್ಮದಿಂದ ಸ್ಪರ್ಶಿಸುವ ಎಲ್ಲವೂ ನಾಶವುಳ್ಳದ್ದಾಗಿದೆ. ಸ್ವಪ್ನದಂತೆ ಮನೋವಿಲಾಸ ವಾಗಿದೆ. ಆದಕ್ಕಾಗಿ ಮಾಯಾಮಾತ್ರವಾಗಿದ್ದು ಮಿಥ್ಯೆಯಾಗಿದೆ ಎಂದು ತಿಳಿದುಕೊ. ॥ ೭ ॥ ಚಂಚಲಚಿತ್ತವುಳ್ಳ ಅಸಂಯಮಿ ಮನುಷ್ಯನಿಗೆ ನಾನಾತ್ವದ ಭಾವನೆ ಉಂಟಾಗುತ್ತದೆ. ಇಂತಹ ಭ್ರಮೆ ಉಂಟಾದಬಳಿಕ ಇದು ಗುಣ, ಇದು ದೋಷ ಎಂಬೀ ಭೇದದೃಷ್ಟಿ ಉಂಟಾಗಿದ್ದು ತನ್ನಲ್ಲೇ ಕಲ್ಪಿಸಿಕೊಂಡದ್ದಾಗಿದೆ. ಇಂತಹ ಜನರಿಗಾಗಿಯೇ ಕರ್ಮ (ಶಾಸ್ತ್ರವಿಹಿತ ಕರ್ಮ), ಅಕರ್ಮ (ಶಾಸ್ತ್ರ ನಿಷಿದ್ಧಕರ್ಮ), ವಿಕರ್ಮ (ವಿಹಿತಕರ್ಮದ ತ್ಯಾಗ) – ಇವುಗಳ ವಿಷಯದಲ್ಲಿ ಪ್ರತಿಪಾದಿಸಲಾಗುತ್ತದೆ. ॥ ೮ ॥ ಆದುದರಿಂದ ಎಲೈ ಉದ್ಧವನೇ! ನೀನು ನಿನ್ನ ಇಂದ್ರಿಯಗಳನ್ನು, ಚಿತ್ತವನ್ನು ವಶಪಡಿಸಿ ಕೊಂಡು ಈ ಸಮಸ್ತ ವಿಶ್ವವನ್ನು ಆತ್ಮನಲ್ಲಿ ನೋಡು ಮತ್ತು ಆತ್ಮವನ್ನು ಅಧೀಶ್ವರನಾದ ನನ್ನಲ್ಲಿ ನೋಡು. ॥ ೯ ॥ ಎಲ್ಲರ ಆತ್ಮವು ನಾನೇ ಆಗಿದ್ದೇನೆ ಎಂದು ಅರಿತು ಎಲ್ಲ ದೇಹಧಾರಿಗಳಲ್ಲಿ ಆತ್ಮಭೂತನಾಗಿ ಹೋಗು. ತನ್ನ ಆತ್ಮಾನುಭವದಲ್ಲಿ ಆನಂದಮಗ್ನನಾಗಿ, ಜ್ಞಾನ ವಿಜ್ಞಾನದಿಂದ ಸಂಪನ್ನನಾಗಿರು. ಮತ್ತೆ ಯಾವುದೇ ವಿಘ್ನಗಳು ಬಂದರೂ ನೀನು ಪೀಡಿತನಾಗಲಾರೆ. ॥ ೧೦ ॥ ಗುಣ ಮತ್ತು ದೋಷ ಇವೆರಡರಿಂದ ಪೂರ್ಣವಾಗಿ ಅತೀತನಾಗು. ಮಗುವು ಗುಣಬುದ್ಧಿಯಿಂದ ವಿಹಿತಕರ್ಮವನ್ನು ಮಾಡುವುದಿಲ್ಲ. ದೋಷ ಬುದ್ಧಿಯಿಂದ ನಿಷಿದ್ಧದಿಂದ ನಿವೃತ್ತನಾಗುವುದಿಲ್ಲ. ಅರ್ಥಾತ್ ಮಗುವಿನಲ್ಲಿ ಗುಣಬುದ್ಧಿಯೂ ಇರುವುದಿಲ್ಲ ದೋಷಬುದ್ಧಿಯೂ ಇರುವುದಿಲ್ಲ. ಆದಾದರೋ ಪರಮಹಂಸನಂತೆ ಇರುತ್ತದೆ. ಹಾಗೆಯೇ ನೀನೂ ಗುಣ-ದೋಷಗಳಿಂದ ಅತೀತನಾಗು. ॥ ೧೧ ॥ ಯೋಗಿಯು ಸಮಸ್ತ ಪ್ರಾಣಿಗಳಲ್ಲಿ ಸುಹೃದ್‌ಭಾವವಿರಿಸಬೇಕು. ಚಿತ್ತದಲ್ಲಿ ಸದಾಕಾಲ ಶಾಂತಿಯಿದ್ದು ಏಕಮಾತ್ರ ಪರಮಾತ್ಮನ ಅನುಭವವು ದೃಢವಾಗಿ ಇರಬೇಕು. ಇಡೀ ವಿಶ್ವವು ನನ್ನದೇ ಸ್ವರೂಪವೆಂದು ತಿಳಿಯಬೇಕು. ಹೀಗಾದಾಗ ಮತ್ತೆ ಅವನು ಜನ್ಮ ಮರಣದ ಚಕ್ರದಲ್ಲಿ ಬೀಳುವುದಿಲ್ಲ. ॥ ೧೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಹೀಗೆ ಆದೇಶಿಸಿದಾಗ ಪರಮಪ್ರೇಮೀ ಉದ್ಧವನು ಭಗವಂತನಿಗೆ ನಮಸ್ಕರಿಸುತ್ತಾ ತತ್ತ್ವಜ್ಞಾನ ಪ್ರಾಪ್ತಿಯ ಬಯಕೆಯಿಂದ ಇಂತು ಪ್ರಶ್ನಿಸಿದನು – ॥ ೧೩ ॥

ಉದ್ಧವ ಉವಾಚ

**ಯೋಗೇಶ ಯೋಗವಿನ್ಯಾಸ ಯೋಗಾತ್ಮನ್ ಯೋಗಸಂಭವ ।**
**ನಿಃಶ್ರೇಯಸಾಯ ಮೇ ಪ್ರೋಕ್ತಸ್ತ್ಯಾಗಃ ಸಂನ್ಯಾಸಲಕ್ಷಣಃ ॥ ೧೪ ॥**

**ತ್ಯಾಗೋಽಯಂ ದುಷ್ಕರೋ ಭೂಮನ್ ಕಾಮಾನಾಂ ವಿಷಯಾತ್ಮಭಿಃ ।**
**ಸುತರಾಂ ತ್ವಯಿ ಸರ್ವಾತ್ಮನ್ನಭಕ್ತೈರಿತಿ ಮೇ ಮತಿಃ ॥ ೧೫ ॥**

**ಸೋಽಹಂ ಮಮಾಹಮಿತಿ ಮೂಢಮತಿರ್ವಿಗಾಢ-**
**ಸ್ತ್ವನ್ಮಾಯಯಾ ವಿರಚಿತಾತ್ಮನಿ ಸಾನುಬಂಧೇ ।**
**ತತ್ತ್ವಂಜಸಾ ನಿಗದಿತಂ ಭವತಾ ಯಥಾಹಂ**
**ಸಂಸಾಧಯಾಮಿ ಭಗವನ್ನನುಶಾಧಿ ಭೃತ್ಯಮ್ ॥ ೧೬ ॥**

**ಸತ್ಯಸ್ಯ ತೇ ಸ್ವದೃಶ ಆತ್ಮನ ಆತ್ಮನೋಽನ್ಯಂ**
**ವಕ್ತಾರಮೀಶ ವಿಬುಧೇಷ್ವಪಿ ನಾನುಚಕ್ಷೇ ।**
**ಸರ್ವೇ ವಿಮೋಹಿತಧಿಯಸ್ತವ ಮಾಯಯೇಮೇ**
**ಬ್ರಹ್ಮಾದಯಸ್ತನುಭೃತೋ ಬಹಿರರ್ಥಭಾವಾಃ ॥ ೧೭ ॥**

**ತಸ್ಮಾದ್ಭವಂತಮನವದ್ಯಮನಂತಪಾರಂ**
**ಸರ್ವಜ್ಞಮೀಶ್ವರಮಕುಂಠವಿಕುಂಠಧಿಷ್ಣ್ಯಮ್ ।**
**ನಿರ್ವಿಣ್ಣಧೀರಹಮು ಹ ವೃಜಿನಾಭಿತಪ್ತೋ**
**ನಾರಾಯಣಂ ನರಸಖಂ ಶರಣಂ ಪ್ರಪದ್ಯೇ ॥ ೧೮ ॥**

ಶ್ರೀಭಗವಾನುವಾಚ

**ಪ್ರಾಯೇಣ ಮನುಜಾ ಲೋಕೇ ಲೋಕತತ್ತ್ವವಿಚಕ್ಷಣಾಃ ।**
**ಸಮುದ್ಧರಂತಿ ಹ್ಯಾತ್ಮಾನಮಾತ್ಮನೈವಾಶುಭಾಶಯಾತ್ ॥ ೧೯ ॥**

**ಆತ್ಮನೋ ಗುರುರಾತ್ಮೈವ ಪುರುಷಸ್ಯ ವಿಶೇಷತಃ ।**
**ಯತ್ಪ್ರತ್ಯಕ್ಷಾನುಮಾನಾಭ್ಯಾಂ ಶ್ರೇಯೋಽಸಾವನುವಿಂದತೇ ॥ ೨೦ ॥**

**ಪುರುಷತ್ವೇ ಚ ಮಾಂ ಧೀರಾಃ ಸಾಂಖ್ಯಯೋಗವಿಶಾರದಾಃ ।**
**ಆವಿಸ್ತರಾಂ ಪ್ರಪಶ್ಯಂತಿ ಸರ್ವಶಕ್ತ್ಯುಪಬೃಂಹಿತಮ್ ॥ ೨೧ ॥**

**ಉದ್ಧವನಿಂತೆಂದನು** – ಓ ಭಗವಂತಾ! ನೀನೇ ಯೋಗದ ಒಡೆಯನಾಗಿರುವೆ. ಯೋಗವು ನಿನ್ನಲ್ಲೇ ಪ್ರತಿಷ್ಠಿತವಾಗಿದೆ. ನೀನು ಸಾಕ್ಷಾತ್ ಯೋಗದ ಸ್ವರೂಪವೇ ಆಗಿರುವೆ. ಯೋಗದ ಜನ್ಮ ಸ್ಥಾನವು ನೀನೇ ಆಗಿರುವೆ. ನೀನು ನನಗಾಗಿ ಪರಮ ಶ್ರೇಯಸ್ಸಿಗಾಗಿಯೇ ಸಂನ್ಯಾಸರೂಪೀ ತ್ಯಾಗದ ಲಕ್ಷಣವನ್ನು ಉಪದೇಶಿಸಿರುವೆ. ॥ ೧೪ ॥ ಅನೇಕ ಕಾಮನೆಗಳಲ್ಲಿ ಸಿಕ್ಕಿಕೊಂಡಿರುವ ವಿಷಯೀ ಜೀವರಿಗೆ ಈ ತ್ಯಾಗದ ತತ್ತ್ವವು ತಿಳಿಯಲು ಬಹು ಕಠಿಣವಾಗಿದೆ. ಮುಖ್ಯವಾಗಿ ನಿನ್ನ ಭಕ್ತಿಯಿಂದ ವಿಮುಖರಾದವರಿಗಂತೂ ಇನ್ನೂ ಕಷ್ಟವೇ ಆಗಿದೆ. ಇದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ. ॥ ೧೫ ॥ ಪ್ರಭುವೇ! ನಾನೂ ಕೂಡ 'ನಾನು-ನನ್ನದು' ಎಂಬ ಸುಳಿಯಲ್ಲಿ ಸಿಕ್ಕಿಕೊಂಡಿರುವೆನು. ನನ್ನ ಬುದ್ಧಿಯೂ ನಿನ್ನದೇ ಮಾಯೆಯಿಂದ ನನ್ನ ಪರಿವಾರದ ಆಪ್ತಜನರ ಕುರಿತು ಅಹಂತೆ, ಮಮತೆಯಲ್ಲಿ ಮೂಢತೆಯಿಂದ ಬಿಡಲಾರದಷ್ಟು ಆಳವಾಗಿ ಬೇರೂರಿದೆ. ನೀನು ಈಗ ಪ್ರತಿಪಾದಿಸಿದ ಸಂನ್ಯಾಸ ತ್ಯಾಗದ ಧರ್ಮವನ್ನು ನಾನು ಹೇಗೆ ಸಹಜಭಾವದಿಂದ ಸಾಧನೆ ಮಾಡಬಲ್ಲೆ? ಎಂಬುದೇ ಯೋಚನೆಯಾಗಿದೆ. ಸೇವಕನಾದ ನನಗೆ ಸರಳ ರೀತಿಯಿಂದ ನೀನು ಉಪದೇಶಿಸುವ ಕೃಪೆಮಾಡಬೇಕು. ॥ ೧೬ ॥ ಪ್ರಭುವೇ! ನೀನೇ ಸತ್ಯಸ್ವರೂಪನಾಗಿರುವೆ. ಎಲ್ಲರ ನೇತ್ರಸ್ವರೂಪ ಅರ್ಥಾತ್ ಪ್ರಕಾಶಕನೂ ನೀನೇ ಆಗಿರುವೆ. ಎಲ್ಲರ ಆತ್ಮವೂ ನೀನೇ ಆಗಿರುವೆ. ಇಂತಹ ನೀನಿರುವಾಗ ಈ ಆತ್ಮತತ್ತ್ವದ ವಿಷಯದಲ್ಲಿ ಪ್ರತಿಪಾದಿಸುವವರು ನಿನ್ನಿಂದ ಬೇರೆ ಯಾರನ್ನೂ ನಾನು ನೋಡುವುದಿಲ್ಲ. ಏಕೆಂದರೆ, ಬ್ರಹ್ಮನಿಂದ ಹಿಡಿದು ಇರುವವರೆಲ್ಲ ಜೀವರೂ ನಿನ್ನ ಮಾಯೆಯಿಂದ ಮೋಹಿತರಾಗಿರುವರು. ಆದ್ದರಿಂದ ಅವರು ಬಾಹ್ಯವಸ್ತುಗಳನ್ನೇ ಸತ್ಯವೆಂದು ಭಾವಿಸುತ್ತಾರೆ. ॥ ೧೭ ॥ ಪ್ರಭುವೇ! ನರಸಖ ನಾರಾಯಣ ಸ್ವರೂಪಿಯಾದ ನಿನ್ನಲ್ಲಿ ನಾನು ಶರಣಾಗಿದ್ದೇನೆ. ನೀನು ನಿರಂಜನನಾಗಿರುವೆ. ನಿನಗೆ ಅಂತ್ಯ-ಪಾರಗಳಿಲ್ಲ. ನೀನು ಸರ್ವಜ್ಞನಾಗಿದ್ದು ಎಲ್ಲರ ನಿಯಾಮಕನಾಗಿರುವೆ. ಅವಿನಾಶೀ ವೈಕುಂಠವು ನಿನ್ನದೇ ಧಾಮವಾಗಿದೆ. ನಾನು ಸಂಸಾರದಿಂದ ದುಃಖಿತನಾಗಿ ಸಂತಪ್ತನಾಗಿರುವೆನು. (ನೀನು ನನಗೆ ಶ್ರೇಯಸ್ಸಿನ ಉಪದೇಶವನ್ನಿತ್ತು ನನ್ನನ್ನು ಉದ್ಧರಿಸು.) ॥ ೧೮ ॥

**ಭಗವಂತನೆಂದನು** – ಪ್ರಿಯ ಉದ್ಧವಾ! ಪ್ರಾಯಶಃ ಈ ಪ್ರಪಂಚದ ವಾಸ್ತವಿಕ ಸ್ವರೂಪವನ್ನು ತಿಳಿಯಲು ಈ ಲೋಕವು ಅನಿತ್ಯವಾಗಿದೆ ಎಂದು ತಿಳಿದ ವಿದ್ವಾಂಸರಾದವರು ತಾವೇ ತಮ್ಮನ್ನು ಅಮಂಗಳಕರವಾದ ವಿಷಯವಾಸನೆಗಳಿಂದ ಉದ್ಧರಿಸಿಕೊಳ್ಳುತ್ತಾರೆ. ॥ ೧೯ ॥ ವಿಶೇಷವಾಗಿ ಮನುಷ್ಯನಿಗೆ ಅವನ ಆತ್ಮನೇ ಗುರುವಾಗಿದ್ದಾನೆ. ಅವನು ಪ್ರತ್ಯಕ್ಷಪ್ರಮಾಣದ ಮೂಲಕ ಹಾಗೂ ಅನುಮಾನ ಪ್ರಮಾಣದ ಮೂಲಕ ಸ್ವತಃ ತನ್ನ ಶ್ರೇಯಸ್ಸನ್ನು ಪಡೆಯಲು ಸಮರ್ಥನಾಗಿರುವನು. ॥ ೨೦ ॥ ಸಾಂಖ್ಯಶಾಸ್ತ್ರ ಮತ್ತು ಯೋಗಶಾಸ್ತ್ರಗಳಲ್ಲಿ ಪ್ರವೀಣರಾದ ಜ್ಞಾನಿಗಳು ಮನುಷ್ಯ ಯೋನಿಯಲ್ಲೇ ಸರ್ವಶಕ್ತಿ ಸಂಪನ್ನ ಪರಮಾತ್ಮನಾದ ನನ್ನನ್ನು ಅಪರೋಕ್ಷದಿಂದ ಹಾಗೂ ಸರ್ವವ್ಯಾಪಕ ವಿರಾಟ್ ಸಗುಣ ನಿರಾಕಾರ ರೂಪದಿಂದಲೂ ನನ್ನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ॥ ೨೧ ॥

ಏಕದ್ವಿತ್ರಿಚತುಷ್ಪಾದೋ ಬಹುಪಾದಸ್ತಥಾಪದಃ ।
ಬಹ್ವ್ಯಃ ಸಂತಿ ಪುರಃ ಸೃಷ್ಟಾಸ್ತಾಸಾಂ ಮೇ ಪೌರುಷೀ ಪ್ರಿಯಾ
॥ ೨೨ ॥

ಅತ್ರ ಮಾಂ ಮಾರ್ಗಯಂತ್ಯದ್ಧಾ ಯುಕ್ತಾ ಹೇತುಭಿರೀಶ್ವರಮ್ ।
ಗೃಹ್ಯಮಾಣೈರ್ಗುಣೈರ್ಲಿಂಗೈರಗ್ರಾಹ್ಯಮನುಮಾನತಃ
॥ ೨೩ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಅವಧೂತಸ್ಯ ಸಂವಾದಂ ಯದೋರಮಿತತೇಜಸಃ
॥ ೨೪ ॥

ಅವಧೂತಂ ದ್ವಿಜಂ ಕಂಚಿಚ್ಚರಂತಮಕುತೋಭಯಮ್ ।
ಕವಿಂ ನಿರೀಕ್ಷ್ಯ ತರುಣಂ ಯದುಃ ಪಪ್ರಚ್ಛ ಧರ್ಮವಿತ್
॥ ೨೫ ॥

ಯದುರುವಾಚ

ಕುತೋ ಬುದ್ಧಿರಿಯಂ ಬ್ರಹ್ಮನ್ನಕರ್ತುಃ ಸುವಿಶಾರದಾ ।
ಯಾಮಾಸಾದ್ಯ ಭವಾನ್ಲೋಕಂ ವಿದ್ವಾಂಶ್ಚರತಿ ಬಾಲವತ್
॥ ೨೬ ॥

ಪ್ರಾಯೋ ಧರ್ಮಾರ್ಥಕಾಮೇಷು ವಿವಿತ್ಸಾಯಾಂ ಚ ಮಾನವಾಃ ।
ಹೇತುನೈವ ಸಮೀಹಂತೇ ಆಯುಷೋ ಯಶಸಃ ಶ್ರಿಯಃ
॥ ೨೭ ॥

ತ್ವಂ ತು ಕಲ್ಪಃ ಕವಿರ್ದಕ್ಷಃ ಸುಭಗೋಽಮೃತಭಾಷಣಃ ।
ನ ಕರ್ತಾ ನೇಹಸೇ ಕಿಂಚಿಜ್ಜಡೋನ್ಮತ್ತಪಿಶಾಚವತ್
॥ ೨೮ ॥

ಜನೇಷು ದಹ್ಯಮಾನೇಷು ಕಾಮಲೋಭದವಾಗ್ನಿನಾ ।
ನ ತಪ್ಯಸೇಽಗ್ನಿನಾ ಮುಕ್ತೋ ಗಂಗಾಂಭಸ್ಥ ಇವ ದ್ವಿಪಃ
॥ ೨೯ ॥

ತ್ವಂ ಹಿ ನಃ ಪೃಚ್ಛತಾಂ ಬ್ರಹ್ಮನ್ನಾತ್ಮನ್ಯಾನಂದಕಾರಣಮ್ ।
ಬ್ರೂಹಿ ಸ್ಪರ್ಶವಿಹೀನಸ್ಯ ಭವತಃ ಕೇವಲಾತ್ಮನಃ
॥ ೩೦ ॥

ನಾನು ಒಂದು ಕಾಲಿನ ಪ್ರಾಣಿಗಳನ್ನು, ಎರಡು ಕಾಲಿನ, ಮೂರು ಕಾಲಿನ, ನಾಲ್ಕು ಕಾಲಿನ, ಅನೇಕ ಕಾಲುಗಳುಳ್ಳ ಮತ್ತು ಕಾಲಿಲ್ಲದ ಅನೇಕ ಪ್ರಕಾರದ ಯೋನಿಗಳನ್ನು ನಿರ್ಮಾಣ ಮಾಡಿರುವೆನು. ಆದರೆ ಇವೆಲ್ಲದರಲ್ಲಿ ದ್ವಿಪಾದಿಯಾದ ಮನುಷ್ಯ ಶರೀರವೇ ನನಗೆ ಎಲ್ಲಕ್ಕಿಂತ ಹೆಚ್ಚು ಪ್ರಿಯವಾದುದು. ॥ ೨೨ ॥ ಭಗವಂತ ಹೇಳುತ್ತಾನೆ ನಾನಾದರೋ ಅಗ್ರಾಹ್ಯನಾಗಿದ್ದರೂ ಈ ಮನುಷ್ಯ ಶರೀರದ ಮೂಲಕವೇ ತಿಳಿಯಲ್ಪಡುವ ಕಾರಣಗಳಾದ ಹೇತುಗಳಿಂದ, ಗುಣಗಳಿಂದ, ಚಿಹ್ನೆಗಳಿಂದ, ಅನುಮಾನದಿಂದ ಈಶ್ವರನಾದ ನನ್ನನ್ನು ಹುಡುಕಿಕೊಳ್ಳುತ್ತಾರೆ. ॥ ೨೩ ॥ ಈ ವಿಷಯದಲ್ಲಿ ಮಹಾತ್ಮರು ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತಿರುತ್ತಾರೆ. ಆ ಇತಿಹಾಸವು ಪರಮ ತೇಜಸ್ವೀ ಅವಧೂತ ದತ್ತಾತ್ರೇಯ* ಮತ್ತು ಯದುರಾಜನ ಸಂವಾದರೂಪದಲ್ಲಿದೆ. ॥ ೨೪ ॥ ಒಮ್ಮೆ ಧರ್ಮದ ಮರ್ಮಜ್ಞನಾದ ಯದುರಾಜನು ಓರ್ವ ತ್ರಿಕಾಲದರ್ಶಿ ತರುಣ ಅವಧೂತ ಬ್ರಾಹ್ಮಣನು ನಿರ್ಭಯನಾಗಿ ಸಂಚರಿಸುವುದನ್ನು ನೋಡಿದನು. ಆಗ ಅವನು ಆ ಅವಧೂತನಲ್ಲಿ ಪ್ರಶ್ನಿಸಿದನು – ॥ ೨೫ ॥

**ಯದುರಾಜನು ಕೇಳಿದನು** – ಬ್ರಾಹ್ಮಣ ಶ್ರೇಷ್ಠರೇ! ನೀವಾದರೋ ಯಾವ ಕರ್ಮವನ್ನೂ ಮಾಡುತ್ತಿಲ್ಲ. ಆದರೂ ನಿಮಗೆ ಈ ಅತ್ಯಂತ ನೈಪುಣ್ಯ ಬುದ್ಧಿಯು ಹೇಗೆ ಬಂತು? ಅಂತಹ ಶ್ರೇಷ್ಠ ಬುದ್ಧಿಯನ್ನು ಆಶ್ರಯಿಸಿ ನೀವು ಪರಮವಿದ್ವಾಂಸರಾಗಿದ್ದರೂ ಬಾಲಕನಂತೆ ಪ್ರಪಂಚದಲ್ಲಿ ಅಲೆದಾಡುತ್ತಿರುವಿರಲ್ಲಾ! ॥ ೨೬ ॥ ಪ್ರಾಯಶಃ ಜನರು ಒಂದಲ್ಲ ಒಂದು ಕಾಮನೆಯಿಂದಲೇ ಧರ್ಮ, ಅರ್ಥ, ಕಾಮದಲ್ಲಿ ಹಾಗೂ ತತ್ತ್ವಜ್ಞಾನದ ಇಚ್ಛೆಯಲ್ಲಿ ಪ್ರವೃತ್ತರಾಗಿ ಅದರ ಬದಲು ಆಯುಸ್ಸು, ಕೀರ್ತಿ, ಅಥವಾ ಧನ-ಸಂಪತ್ತು ಸಿಗಬಹುದು ಎಂದು ಯೋಚಿಸುವುದನ್ನು ನೋಡಲಾಗುತ್ತದೆ. ಆದರೆ ನಿಮ್ಮನ್ನು ನೋಡಿದರೆ – ನೀವು ಸಮರ್ಥರಾಗಿದ್ದು ಜ್ಞಾನೀ ಹಾಗೂ ದಕ್ಷರಾಗಿರುವಿರಿ. ಸುಂದರ ಶರೀರವೂ ಇದೆ. ಅಮೃತ ಭಾಷಿಗಳಾಗಿದ್ದೀರಿ. ಆದರೂ ನೀವು ಏನನ್ನೂ ಮಾಡುವುದಿಲ್ಲ, ಬಯಸುವುದಿಲ್ಲ. ಇಂತಹ ವಿದ್ವಾಂಸರಾಗಿದ್ದರೂ ನೀವು ಜಡನಂತೆ, ಉನ್ಮತ್ತನಂತೆ ಅವಧೂತನಂತೆ ಪ್ರಪಂಚದಲ್ಲಿ ಅಲೆದಾಡುತ್ತಿರುವಿರಿ. ॥ ೨೭-೨೮ ॥ ಬೇರೆ ಜನರಾದರೋ ಕಾಮ, ಕ್ರೋಧ, ಲೋಭರೂಪೀ ದಾವಾನಲದಲ್ಲಿ ಬೇಯುತ್ತಿರುವರು. ಆ ಅಗ್ನಿಯಿಂದ ರಕ್ಷಿಸಿಕೊಳ್ಳಲು ಯಾವುದೇ ದಾರಿ ಇಲ್ಲದಿದ್ದರೂ ನೀವಾದರೋ ಪೂರ್ಣವಾಗಿ ಮುಕ್ತರಾಗಿದ್ದೀರಿ. ಗಂಗೆಯ ನೀರಿನಲ್ಲಿ ನಿಂತ ಆನೆಗೆ ದಾವಾನಲದ ಶಾಖ ತಗಲದೆ ಶೀತಲತೆಯನ್ನೇ ಅನುಭವಿಸುತ್ತದೆ. ಹಾಗೆಯೇ ನೀವು ಈ ಪ್ರಪಂಚದ ಯಾವ ತಾಪವೂ ಇಲ್ಲದೆ ಸ್ವಸ್ಥರಾಗಿರುವಿರಲ್ಲ! ॥ ೨೯ ॥ ಬ್ರಾಹ್ಮಣೋತ್ತಮಾ! ನಿಮಗೆ ಈ ಪ್ರಪಂಚದಲ್ಲಿ ಯಾರ ಕುರಿತು ಕಿಂಚಿತ್ತಾದರೂ ಆಸಕ್ತಿಯಿಲ್ಲ. ನೀವು ನಿಮ್ಮ ಶುದ್ಧ ಸ್ವರೂಪದಲ್ಲಿಯೇ ಸದಾ ಸ್ಥಿತರಾಗಿರುವಿರಿ. ನಿಮ್ಮ ಈ ಅನಿರ್ವಚನೀಯ ಆನಂದದ ಕಾರಣವೇನು? ಇದನ್ನು ತಾವು ನನಗೆ ತಿಳಿಸುವ ಕೃಪೆಮಾಡಬೇಕು. ॥ ೩೦ ॥

* ದತ್ತಾತ್ರೇಯನು ಸ್ವಯಂ ಭಗವಂತನ ಅವತಾರವಾಗಿದ್ದಾನೆ. ಅವನು ಜನರಿಗೆ ಪಾಠಹೇಳುವ ಉದ್ದೇಶದಿಂದಲೇ ಈ ಇಪ್ಪತ್ತನಾಲ್ಕು ಗುರುಗಳನ್ನು ಹೆಸರಿಸಿದ್ದಾನೆ. ಉದಾಹರಣೆಯಿಂದ ಉಪದೇಶವನ್ನು ಗ್ರಹಿಸಲು, ತಿಳಿಯಲು ಸುಲಭವಾಗುತ್ತದೆ. ಆದ್ದರಿಂದ ಸಾರವಾದ ಮಾತನ್ನು ಗ್ರಹಿಸಬೇಕು.

ಶ್ರೀಭಗವಾನುವಾಚ

ಯದುನೈವಂ ಮಹಾಭಾಗೋ ಬ್ರಹ್ಮಣ್ಯೇನ ಸುಮೇಧಸಾ ।
ಪೃಷ್ಟಃ ಸಭಾಜಿತಃ ಪ್ರಾಹ ಪ್ರಶ್ರಯಾವನತಂ ದ್ವಿಜಃ
॥ ೩೧ ॥

ಬ್ರಾಹ್ಮಣ ಉವಾಚ

ಸಂತಿ ಮೇ ಗುರವೋ ರಾಜನ್ ಬಹವೋ ಬುದ್ಧ್ಯುಪಾಶ್ರಿತಾಃ ।
ಯತೋ ಬುದ್ಧಿಮುಪಾದಾಯ ಮುಕ್ತೋಽಟಾಮೀಹ ತಾನ್‌ಶೃಣು
॥ ೩೨ ॥

ಪೃಥಿವೀ ವಾಯುರಾಕಾಶಮಾಪೋಽಗ್ನಿಶ್ಚಂದ್ರಮಾ ರವಿಃ ।
ಕಪೋತೋಽಜಗರಃ ಸಿಂಧುಃ ಪತಂಗೋ ಮಧುಕೃದ್ಗಜಃ
॥ ೩೩ ॥

ಮಧುಹಾ ಹರಿಣೋ ಮೀನಃ ಪಿಂಗಲಾ ಕುರರೋಽರ್ಭಕಃ ।
ಕುಮಾರೀ ಶರಕೃತ್ಸರ್ಪ ಊರ್ಣನಾಭಿಃ ಸುಪೇಶಕೃತ್
॥ ೩೪ ॥

ಏತೇ ಮೇ ಗುರವೋ ರಾಜನ್‌ಚತುರ್ವಿಂಶತಿರಾಶ್ರಿತಾಃ ।
ಶಿಕ್ಷಾ ವೃತ್ತಿಭಿರೇತೇಷಾಮನ್ವಶಿಕ್ಷಮಿಹಾತ್ಮನಃ
॥ ೩೫ ॥

ಯತೋ ಯದನುಶಿಕ್ಷಾಮಿ ಯಥಾ ವಾ ನಾಹುಷಾತ್ಮಜ ।
ತತ್ತಥಾ ಪುರುಷವ್ಯಾಘ್ರ ನಿಬೋಧ ಕಥಯಾಮಿ ತೇ
॥ ೩೬ ॥

ಭೂತೈರಾಕ್ರಮ್ಯಮಾಣೋಽಪಿ ಧೀರೋ ದೈವವಶಾನುಗೈಃ ।
ತದ್ವಿದ್ವಾನ್ನ ಚಲೇನ್ಮಾರ್ಗಾದನ್ವಶಿಕ್ಷಂ ಕ್ಷಿತೇರ್ವ್ರತಮ್
॥ ೩೭ ॥

ಶಶ್ವತ್ಪರಾರ್ಥಸರ್ವೇಹಃ ಪರಾರ್ಥೈಕಾಂತ ಸಂಭವಃ ।
ಸಾಧುಃ ಶಿಕ್ಷೇತ ಭೂಭೃತ್ತೋ ನಗಶಿಷ್ಯಃ ಪರಾತ್ಮತಾಮ್
॥ ೩೮ ॥

ಪ್ರಾಣವೃತ್ತ್ಯೈವ ಸಂತುಷ್ಯೇನ್ಮುನಿರ್ನೈವೇಂದ್ರಿಯಪ್ರಿಯೈಃ ।
ಜ್ಞಾನಂ ಯಥಾ ನ ನಶ್ಯೇತ ನಾವಕೀರ್ಯೇತ ವಾಙ್ಮನಃ
॥ ೩೯ ॥

ವಿಷಯೇಷ್ವಾವಿಶನ್ಯೋಗೀ ನಾನಾಧರ್ಮೇಷು ಸರ್ವತಃ ।
ಗುಣದೋಷವ್ಯಪೇತಾತ್ಮಾ ನ ವಿಷಜ್ಜೇತ ವಾಯುವತ್
॥ ೪೦ ॥

**ಶ್ರೀಭಗವಂತನು ಹೇಳುತ್ತಾನೆ** – ಉದ್ಧವನೇ! ಬ್ರಾಹ್ಮಣರನ್ನು ಆದರಿಸುವ ಪರಮ ಬುದ್ಧಿವಂತ ಮಹಾರಾಜಾ ಯದುವು ಬಹಳ ವಿನಮ್ರಭಾವದಿಂದ ನತಮಸ್ತಕನಾಗಿ ಮಹಾಭಾಗ್ಯಶಾಲೀ ಬ್ರಾಹ್ಮಣ ಶ್ರೇಷ್ಠ ಅವಧೂತ ದತ್ತಾತ್ರೇಯರನ್ನು ಹೀಗೆ ಸನ್ಮಾನಿಸಿದನು. ಅವನ ಪ್ರಶ್ನೆಗಳಿಗೆ ಅವಧೂತರು ಈ ಪ್ರಕಾರ ಉತ್ತರಿಸತೊಡಗಿದರು. ॥ ೩೧ ॥

**ಶ್ರೀದತ್ತಾತ್ರೇಯರೂಪೀ ಬ್ರಾಹ್ಮಣರು ಇಂತೆಂದರು** – ರಾಜನೇ! ನಾನು ನನ್ನ ಬುದ್ಧಿಯಿಂದ ಹಲವಾರು ಗುರುಗಳನ್ನು ಆಶ್ರಯಿಸಿದ್ದೇನೆ. ಅವರಿಂದ ಶಿಕ್ಷಣವನ್ನು ಪಡೆದು ನಾನು ಈ ಜಗತ್ತಿನಲ್ಲಿ ಮುಕ್ತಭಾವದಿಂದ ಸಂಚರಿಸುತ್ತಿದ್ದೇನೆ. ಆ ನನ್ನ ಗುರುಗಳ ಹೆಸರುಗಳನ್ನು ಹಾಗೂ ಅವರಿಂದ ಪಡೆದ ಶಿಕ್ಷಣವನ್ನು ಹೇಳುವೆನು ಕೇಳು. ॥ ೩೨ ॥ ಭೂಮಿ, ವಾಯು, ಆಕಾಶ, ಜಲ, ಅಗ್ನಿ, ಚಂದ್ರ, ಸೂರ್ಯ, ಪಾರಿವಾಳ, ಹೆಬ್ಬಾವು, ಸಮುದ್ರ, ಪತಂಗ, ದುಂಬಿ ಅಥವಾ ಜೇನುನೊಣ, ಆನೆ, ಜೇನು ತೆಗೆಯುವವನು, ಜಿಂಕೆ, ಮೀನು, ಪಿಂಗಳಾವೇಶ್ಯೆ, ಕುರರಪಕ್ಷಿ, ಮಗು, ಕುಮಾರೀ, ಬಾಣವನ್ನು ತಯಾರಿಸುವವನು, ಸರ್ಪ, ಜೇಡರಹುಳು, ಭೃಂಗಕೀಟ – ಇವರೇ ನನ್ನ ಇಪ್ಪತ್ತನಾಲ್ಕು ಮಂದಿ ಗುರುಗಳು. ॥೩೩-೩೪॥

ರಾಜನೇ! ನಾನು ಈ ಇಪ್ಪತ್ತನಾಲ್ಕು ಗುರುಗಳಿಂದ ಕಲಿತಿರುವ ವಿಷಯವನ್ನು ನಿನಗೆ ಹೇಳುತ್ತೇನೆ. ಎಲೈ ಪುರುಷಶ್ರೇಷ್ಠ ಯಯಾತಿನಂದನಾ! ನೀನು ಅದನ್ನು ಯಥಾವತ್ತಾಗಿ ಕೇಳು. ॥ ೩೫-೩೬ ॥

ಪೃಥ್ವಿಯ ದೃಷ್ಟಾಂತವನ್ನು ಕೊಡುತ್ತಾ ಹೇಳುತ್ತಾರೆ – ಜ್ಞಾನಿಯು ತನಗೆ ಬೇರೆಯವರು ಎಷ್ಟೇ ಕಷ್ಟಕೊಟ್ಟರೂ, ಅದೆಲ್ಲವೂ ಪ್ರಾರಬ್ಧಾನುಸಾರ ಪ್ರಾಪ್ತವಾದುದೆಂದು ತಿಳಿದು, ತನ್ನ ಸ್ವರೂಪದಿಂದ ಕಿಂಚಿತ್ತಾದರೂ ವಿಚಲಿತನಾಗಬಾರದು. ಇದನ್ನು ನಾನು ಪೃಥ್ವಿಯ ಕ್ಷಮಾಗುಣದಿಂದ ಕಲಿತೆ. ಪೃಥ್ವಿಯ ಸಮಸ್ತ ಕ್ರಿಯೆಗಳು ಪರೋಪಕಾರಕ್ಕಾಗಿಯೇ ಇರುತ್ತವೆ. ಪೃಥ್ವಿಯನ್ನು ಆಶ್ರಯಿಸಿದ ಪರ್ವತಗಳಿಂದ ಹಾಗೂ ವೃಕ್ಷಗಳಿಂದಲೂ ನಾನು ಪರೋಪಕಾರದ ಭಾವನೆಯನ್ನು ಕಲಿತೆನು. ॥ ೩೭-೩೮ ॥

(ವಾಯುವಿನ ಕುರಿತು ಹೇಳುವಾಗ-) ಮುನಿಯು ಪ್ರಾಣವೃತ್ತಿಯಲ್ಲೇ ಸಂತುಷ್ಟನಾಗಿರಬೇಕು. ಅರ್ಥಾತ್ – ಪ್ರಾಣಧಾರಣೆ ಆಗುವಷ್ಟೇ ಆಹಾರವನ್ನು ತೆಗೆದುಕೊಳ್ಳಬೇಕು, ಇಂದ್ರಿಯಗಳ ತೃಪ್ತಿಗಾಗಿ ಅಲ್ಲ, ಅದರಿಂದ ವಾಣಿ ಮತ್ತು ಮನಸ್ಸು ಅತ್ತ-ಇತ್ತ ಅಲೆದಾಡದಿರಲಿ. ತನ್ನ ಜ್ಞಾನವೂ ನಷ್ಟವಾಗದಿರಲಿ. ॥ ೩೯ ॥ ವಾಯುವು ಸರ್ವತ್ರ ಸಂಚರಿಸುತ್ತದೆ, ಆದರೆ ಯಾವುದರಲ್ಲಿಯೂ ಲಿಪ್ತವಾಗುವುದಿಲ್ಲ, ಗಂಧವನ್ನು ಗ್ರಹಿಸುತ್ತದೆ ಹಾಗೂ ಬಿಡುತ್ತದೆ. ಹಾಗೆಯೇ ಯೋಗಿಯು ಎಲ್ಲೆಡೆ ಸಂಚರಿಸುತ್ತಿದ್ದರೂ, ಅನೇಕ ಧರ್ಮಗಳ ವಿಷಯಗಳಿಂದ, ಅವುಗಳ ಗುಣ-ದೋಷಗಳಿಂದ ತನ್ನನ್ನು ಸರ್ವಥಾ ಬೇರೆಯಾಗಿಟ್ಟುಕೊಂಡು, ಅವುಗಳಲ್ಲಿ ಆಸಕ್ತನಾಗಬಾರದು. ॥ ೪೦ ॥

ಪಾರ್ಥಿವೇಷ್ವಿಹ ದೇಹೇಷು ಪ್ರವಿಷ್ಟಸ್ತದ್ಗುಣಾಶ್ರಯಃ ।
ಗುಣೈರ್ನ ಯುಜ್ಯತೇ ಯೋಗೀ ಗಂಧೈರ್ವಾಯುರಿವಾತ್ಮದೃಕ್ ॥ ೪೧ ॥

ಅಂತರ್ಹಿತಶ್ಚ ಸ್ಥಿರಜಂಗಮೇಷು
ಬ್ರಹ್ಮಾತ್ಮಭಾವೇನ ಸಮನ್ವಯೇನ ।
ವ್ಯಾಪ್ತ್ಯಾವ್ಯವಚ್ಛೇದಮಸಂಗಮಾತ್ಮನೋ
ಮುನಿರ್ನಭಸ್ತ್ವಂ ವಿತತಸ್ಯ ಭಾವಯೇತ್ ॥ ೪೨ ॥

ತೇಜೋಽಬನ್ನಮಯೈರ್ಭಾವೈರ್ಮೇಘಾದ್ಯೈರ್ವಾಯುನೇರಿತೈಃ ।
ನ ಸ್ಪೃಶ್ಯತೇ ನಭಸ್ತದ್ವತ್ಕಾಲಸೃಷ್ಟೈರ್ಗುಣೈಃ ಪುಮಾನ್ ॥ ೪೩ ॥

ಸ್ವಚ್ಛಃ ಪ್ರಕೃತಿತಃ ಸ್ನಿಗ್ಧೋಮಾಧುರ್ಯಸ್ತೀರ್ಥಭೂರ್ನೃಣಾಮ್ ।
ಮುನಿಃ ಪುನಾತ್ಯಪಾಂ ಮಿತ್ರಮೀಕ್ಷೋಪಸ್ಪರ್ಶಕೀರ್ತನೈಃ ॥ ೪೪ ॥

ತೇಜಸ್ವೀ ತಪಸಾ ದೀಪ್ತೋ ದುರ್ಧರ್ಷೋದರಭಾಜನಃ ।
ಸರ್ವಭಕ್ಷ್ಯೋಽಪಿ ಯುಕ್ತಾತ್ಮಾ ನಾದತ್ತೇ ಮಲಮಗ್ನಿವತ್ ॥ ೪೫ ॥

ವಾಯುವು ಗಂಧವನ್ನು ಹೊತ್ತುಕೊಂಡು ಹೋಗುತ್ತದೆ, ಆದರೆ ಆದರ ಗುಣ-ದೋಷಗಳಲ್ಲಿ ಅದು ಅಸಂಗವಾಗಿಯೇ ಇರುತ್ತದೆ. ಹಾಗೆಯೇ ಆತ್ಮಜ್ಞಾನಿಯು ಎಲ್ಲೆಡೆ ವಿಚರಿಸುತ್ತಿದ್ದರೂ ಎಲ್ಲಿಯೂ ಗುಣ-ದೋಷಗಳಲ್ಲಿ ಸಿಕ್ಕಿಹಾಕಿಕೊಳ್ಳ ಬಾರದು. ಒಂದೇ ಆತ್ಮವು ಸರ್ವತ್ರ ಪರಿಪೂರ್ಣವಾಗಿದೆ. ಅದೇ ಆತ್ಮವು ಪಾರ್ಥಿವ ಶರೀರದಲ್ಲಿಯೂ ಇದೆ. ಆದರೆ ಆತ್ಮವು ಶರೀರದಲ್ಲಿದ್ದರೂ ನಿರ್ಲಿಪ್ತವಾಗಿರುವಂತೆ ಜ್ಞಾನಿಯೂ ಶರೀರದಲ್ಲಿ ಇದ್ದರೂ ಆದರ ಗುಣ-ದೋಷಗಳೊಂದಿಗೆ ತನ್ನನ್ನು ಒಂದಾಗಿಸ ಬಾರದು. ॥ ೪೧ ॥ (ಈಗ ಆಕಾಶದ ಉದಾಹರಣೆಯನ್ನು ಎರಡು ಶ್ಲೋಕಗಳಲ್ಲಿ ತಿಳಿಸುತ್ತಾರೆ –) ಆಕಾಶವು ಎಲ್ಲ ಕಡೆಗಳಲ್ಲಿ ತುಂಬಿಕೊಂಡು, ಸರ್ವವ್ಯಾಪಕವಾಗಿದೆ. ಹಾಗೆಯೇ ಆ ಬ್ರಹ್ಮವು ಸ್ಥಾವರ ಜಂಗಮ ಎಲ್ಲ ಪ್ರಾಣಿಗಳಲ್ಲಿ ಸಮರೂಪದಿಂದ ಮತ್ತು ಅನ್ವಯರೂಪದಿಂದ ಸರ್ವವ್ಯಾಪಕವಾಗಿದೆ. ಅರ್ಥಾತ್ – ಹೊರಗೆ ಒಳಗೆ ಎಲ್ಲೆಡೆ ಪರಿಪೂರ್ಣವಾಗಿದೆ. ಆ ಬ್ರಹ್ಮವು ಅಖಂಡರೂಪದಿಂದಿದ್ದು ಅಸಂಗವಾಗಿದೆ. ಇಂತಹ ಆತ್ಮನ ಸರ್ವವ್ಯಾಪಕತೆಯ ಅನುಭವವನ್ನು ಮುನಿಯು ಆಕಾಶದ ದೃಷ್ಟಾಂತದಿಂದ ಕಲಿಯಬೇಕು. ॥ ೪೨ ॥ ವಾಯುವಿನಿಂದ ಪ್ರೇರಿತವಾದ ಮೋಡಗಳ ಸಮೂಹ ಆಕಾಶದಲ್ಲೇ ಇರುತ್ತದೆ, ಆದರೆ ಆಕಾಶವು ಅವುಗಳಿಂದ ನಿರ್ಲಿಪ್ತವಾಗಿರುತ್ತದೆ. ಹಾಗೆಯೇ ಕಾಲನ ಪ್ರೇರಣೆಯಿಂದ ಸತ್ತ್ವಾದಿ ಮೂರು ಗುಣಗಳ ಕಾರ್ಯರೂಪೀ ಈ ಅಗ್ನಿ, ಜಲ, ಪೃಥ್ವಿ (ಅನ್ನ) ರೂಪದಲ್ಲಿ ನಿರ್ಮಿತ ಶರೀರ ಇಂದ್ರಿಯಾದಿಗಳಿಂದ ಪುರುಷನಿಗೆ ಯಾವ ಸಂಬಂಧವೂ ಇಲ್ಲ. ॥ ೪೩ ॥

(ಈಗ ಜಲದ ಉದಾಹರಣೆಯನ್ನು ಕೊಡುತ್ತಾ ಹೇಳುತ್ತಾರೆ –) ನೀರು ಸ್ವಭಾವತಃ ಸ್ವಚ್ಛವಾಗಿದೆ, ಪ್ರಿಯವಾಗಿದೆ, ತೀರ್ಥವಾಗಿರುವುದರಿಂದ ಮನುಷ್ಯರನ್ನು ಪವಿತ್ರವಾಗಿಸುತ್ತದೆ. ಹಾಗೆಯೇ ಮುನಿಯ ಸ್ವಭಾವವು ಕೂಡ ಸ್ವಚ್ಛವಾಗಿರುತ್ತದೆ. ಅವನು ಎಲ್ಲರಿಗೆ ಪ್ರಿಯನಾಗಿರುತ್ತಾನೆ. ತನ್ನ ದೃಷ್ಟಿಯ ಮೂಲಕ ಹಾಗೂ ಮಧುರವಾಣಿಯಿಂದ ಜನರನ್ನು ಪವಿತ್ರರಾಗಿಸುತ್ತಾನೆ. ಅದಕ್ಕಾಗಿ ಮುನಿಯು ಶುದ್ಧ ಸ್ನಿಗ್ಧ ಮಧುರ ಸ್ವಭಾವವನ್ನು ಹೊಂದಿರುತ್ತಾನೆ. ॥ ೪೪ ॥

ಅಗ್ನಿಯು ತೇಜಸ್ವಿಯೂ, ಜ್ಯೋತಿರ್ಮಯನೂ ಆಗಿದ್ದಾನೆ. ಅವನು ದುರಾಧರ್ಷನು ಅವನನ್ನು ಯಾರೂ ಎದುರಿಸಲಾರರು ಸಂಗ್ರಹ ಪರಿಗ್ರಹಕ್ಕಾಗಿ ಅವನು ಪಾತ್ರೆಯಿಲ್ಲ ಉದರವೇ ಅವನ ಪಾತ್ರೆಯು. ಸರ್ವಭಕ್ಷಕನಾಗಿದ್ದರೂ ಆಯಾ ವಸ್ತುಗಳ ಗುಣ ದೋಷಗಳಿಂದ ಲಿಪ್ತನಾಗುವುದಿಲ್ಲ ಹಾಗೆಯೇ ಮುನಿಯು ತಪಸ್ವಿ, ತೇಜಸ್ವಿ ಹಾಗೂ ಸರ್ವ ಭಾಷಿಯಾಗಿದ್ದರೂ ಆಯಾ ವಸ್ತುಗಳ ಗುಣದೋಷಗಳಿಂದ ಲಿಪ್ತನಾಗುವುದಿಲ್ಲ ಸಂಗ್ರಹ, ಪರಿಗ್ರಹಗಳಿಂದ ದೂರವಿರಬೇಕು. ॥ ೪೫ ॥ ಅಗ್ನಿಯು ಕೆಲವೆಡೆ ಪ್ರಕಟವಾಗಿದ್ದು, ಕೆಲವೆಡೆ ಅಪ್ರಕಟವಾಗಿರುತ್ತದೆ ಹಾಗೂ ಆದರ ಉಪಾಸನೆಯೂ ಮಾಡಲಾಗುತ್ತದೆ. ಹಾಗೆಯೇ ಸಾಧುವು ಕೆಲವೆಡೆ ತನ್ನನ್ನು ಅಡಗಿಸಿಕೊಂಡು, ಕೆಲವೆಡೆ ಪ್ರಕಟಪಡಿಸುವನು. ಶ್ರೇಯೋಕಾಮಿಯಾದ ಪುರುಷರಿಗೆ ಅವನು ಉಪಾಸ್ಯನೂ ಆಗುತ್ತಾನೆ. ಅಗ್ನಿಯಂತೆ ಅವರು ಸರ್ವಭಕ್ಷಿಯಾಗಿದ್ದಾರೆ. ಇಂತಹ

ಕ್ವಚಿಚ್ಛನ್ನಃ ಕ್ವಚಿತ್ಸ್ಪಷ್ಟ ಉಪಾಸ್ಯಃ ಶ್ರೇಯ ಇಚ್ಛತಾಮ್ ।
ಭುಂಕ್ತೇ ಸರ್ವತ್ರ ದಾತೃಣಾಂ ದಹನ್ಪ್ರಾಗುತ್ತರಾಶುಭಮ್
॥ ೪೭ ॥

ಸ್ವಮಾಯಯಾ ಸೃಷ್ಟಮಿದಂ ಸದಸಲ್ಲಕ್ಷಣಂ ವಿಭುಃ ।
ಪ್ರವಿಷ್ಟ ಈಯತೇ ತತ್ತತ್ಸ್ವರೂಪೋಽಗ್ನಿರಿವೈಧಸಿ
॥ ೪೭ ॥

ವಿಸರ್ಗಾದ್ಯಾಃ ಶ್ಮಶಾನಾಂತಾ ಭಾವಾ ದೇಹಸ್ಯ ನಾತ್ಮನಃ ।
ಕಲಾನಾಮಿವ ಚಂದ್ರಸ್ಯ ಕಾಲೇನಾವ್ಯಕ್ತವರ್ತ್ಮನಾ
॥ ೪೮ ॥

ಕಾಲೇನ ಹ್ಯೋಘವೇಗೇನ ಭೂತಾನಾಂ ಪ್ರಭವಾಪ್ಯಯೌ ।
ನಿತ್ಯಾವಪಿ ನ ದೃಶ್ಯೇತೇ ಆತ್ಮನೋಽಗ್ನೇರ್ಯಥಾರ್ಚಿಷಾಮ್
॥ ೪೯ ॥

ಗುಣೈರ್ಗುಣಾನುಪಾದತ್ತೇ ಯಥಾಕಾಲಂ ವಿಮುಂಚತಿ ।
ನ ತೇಷು ಯುಜ್ಯತೇ ಯೋಗೀ ಗೋಭಿರ್ಗಾ ಇವ ಗೋಪತಿಃ
॥ ೫೦ ॥

ಬುಧ್ಯತೇ ಸ್ವೇನ ಭೇದೇನ ವ್ಯಕ್ತಿಸ್ಥ ಇವ ತದ್ಗತಃ ।
ಲಕ್ಷ್ಯತೇ ಸ್ಥೂಲಮತಿಭಿರಾತ್ಮಾ ಚಾವಸ್ಥಿತೋಽರ್ಕವತ್
॥ ೫೧ ॥

ನಾತಿಸ್ನೇಹಃ ಪ್ರಸಂಗೋ ವಾ ಕರ್ತವ್ಯಃ ಕ್ವಾಪಿ ಕೇನಚಿತ್ ।
ಕುರ್ವನ್ವಿಂದೇತ ಸಂತಾಪಂ ಕಪೋತ ಇವ ದೀನಧೀಃ
॥ ೫೨ ॥

ಕಪೋತಃ ಕಶ್ಚನಾರಣ್ಯೇ ಕೃತನೀಡೋ ವನಸ್ಪತೌ ।
ಕಪೋತ್ಯಾ ಭಾರ್ಯಯಾ ಸಾರ್ಧಮುವಾಸ ಕತಿಚಿತ್ಸಮಾಃ
॥ ೫೩ ॥

ಮಹಾಪುರುಷರಾದ ಸಾಧುಗಳು ಅನ್ನವೇ ಮುಂತಾದುವನ್ನು ಕೊಡುವವರ ಭೂತ, ಭವಿಷ್ಯದ ಎಲ್ಲ ಅಮಂಗಳಗಳನ್ನು ನಾಶ ಮಾಡಿಬಿಡುತ್ತಾರೆ. ಅವರನ್ನು ಪವಿತ್ರರಾಗಿಸುತ್ತಾರೆ. (ಇಂತಹ ಪವಿತ್ರಾತ್ಮರಾದ ಮಹಾತ್ಮಾ ಸಾಧುಗಳಾದರೋ ಬೇರೆಯವರನ್ನು ಪವಿತ್ರರಾಗಿಸ ಲೆಂದೇ ಭಿಕ್ಷೆ ಸ್ವೀಕರಿಸುತ್ತಾರೆ.) ॥ ೪೬ ॥ ಅಗ್ನಿಯು ಎಲ್ಲ ಇಂಧನ (ಕಟ್ಟಿಗೆ)ಗಳಲ್ಲಿ ವ್ಯಾಪಕನಾಗಿರುತ್ತಾನೆ. ಸೌದೆಯ ಆಕಾರದಂತೆ ಅಗ್ನಿಯು ಕಂಡುಬರುತ್ತಾನೆ. ಹಾಗೆಯೇ ತನ್ನ ಮಾಯೆಯಿಂದ ಉಂಟಾದ ಸತ್-ಅಸತ್ (ವ್ಯಕ್ತ-ಅವ್ಯಕ್ತ) ಎಲ್ಲ ಚರಾಚರ ಪ್ರಾಣಿಗಳಲ್ಲಿ ಪ್ರವಿಷ್ಟನಾದ ಒಂದೇ ಆತ್ಮವು ಆಯಾಯಾ ರೂಪದಲ್ಲಿ ಕಂಡುಬರುತ್ತಾನೆ. ॥ ೪೭ ॥

(ಈಗ ಚಂದ್ರನ ದೃಷ್ಟಾಂತವನ್ನು ಎರಡು ಶ್ಲೋಕಗಳಲ್ಲಿ ಹೇಳುತ್ತಾರೆ –) ಕಾಲದ ವೇಗದ ಪ್ರಭಾವದಿಂದ ಚಂದ್ರನ ಕಲೆಗಳು ವೃದ್ಧಿ-ಕ್ಷಯವಾಗುತ್ತಾ ಇರುತ್ತವೆ. ಇದೇ ರೀತಿ ದೇಹವು ಉತ್ಪತ್ತಿಯಿಂದ ಹಿಡಿದು ಮೃತ್ಯುವಿನವರೆಗೆ ಆಗುವ ಅವಸ್ಥೆಗಳು ಗಮನಕ್ಕೆ ಬಾರದಿರುವ ಕಾಲದ ಪ್ರಭಾವದಿಂದ ಬದಲಾಗುತ್ತಾ ಇರುತ್ತವೆ. ಆತ್ಮನಿಗೆ ಅವುಗಳ ಯಾವ ಸಂಬಂಧವೂ ಇರುವುದಿಲ್ಲ. ಅಗ್ನಿಯ ಜ್ವಾಲೆಗಳು ಅಗ್ನಿಯಿಂದ ಹೊರಟು ಕಣ್ಮರೆಯಾಗುತ್ತವೆ. ಆದರೆ ಕಾಣುವುದಿಲ್ಲ; ಹಾಗೆಯೇ ಕಾಲದ ಪ್ರಚಂಡವೇಗದಿಂದ ಎಲ್ಲ ಪ್ರಾಣಿಗಳ ಉತ್ಪತ್ತಿ ಮತ್ತು ಮೃತ್ಯು ಸದಾಕಾಲ ಆಗುತ್ತಾ ಇರುತ್ತದೆ. ಆದರೆ ಅದು ಕಾಣುವುದಿಲ್ಲ. ॥ ೪೮-೪೯ ॥

(ಈಗ ಸೂರ್ಯನ ದೃಷ್ಟಾಂತಕ್ಕಾಗಿ ಎರಡು ಶ್ಲೋಕಗಳನ್ನು ಹೇಳುತ್ತಾರೆ –) 'ಗೋಪತೀ' ಸೂರ್ಯನು ತನ್ನ ಕಿರಣಗಳಿಂದ ಸಮಯಕ್ಕೆ ಸರಿಯಾಗಿ ನೀರನ್ನು ಗ್ರಹಿಸಿ, ಅದನ್ನು ಮಳೆಯಾಗಿ ಸುರಿಸುತ್ತಾನೆ. ಆದರೆ ಸೂರ್ಯನು ಎಲ್ಲಿಯೂ ಆಸಕ್ತನಾಗುವುದಿಲ್ಲ. ಹಾಗೆಯೇ ಯೋಗಿಯು ಗ್ರಹಿಸುವಾಗ ಮತ್ತು ತ್ಯಜಿಸುವಾಗ ಎಲ್ಲಿಯೂ ಆಸಕ್ತನಾಗಿರಬಾರದು. ॥ ೫೦ ॥ ಹಲವಾರು ಪಾತ್ರೆಗಳಲ್ಲಿ ನೀರನ್ನು ತುಂಬಿಟ್ಟು ನೋಡಿದರೆ, ಆ ಪಾತ್ರೆಗಳಲ್ಲಿ ಪ್ರತಿಫಲಿತನಾದ ಸೂರ್ಯನು ಅನೇಕನಾಗಿರುವಂತೆ ಕಾಣುತ್ತದೆ. ಆದರೆ ಇರುವ ಸೂರ್ಯನು ಒಬ್ಬನೇ. ಹಾಗೆಯೇ ಆತ್ಮವೂ ಒಂದೇ ಆಗಿದೆ. ಆದರೆ ಸ್ಥೂಲಬುದ್ಧಿಯುಳ್ಳವರಿಗೆ ನಾನಾತ್ವದ ಭಾವನೆಯ ಕಾರಣ ಒಂದೇ ಆತ್ಮದ ಸತ್ತೆಯ ಬೋಧವಾಗುವುದಿಲ್ಲ. ಆದ್ದರಿಂದ ಸೂರ್ಯನ ದೃಷ್ಟಾಂತದಿಂದ ಆತ್ಮನ ಅಖಂಡತೆಯನ್ನು ಅರಿತುಕೊಳ್ಳಬೇಕು. ॥ ೫೧ ॥

(ಈಗ ಪಾರಿವಾಳದ ಉದಾಹರಣೆಯನ್ನು ಕೊಡುತ್ತಾರೆ –) ರಾಜನೇ! ಎಲ್ಲಿಯೂ ಯಾರೊಡನೆಯೂ ಅತಿ ಸ್ನೇಹ ಅಥವಾ ಆಸಕ್ತಿ ಇಡಬಾರದು. ಇಲ್ಲದಿದ್ದರೆ ಅವನು ದೀನನಾಗಿ ಪಾರಿವಾಳದಂತೆ ಅತ್ಯಂತ ಕ್ಲೇಶವನ್ನು ಅನುಭವಿಸಬೇಕಾಗುವುದು. ॥ ೫೨ ॥ ರಾಜನೇ! ಒಂದಾನೊಂದು ಕಾಡಿನಲ್ಲಿ ಒಂದು ಪಾರಿವಾಳವು ವಾಸಿಸುತ್ತಿತ್ತು. ಅದು ಒಂದು ಮರದ ಮೇಲೆ ಗೂಡುಕಟ್ಟಿಕೊಂಡಿತ್ತು. ಅದು ತನ್ನ ಹೆಣ್ಣು ಪಾರಿವಾಳದೊಂದಿಗೆ ಅನೇಕ ವರ್ಷಗಳವರೆಗೆ ಅದೇ ಗೂಡಿನಲ್ಲಿ ವಾಸಿಸುತ್ತಿತ್ತು. ಆ ಪಾರಿವಾಳ ದಂಪತಿಗಳ ಹೃದಯದಲ್ಲಿ ನಿರಂತರ ಒಬ್ಬರ ಕುರಿತು ಮತ್ತೊಬ್ಬರ

ಕಪೋತೌ ಸ್ನೇಹಗುಣಿತಹೃದಯೌ ಗೃಹಧರ್ಮಿಣೌ ।
ದೃಷ್ಟಿಂ ದೃಷ್ಟ್ಯಾಂಗಮಂಗೇನ ಬುದ್ಧಿಂ ಬುದ್ಧ್ಯಾ ಬಬಂಧತುಃ
॥ ೫೪ ॥

ಶಯ್ಯಾಸನಾಟನಸ್ಥಾನವಾರ್ತಾಕ್ರೀಡಾಶನಾದಿಕಮ್ ।
ಮಿಥುನೀಭೂಯ ವಿಸ್ರಬ್ಧೌ ಚೇರತುರ್ವನರಾಜಿಷು
॥ ೫೫ ॥

ಯಂ ಯಂ ವಾಂಛತಿ ಸಾ ರಾಜನ್ ತರ್ಪಯಂತ್ಯನುಕಂಪಿತಾ ।
ತಂ ತಂ ಸಮನಯತ್ಕಾಮಂ ಕೃಚ್ಛ್ರೇಣಾಪ್ಯಜಿತೇಂದ್ರಿಯಃ
॥ ೫೬ ॥

ಕಪೋತೀ ಪ್ರಥಮಂ ಗರ್ಭಂ ಗೃಹ್ಣತೀ ಕಾಲ ಆಗತೇ ।
ಅಂಡಾನಿ ಸುಷುವೇ ನೀಡೇ ಸ್ವಪತ್ಯುಃ ಸನ್ನಿಧೌ ಸತೀ
॥ ೫೭ ॥

ತೇಷು ಕಾಲೇ ವ್ಯಜಾಯಂತ ರಚಿತಾವಯವಾ ಹರೇಃ ।
ಶಕ್ತಿಭಿರ್ದುರ್ವಿಭಾವ್ಯಾಭಿಃ ಕೋಮಲಾಂಗತನೂರುಹಾಃ
॥ ೫೮ ॥

ಪ್ರಜಾಃ ಪುಪುಷತುಃ ಪ್ರೀತೌ ದಂಪತೀ ಪುತ್ರವತ್ಸಲೌ ।
ಶೃಣ್ವಂತೌ ಕೂಜಿತಂ ತಾಸಾಂ ನಿರ್ವೃತೌ ಕಲಭಾಷಿತೈಃ
॥ ೫೯ ॥

ತಾಸಾಂ ಪತತ್ರೈಃ ಸುಸ್ಪರ್ಶೈಃ ಕೂಜಿತೈರ್ಮುಗ್ಧಚೇಷ್ಟಿತೈಃ ।
ಪ್ರತ್ಯುದ್ಗಮೈರದೀನಾನಾಂ ಪಿತರೌ ಮುದಮಾಪತುಃ
॥ ೬೦ ॥

ಸ್ನೇಹಾನುಬದ್ಧಹೃದಯಾವನ್ಯೋನ್ಯಂ ವಿಷ್ಣುಮಾಯಯಾ ।
ವಿಮೋಹಿತೌ ದೀನಧಿಯೌ ಶಿಶೂನ್ ಪುಪುಷತುಃ ಪ್ರಜಾಃ
॥ ೬೧ ॥

ಏಕದಾ ಜಗ್ಮತುಸ್ತಾಸಾಮನ್ನಾರ್ಥಂ ತೌ ಕುಟುಂಬಿನೌ ।
ಪರಿತಃ ಕಾನನೇ ತಸ್ಮಿನ್ನರ್ಥಿನೌ ಚೇರತುಶ್ಚಿರಮ್
॥ ೬೨ ॥

ದೃಷ್ಟ್ವಾ ತಾನ್ ಲುಬ್ಧಕಃ ಕಶ್ಚಿದ್ಯದೃಚ್ಛಾತೋ ವನೇಚರಃ ।
ಜಗೃಹೇ ಜಾಲಮಾತತ್ಯ ಚರತಃ ಸ್ವಾಲಯಾಂತಿಕೇ
॥ ೬೩ ॥

ಪ್ರೇಮ ಬೆಳೆಯುತ್ತಲೇ ಇತ್ತು. ಅವು ಪರಸ್ಪರ ದೃಷ್ಟಿಯಿಂದ ದೃಷ್ಟಿ, ಅಂಗದಿಂದ ಅಂಗ, ಬುದ್ಧಿಯಿಂದ ಬುದ್ಧಿ ಹೀಗೆ ಬಂಧಿತರಾಗಿ ಗೃಹಸ್ಥ ಧರ್ಮದಲ್ಲಿ ಆಸಕ್ತವಾಗಿದ್ದವು. ॥ ೫೩-೫೪ ॥

ಅವು ನಿಃಶಂಕವಾಗಿ ಅಲ್ಲಿಯ ವೃಕ್ಷ ಲತೆಗಳಲ್ಲಿ ಒಟ್ಟಿಗೆ ಮಲಗುವುದು, ಕುಳಿತುಕೊಳ್ಳುವುದು, ಅಡ್ಡಾಡುವುದು, ಮಾತು ಕತೆಯಾಡುವುದು, ಆಡುವುದು, ತಿನ್ನುಣ್ಣುವುದು, ವಾಸಿಸುವು ದಷ್ಟು ಒಬ್ಬರಿಗೆ ಮತ್ತೊಬ್ಬರಮೇಲೆ ವಿಶ್ವಾಸ ಉಂಟಾಗಿತ್ತು.॥ ೫೫ ॥ ರಾಜನೇ ! ಆ ಪಾರಿವಾಳವು ಹೆಣ್ಣು ಪಾರಿವಾಳವು ಏನನ್ನೂ ಬಯಸಿದರೂ ಭಾರೀ ಕಷ್ಟಪಟ್ಟು ಅದರ ಕಾಮನೆ ಪೂರ್ಣಮಾಡು ವಷ್ಟು ಅದಕ್ಕೆ ಪ್ರೇಮವಿತ್ತು. ಆ ಹೆಣ್ಣು ಪಾರಿವಾಳವು ಸುರ ತಾಲಾಪದಿಂದ ಪಾರಿವಾಳವನ್ನು ಸಂತೋಷಪಡಿಸುತ್ತಿತ್ತು.॥ ೫೬ ॥ ಸಮಯ ಒದಗಿದಾಗ ಹೆಣ್ಣು ಪಾರಿವಾಳವು ಗರ್ಭವತಿಯಾಗಿ, ಅದು ತನ್ನ ಪತಿಯೊಂದಿಗೆ ಅದೇ ಗೂಡಿನಲ್ಲಿ ಇದ್ದು ಮೊಟ್ಟೆಗಳನ್ನಿಟ್ಟಿತು. ಭಗವಂತನ ಅಚಿಂತ್ಯ ಶಕ್ತಿಯಿಂದ ಸಮಯಕ್ಕೆ ಸರಿಯಾಗಿ ಆ ಮೊಟ್ಟೆಗಳು ಒಡೆದು ಅದರಿಂದ ಕೈಕಾಲುಗಳಿದ್ದ ಮರಿಗಳು ಹೊರಟವು. ಅವುಗಳ ಪ್ರತಿಯೊಂದು ಅಂಗವು ಮತ್ತು ರೆಕ್ಕೆಗಳು ಅತ್ಯಂತ ಕೋಮಲವಾಗಿದ್ದವು. ॥ ೫೭-೫೮ ॥ ಈ ಪಾರಿವಾಳ ದಂಪತಿಗಳ ಕಣ್ಣು ತಮ್ಮ ಮರಿಗಳ ಮೇಲೆಯೇ ನೆಟ್ಟಿತ್ತು. ಅವು ತುಂಬಾ ಪ್ರೇಮ, ಆನಂದದಿಂದ ತನ್ನ ಮರಿಗಳ ಪಾಲನೆ-ಪೋಷಣೆ ಮಾಡುತ್ತಾ, ಅವುಗಳ ಸಿಹಿಯಾದ ಮಾತು, ಅವುಗಳ ಗುಟರ್-ಗುಟರ್ ಕೇಳಿ ಆನಂದಮಗ್ನರಾಗು ತ್ತಿದ್ದವು. ॥ ೫೯ ॥ ಈ ಪ್ರಕಾರ ಆನಂದದಲ್ಲಿ ಮುಳುಗಿ ಮರಿಗಳ ಸುಕೋಮಲ ರೆಕ್ಕೆಗಳನ್ನು ಮುಟ್ಟುತ್ತಾ, ಅವುಗಳ ಕಲರವ ಮತ್ತು ಮುಗ್ಧ ಚೇಷ್ಟೆಗಳನ್ನು ನೋಡ-ನೋಡುತ್ತಾ ಅವುಗಳಿಗೆ ಭಾರೀ ಸಂತೋಷವಾಗುತ್ತಿತ್ತು. ಅವು ನೆಗೆಯುತ್ತಾ-ನೆಗೆಯುತ್ತಾ ತಮ್ಮ ತಂದೆ-ತಾಯಿಗಳ ಬಳಿಗೆ ಬಂದಾಗ ಕಪೋತ-ಕಪೋತಿಯು ಸಂತೋಷಭರಿತರಾಗುತ್ತಿದ್ದವು. ॥ ೬೦ ॥ ರಾಜನೇ ! ಹೀಗೆ ಆ ಕಪೋತ ದಂಪತಿಯು ಭಗವಂತನ ಮಾಯೆಯಿಂದ ಮೋಹಿತ ರಾಗಿದ್ದವು. ಅವುಗಳ ಹೃದಯವು ಒಬ್ಬರು ಮತ್ತೊಬ್ಬರ ಸ್ನೇಹ ಬಂಧನದಲ್ಲಿ ಬಂಧಿತವಾಗಿತ್ತು. ಆ ಬಡಪಾಯಿ ಕಪೋತ ದಂಪತಿಗಳು ತಮ್ಮ ಎಳೆಯ ಮರಿಗಳ ಪಾಲನೆ-ಪೋಷಣೆಯಲ್ಲಿ ಜಗತ್ತು , ಲೋಕ-ಪರಲೋಕದ ನೆನಪು ಕೂಡ ಇರದಷ್ಟು ವ್ಯಗ್ರವಾಗಿದ್ದವು. ॥ ೬೧ ॥ ಒಂದು ದಿನ ಇಬ್ಬರೂ ಗಂಡು-ಹೆಣ್ಣು ತಮ್ಮ ಮರಿಗಳಿಗೆ ಆಹಾರವನ್ನು ತರಲು ಕಾಡಿಗೆ ಹೋಗಿದ್ದವು. ಏಕೆಂದರೆ ಈಗ ಅವರ ಕುಟುಂಬ ತುಂಬಾ ಬೆಳೆದುಹೋಗಿತ್ತು. ಅವು ಆಹಾರಕ್ಕಾಗಿ ಹೆಚ್ಚು ಹೊತ್ತು ಕಾಡಿನಲ್ಲಿ ಅಲೆಯುತ್ತಾ ಇದ್ದವು. ॥ ೬೨ ॥ ಇತ್ತ ಓರ್ವ ಬೇಡನು ತಿರುಗಾಡುತ್ತಾ ಸಂಯೋಗವಶದಿಂದ ಅವುಗಳ ಗೂಡಿನ ಕಡೆಗೆ ಬಂದು ತಲುಪಿದನು. ಅವನು ನೋಡಿದನು ಗೂಡಿನ ಸುತ್ತಲೂ ಪಾರಿವಾಳದ ಮರಿಗಳು ನೆಗೆಯುತ್ತಿದ್ದವು. ಅವನು ಬಲೆಬೀಸಿ ಅವನ್ನು ಹಿಡಿದುಕೊಂಡನು. ॥ ೬೩ ॥ ಕಪೋತ-ಕಪೋತಿಗಳು

ಕಪೋತಶ್ಚ ಕಪೋತೀ ಚ ಪ್ರಜಾಪೋಷೇ ಸದೋತ್ಸುಕೌ ।
ಗತೌ ಪೋಷಣಮಾದಾಯ ಸ್ವನೀಡಮುಪಜಗ್ಮತುಃ
॥ ೧೪ ॥

ಕಪೋತೀ ಸ್ವಾತ್ಮಜಾನ್ವೀಕ್ಷ್ಯ ಬಾಲಕಾನ್ ಜಾಲಸಂವೃತಾನ್ ।
ತಾನಭ್ಯಧಾವತ್ ಕ್ರೋಶಂತೀ ಕ್ರೋಶತೋ ಭೃಶದುಃಖಿತಾ
॥ ೧೫ ॥

ಸಾಸಕೃತ್ಸ್ನೇಹಗುಣಿತಾ ದೀನಚಿತ್ತಾಜಮಾಯಯಾ ।
ಸ್ವಯಂ ಚಾಬಧ್ಯತ ಶಿಚಾ ಬದ್ಧಾನ್ಪಶ್ಯಂತ್ಯಪಸ್ಮೃತಿಃ
॥ ೧೬ ॥

ಕಪೋತಶ್ಚಾತ್ಮಜಾನ್ಬದ್ಧಾನಾತ್ಮನೋಽಪ್ಯಧಿಕಾನ್ಪ್ರಿಯಾನ್ ।
ಭಾರ್ಯಾಂ ಚಾತ್ಮಸಮಾಂ ದೀನೋ ವಿಲಲಾಪಾತಿದುಃಖಿತಃ
॥ ೧೭ ॥

ಅಹೋ ಮೇ ಪಶ್ಯತಾಪಾಯಮಲ್ಪಪುಣ್ಯಸ್ಯ ದುರ್ಮತೇಃ ।
ಅತೃಪ್ತಸ್ಯಾಕೃತಾರ್ಥಸ್ಯ ಗೃಹಸ್ತ್ರೈವರ್ಗಿಕೋ ಹತಃ
॥ ೧೮ ॥

ಅನುರೂಪಾನುಕೂಲಾ ಚ ಯಸ್ಯ ಮೇ ಪತಿದೇವತಾ ।
ಶೂನ್ಯೇ ಗೃಹೇ ಮಾಂ ಸಂತ್ಯಜ್ಯ ಪುತ್ರೈಃ ಸ್ವರ್ಯಾತಿ ಸಾಧುಭಿಃ
॥ ೧೯ ॥

ಸೋಽಹಂ ಶೂನ್ಯೇ ಗೃಹೇ ದೀನೋ ಮೃತದಾರೋ ಮೃತಪ್ರಜಃ ।
ಜಿಜೀವಿಷೇ ಕಿಮರ್ಥಂ ವಾ ವಿಧುರೋ ದುಃಖಜೀವಿತಃ
॥ ೨೦ ॥

ತಾಂಸ್ತಥೈವಾವೃತಾನ್ ಶಿಗ್ಭಿರ್ಮೃತ್ಯುಗ್ರಸ್ತಾನ್ವಿಚೇಷ್ಟತಃ ।
ಸ್ವಯಂ ಚ ಕೃಪಣಃ ಶಿಕ್ಷು ಪಶ್ಯನ್ನಪ್ಯಬುಧೋಽಪತತ್
॥ ೨೧ ॥

ತಂ ಲಬ್ಧ್ವಾ ಲುಬ್ಧಕಃ ಕ್ರೂರಃ ಕಪೋತಂ ಗೃಹಮೇಧಿನಮ್ ।
ಕಪೋತಕಾನ್ ಕಪೋತೀಂ ಚ ಸಿದ್ಧಾರ್ಥಃ ಪ್ರಯಯೌ ಗೃಹಮ್
॥ ೨೨ ॥

ಮರಿಗಳಿಗೆ ಉಣಿಸಲು ಯಾವಾಗಲೂ ಉತ್ಸುಕರಾಗಿರುತ್ತಿದ್ದರು. ಈಗ ಅವುಗಳು ಆಹಾರ ಎತ್ತಿಕೊಂಡು ಗೂಡಿನ ಬಳಿಗೆ ಬಂದವು. ಕಪೋತಿ ನೋಡುತ್ತಾಳೆ– ಅವಳ ಹೃದಯದ ಹೋಳಾದ ಮುದ್ದಾದ ಮರಿಗಳು ಬಲೆಯಲ್ಲಿ ಸಿಕ್ಕಿಹಾಕಿಕೊಂಡಿವೆ. ದುಃಖದಿಂದ ಚೀ-ಚೀ ಮಾಡುತ್ತಿವೆ. ಅವುಗಳನ್ನು ಇಂತಹ ಸ್ಥಿತಿಯಲ್ಲಿ ನೋಡಿದ ಕಪೋತಿಯ ದುಃಖಕ್ಕೆ ಸೀಮೆಯೇ ಇರಲಿಲ್ಲ, ಅವಳು ಅಳುತ್ತಾ-ಬೊಬ್ಬೆಯಿಡುತ್ತಾ ಮರಿಗಳ ಬಳಿಗೆ ಹೋದಳು. ॥ ೧೪-೧೫ ॥

ಭಗವಂತನ ಮಾಯೆಯಿಂದ ಅವರ ಚಿತ್ತವು ಅತ್ಯಂತ ದೀನ-ದುಃಖಿತವಾಗಿತ್ತು. ಅದರ ಸ್ಮೃತಿ ಲುಪ್ತವಾಗಿತ್ತು. ಸ್ನೇಹಪಾಶದಿಂದ ಬಂಧಿತಳಾದ ಕಾರಣ ಹಾಗೂ ತನ್ನ ಮರಿಗಳು ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವುದನ್ನು ನೋಡಿ ಸ್ವತಃ ತಾನೂ ಹೋಗಿ ಬಲೆಯಲ್ಲಿ ಸಿಕ್ಕಿಕೊಂಡಳು. ॥ ೧೬ ॥ ಗಂಡು ಪಾರಿವಾಳ (ಕಪೋತ)ವು ತನ್ನ ಪ್ರಾಣಕ್ಕಿಂತ ಪ್ರಿಯರಾದ ಮರಿಗಳು ಬಲೆಯಲ್ಲಿ ಸಿಕ್ಕಿಕೊಂಡಿರುವವು ಹಾಗೂ ತನ್ನ ಪ್ರಾಣಪ್ರಿಯ ಪತ್ನಿಯೂ ಅದೇ ಸ್ಥಿತಿಯಲ್ಲಿರುವುದನ್ನು ನೋಡಿದಾಗ ಅದು ಅತ್ಯಂತ ದುಃಖಿತವಾಗಿ ವಿಲಪಿಸತೊಡಗಿತು. ನಿಜವಾಗಿಯೂ ಆಗ ಅದರ ಸ್ಥಿತಿ ಅತ್ಯಂತ ದಯನೀಯವಾಗಿತ್ತು. ॥ ೧೭॥ ಅದು ಯೋಚಿಸಿತು – "ನಾನು ನಿರ್ಭಾಗ್ಯನಾಗಿದ್ದೇನೆ, ದುರ್ಮತಿಯಾಗಿದ್ದೇನೆ. ಅಯ್ಯೋ! ನನ್ನದೆಲ್ಲವೂ ಸತ್ಯಾನಾಶವಾಯಿತು. ನೋಡು – ನನಗೆ ಇನ್ನೂ ತೃಪ್ತಿ ಆಗಿಲ್ಲ, ನನ್ನ ಆಸೆಗಳು ಪೂರ್ಣಗೊಂಡಿಲ್ಲ, ಅಯ್ಯೊ! ಅಷ್ಟರೊಳಗೆ ನನ್ನ ಧರ್ಮ, ಅರ್ಥ, ಕಾಮದ ಮೂಲವಾದ ಈ ಗೃಹಸ್ಥಾಶ್ರಮವು ನಾಶವಾಯಿತಲ್ಲ! ॥ ೧೮ ॥ ಅಯ್ಯೋ! ನನ್ನ ಪ್ರಾಣವಲ್ಲಭೆ ನನ್ನನ್ನೇ ತನ್ನ ಇಷ್ಟದೇವರೆಂದು ತಿಳಿಯುತ್ತಿದ್ದಳು. ನನ್ನ ಪ್ರತಿಯೊಂದು ಮಾತನ್ನೂ ನಡೆಸುತ್ತಿದ್ದಳು. ನನ್ನ ಸಂಕೇತದಂತೆ ಕುಣಿಯುತ್ತಿದ್ದಳು. ಎಲ್ಲ ರೀತಿಯಿಂದಲೂ ನನಗೆ ಯೋಗ್ಯವಾಗಿದ್ದಳು. ಇಂದು ಅವಳು ನನ್ನನ್ನು ಬರಿದಾದ ಮನೆಯಲ್ಲಿ ಬಿಟ್ಟು ನಮ್ಮ ಅಬೋಧ ಮರಿಗಳೊಂದಿಗೆ ಸ್ವರ್ಗಕ್ಕೆ ಹೋಗುತ್ತಿರುವಳಲ್ಲ! ॥ ೧೯ ॥ ನನ್ನ ಮಕ್ಕಳು ಸತ್ತುಹೋದುವು. ನನ್ನ ಹೆಂಡತಿ ಹೊರಟುಹೋದಳು. ಇನ್ನು ಈ ಸಂಸಾರದಲ್ಲಿ ನನಗೇನು ಕೆಲಸವಿದೆ. ದೀನನಾದ ನನ್ನ ವಿಧುರ ಜೀವನವು ದುಃಖಮಯವೇ ಆಗಿದೆ. ಈಗ ನಾನು ಈ ಶೂನ್ಯಪ್ರಾಯ ಮನೆಯಲ್ಲಿ ಯಾರಿಗಾಗಿ ಬದುಕಲಿ? ಅವರ ಜೊತೆಯಲ್ಲೇ ನಾನೂ ಹೋಗುವೆನು." ॥ ೨೦ ॥ ರಾಜನೇ! ಹೀಗೆ ಅವಿವೇಕಿಯಾದ ಆ ಕಪೋತವು ನಿರ್ಧರಿಸಿ – ಬಲೆಯಲ್ಲಿ ಸಿಕ್ಕಿಕೊಂಡು ಸಾವಿನ ದವಡೆಯಲ್ಲಿ ಸಿಲುಕಿ ಪತ್ನೀ-ಪುತ್ರರು ಒದ್ದಾಡುತ್ತಿರುವುದನ್ನು ನೋಡುತ್ತಿದ್ದರೂ ತಾನೂ ಹೋಗಿ ಬೇಡನ ಆ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿತು. ॥ ೨೧ ॥ ರಾಜನೇ! ಆ ಬೇಡನು ಬಹಳ ಕ್ರೂರಿಯಾಗಿದ್ದನು. ಗೃಹಸ್ಥಾಶ್ರಮಿ ಪಾರಿವಾಳದ ಪರಿವಾರ ಅನಾಯಾಸವಾಸವಾಗಿ ದೊರೆತುದರಿಂದ ಭಾರೀ ಸಂತೋಷವಾಯಿತು. ತನ್ನ ಕೆಲಸವಾಯಿತೆಂದು ತಿಳಿದು ಅವನು ಅವನ್ನು ಎತ್ತಿಕೊಂಡು ಹೊರಟುಹೋದನು. ॥ ೨೨ ॥

ಏವಂ ಕುಟುಂಬ್ಯಶಾಂತಾತ್ಮಾ ದ್ವಂದ್ವಾರಾಮಃ ಪತತ್ರಿವತ್ ।
ಪುಷ್ಣನ್ ಕುಟುಂಬಂ ಕೃಪಣಃ ಸಾನುಬಂಧೋಽವಸೀದತಿ ॥ ೭೩ ॥

ಯಃ ಪ್ರಾಪ್ಯ ಮಾನುಷಂ ಲೋಕಂ ಮುಕ್ತಿದ್ವಾರಮಪಾವೃತಮ್ ।
ಗೃಹೇಷು ಖಗವತ್ ಸಕ್ತಸ್ತಮಾರೂಢಚ್ಯುತಂ ವಿದುಃ ॥ ೭೪ ॥

ಇದೇ ಪ್ರಕಾರ ಗೃಹಸ್ಥನು ವಿಷಯಗಳಲ್ಲೇ ಸುಖವನ್ನು ಅರಸುತ್ತಾ, ಚಿತ್ತಚಂಚಲನಾದವನು, ತನ್ನ ಪರಿವಾರವನ್ನು ಸಾಕುವುದರಲ್ಲೇ ತೊಡಗಿರುವವನು ಪಾರಿವಾಳ ದಂಪತಿಯಂತೆ ದೀನ ಅವಸ್ಥೆಯನ್ನು ಹೊಂದಿ, ಪರಿವಾರಸಹಿತ ಅವನ ಪತನವಾಗುತ್ತದೆ ಎಂಬುದೇ ಸಾರಾಂಶವಾಗಿದೆ. ॥ ೭೩ ॥ ಅದಕ್ಕಾಗಿ ದೊರೆತಿರುವ ಈ ಮನುಷ್ಯ ಶರೀರವು ತೆರೆದಿರುವ ಮುಕ್ತಿಯ ದ್ವಾರವಾಗಿದೆ ಎಂದು ತಿಳಿಯಬೇಕು. ಇದನ್ನು ಪಡೆದುಕೊಂಡರೂ ಮುಕ್ತಿಗಾಗಿ ಪ್ರಯತ್ನಿಸದಿರುವವನು, ಮನೆ-ಸಂಸಾರದಲ್ಲೇ ಕಪೋತದಂಪತಿಯಂತೆ ಆಸಕ್ತನಾಗಿರುವವನು ಶ್ರೇಯೋಮಾರ್ಗದ ನಿಚ್ಚಣಿಕೆಯಲ್ಲಿ ಏರಿ ಕೆಳಗೆ ಬಿದ್ದವನೆಂದೇ ತಿಳಿಯಬೇಕು. ಶಾಸ್ತ್ರದ ಭಾಷೆಯಲ್ಲಿ ಅವನನ್ನು "ಆರೂಢಚ್ಯುತ" ಎಂದು ಹೇಳುತ್ತಾರೆ. ॥ ೭೪ ॥

ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಸಪ್ತಮೋಽಧ್ಯಾಯಃ ॥ ೭ ॥

# ಎಂಟನೆಯ ಅಧ್ಯಾಯ

## ಅವಧೂತೋಪಾಖ್ಯಾನ – ಹೆಬ್ಬಾವಿನಿಂದ ಪಿಂಗಳೆಯ ತನಕ ಒಂಬತ್ತು ಗುರುಗಳ ಕಥೆ

ಬ್ರಾಹ್ಮಣ ಉವಾಚ

ಸುಖಮೈಂದ್ರಿಯಕಂ ರಾಜನ್ ಸ್ವರ್ಗೇ ನರಕ ಏವ ಚ ।
ದೇಹಿನಾಂ ಯದ್ಯಥಾದುಃಖಂ ತಸ್ಮಾನ್ನೇಚ್ಛೇತ ತದ್ಬುಧಃ ॥ ೧ ॥

ಗ್ರಾಸಂ ಸುಮೃಷ್ಟಂ ವಿರಸಂ ಮಹಾಂತಂ ಸ್ತೋಕಮೇವ ವಾ ।
ಯದೃಚ್ಛಯೈವಾಪತಿತಂ ಗ್ರಸೇದಾಜಗರೋಽಕ್ರಿಯಃ ॥ ೨ ॥

ಶಯೀತಾಹಾನಿ ಭೂರೀಣಿ ನಿರಾಹಾರೋಽನುಪಕ್ರಮಃ ।
ಯದಿ ನೋಪನಮೇದ್ಗ್ರಾಸೋ ಮಹಾಹಿರಿವ ದಿಷ್ಟಭುಕ್ ॥ ೩ ॥

ಓಜಃಸಹೋಬಲಯುತಂ ಬಿಭ್ರದ್ದೇಹಮಕರ್ಮಕಮ್ ।
ಶಯಾನೋ ವೀತನಿದ್ರಶ್ಚ ನೇಹೇತೇಂದ್ರಿಯವಾನಪಿ ॥ ೪ ॥

ಮುನಿಃ ಪ್ರಸನ್ನಗಂಭೀರೋ ದುರ್ವಿಗಾಹ್ಯೋ ದುರತ್ಯಯಃ ।
ಅನಂತಪಾರೋ ಹ್ಯಕ್ಷೋಭ್ಯಃ ಸ್ತಿಮಿತೋದ ಇವಾರ್ಣವಃ ॥ ೫ ॥

ಅವಧೂತ ದತ್ತಾತ್ರೇಯರು ಹೇಳುತ್ತಾರೆ – ಎಲೈ ರಾಜನೇ! ಇಂದ್ರಿಯಗಳಿಂದ ದೊರೆಯುವ ಸುಖವು ಸ್ವರ್ಗದಲ್ಲಿ ಇರುವಂತೆ ನರಕದಲ್ಲಿಯೂ ಇದೆ. ಪ್ರಯತ್ನವಿಲ್ಲದೆ ದುಃಖಗಳು ಬರುವಂತೆ ಸುಖವೂ ಬರುತ್ತದೆ. ಆದ್ದರಿಂದ ಬುದ್ಧಿವಂತರು ಅದನ್ನು ಬಯಸಬಾರದು. ॥ ೧ ॥ (ಈಗ ಹೆಬ್ಬಾವಿನ ದೃಷ್ಟಾಂತದಿಂದ ಮೂರು ಶ್ಲೋಕಗಳನ್ನು ಹೇಳುತ್ತಾರೆ –) ಯೋಗಿಯು ತಾನೇ ತಾನಾಗಿ ದೊರೆತುದನ್ನು ತಿಂದು ಸಂತುಷ್ಟನಾಗಿರಬೇಕು. ಅದು ಬೇಕಾದರೆ ಮಧುರವಾಗಿರಲೀ, ನೀರಸವಾಗಿರಲೀ, ಹೆಚ್ಚಿರಲೀ, ಕಡಿಮೆಯಿರಲಿ ಹೆಬ್ಬಾವಿನಂತೆ ಜೀವನ – ನಿರ್ವಾಹಗೈದು ಉದಾಸೀನನಾಗಿರಬೇಕು. ॥ ೨ ॥ ಒಂದೊಮ್ಮೆ ಅನೇಕ ದಿನಗಳವರೆಗೆ ಭೋಜನ ಸಿಗದಿದ್ದರೂ ಅದಕ್ಕಾಗಿ ಪ್ರಯತ್ನಿಸಬಾರದು. ಪ್ರಾರಬ್ಧದ ಭೋಗವೆಂದು ತಿಳಿದು ಅಜಗರದಂತೆ ಬಿದ್ದುಕೊಂಡಿರಬೇಕು. ॥ ೩ ॥ ಓಜ (ಮನೋಬಲ) ಸಹ (ಇಂದ್ರಿಯಬಲ) ಬಲ (ಶಾರೀರಿಕಬಲ) ಇವು ಮೂರರಿಂದ ಕೂಡಿದ್ದರೂ, ಇಂದ್ರಿಯಗಳಲ್ಲಿ ಕಾರ್ಯವೆಸಗುವ ಕ್ಷಮತೆ ಇದ್ದರೂ ಮಲಗಿದಂತೆ ಇರಬೇಕು. ॥ ೪ ॥

(ಸಮುದ್ರದ ದೃಷ್ಟಾಂತವನ್ನು ಎರಡು ಶ್ಲೋಕಗಳಲ್ಲಿ ಹೇಳುತ್ತಾರೆ –) ಮುನಿಯಾದವನು ಸಮುದ್ರದಂತೆ ಪ್ರಸನ್ನ ಮತ್ತು ಗಂಭೀರನಾಗಿರಬೇಕು. ಅವನ ಭಾವ ಅಗಾಧವಾಗಿರಬೇಕು. ಅವನು ಪ್ರಭಾವಶಾಲಿಯಾಗಿರುತ್ತಾನೆ. ಅವನನ್ನು ಅತಿಕ್ರಮಿಸಲು ಕಠಿಣವಾಗಿರುತ್ತದೆ. ಅವನನ್ನು ಕಾಮ, ಕ್ರೋಧ ಮುಂತಾದ ಯಾವ

ಸಮೃದ್ಧಕಾಮೋ ಹೀನೋ ವಾ ನಾರಾಯಣಪರೋ ಮುನಿಃ ।
ನೋತ್ಸರ್ಪೇತ ನ ಶುಷ್ಯೇತ ಸರಿದ್ಭಿರಿವ ಸಾಗರಃ ॥ ೬ ॥

ದೃಷ್ಟ್ವಾ ಸ್ತ್ರಿಯಂ ದೇವಮಾಯಾಂ ತದ್ಭಾವೈರಜಿತೇಂದ್ರಿಯಃ ।
ಪ್ರಲೋಭಿತಃ ಪತತ್ಯಂಧೇ ತಮಸ್ಯಗ್ನೌ ಪತಂಗವತ್ ॥ ೭ ॥

ಯೋಷಿದ್ಧಿರಣ್ಯಾಭರಣಾಂಬರಾದಿ-
ದ್ರವ್ಯೇಷು ಮಾಯಾರಚಿತೇಷು ಮೂಢಃ ।
ಪ್ರಲೋಭಿತಾತ್ಮಾ ಹ್ಯುಪಭೋಗಬುದ್ಧ್ಯಾ
ಪತಂಗ ವನ್ನಶ್ಯತಿ ನಷ್ಟದೃಷ್ಟಿಃ ॥ ೮ ॥

ಸ್ತೋಕಂ ಸ್ತೋಕಂ ಗ್ರಸೇದ್ ಗ್ರಾಸಂ ದೇಹೋ ವರ್ತೇತ ಯಾವತಾ ।
ಗೃಹಾನಹಿಂಸನ್ನಾತಿಷ್ಠೇತ್ ವೃತ್ತಿಂ ಮಾಧುಕರೀಂ ಮುನಿಃ ॥ ೯ ॥

ಅಣುಭ್ಯಶ್ಚ ಮಹದ್ಭ್ಯಶ್ಚ ಶಾಸ್ತ್ರೇಭ್ಯಃ ಕುಶಲೋ ನರಃ ।
ಸರ್ವತಃ ಸಾರಮಾದದ್ಯಾತ್ ಪುಷ್ಪೇಭ್ಯ ಇವ ಷಟ್ಪದಃ ॥ ೧೦ ॥

ಸಾಯಂತನಂ ಶ್ವಸ್ತನಂ ವಾ ನ ಸಂಗೃಹ್ಣೀತ ಭಿಕ್ಷಿತಮ್ ।
ಪಾಣಿಪಾತ್ರೋದರಾಮತ್ರೋ ಮಕ್ಷಿಕೇವ ನ ಸಂಗ್ರಹೀ ॥ ೧೧ ॥

ಸಾಯಂತನಂ ಶ್ವಸ್ತನಂ ವಾ ನ ಸಂಗೃಹ್ಣೀತ ಭಿಕ್ಷುಕಃ ।
ಮಕ್ಷಿಕಾ ಇವ ಸಂಗೃಹ್ಣನ್ ಸಹ ತೇನ ವಿನಶ್ಯತಿ ॥ ೧೨ ॥

ಶತ್ರುಗಳೂ ವಿಚಲಿತಗೊಳಿಸಲಾರವು. ನಿಶ್ಚಲ, ಪ್ರಶಾಂತ ಸಮುದ್ರದಂತೆ ಯಾವಾಗಲೂ ಇರುವ ಶಾಂತಿಯು ಅವನಲ್ಲಿ ಪ್ರತ್ಯಕ್ಷವಾಗಿರುತ್ತದೆ. ॥ ೫ ॥ ಸಮುದ್ರದಲ್ಲಿ ನದಿಗಳ ನೀರು ಬಂದು ಸೇರಿದರೂ ಸಮುದ್ರವು ತನ್ನ ಎಲ್ಲೆಯನ್ನು ಮೀರುವುದಿಲ್ಲ, ನೀರು ಬಾರದಿದ್ದರೂ ಒಣಗುವುದಿಲ್ಲ. ಹೀಗೆಯೇ ಮುನಿಯೂ ಕೂಡ ಸಮೃದ್ಧಿಯಿಂದ ಕೂಡಿದ್ದರೂ ಉಬ್ಬುವುದಿಲ್ಲ, ಸಮೃದ್ಧಿಹೀನನಾದರೂ ಕುಗ್ಗುವುದಿಲ್ಲ. ಸಮುದ್ರದಂತೆ ಎರಡೂ ಸ್ಥಿತಿಯಲ್ಲಿ ಒಂದೇ ರೀತಿಯಾಗಿರುತ್ತಾನೆ. ॥ ೬ ॥

(ಈಗ ಪತಂಗದ (ದೀಪದಹುಳು) ದೃಷ್ಟಾಂತವನ್ನು ಎರಡು ಶ್ಲೋಕಗಳಲ್ಲಿ ಹೇಳುತ್ತಾರೆ.) ದೀಪದ ಹುಳವು ಬೆಂಕಿಗೆ ಆಕರ್ಷಿತನಾಗಿ ಬೆಂಕಿಯಲ್ಲಿ ಬಿದ್ದು ಸಾಯುವಂತೆಯೇ ಅಜಿತೇಂದ್ರಿಯ (ಇಂದ್ರಿಯಗಳ ಗುಲಾಮ) ವ್ಯಕ್ತಿಯು ದೇವಮಾಯಾರೂಪೀ ಸ್ತ್ರೀಯನ್ನು ನೋಡಿ, ಅವಳ ಮೋಹದಲ್ಲಿ ಮೋಸಹೋಗಿ ಅಂಧಕಾರಮಯ ನರಕದಲ್ಲಿ ಬೀಳುತ್ತಾನೆ. ॥ ೭ ॥ ಕಾಮಿನಿ, ಕಾಂಚನ, ಆಭೂಷಣ, ವಸ್ತ್ರ ಮುಂತಾದ ಇರುವ ಎಲ್ಲ ದ್ರವ್ಯಗಳು ಮಾಯಾನಿರ್ಮಿತವಾಗಿವೆ. ಮೂಢಬುದ್ಧಿ ಮನುಷ್ಯನು ಉಪಭೋಗಬುದ್ಧಿಯಿಂದ ಅವುಗಳಲ್ಲಿ ಆಸಕ್ತನಾಗಿ ತನ್ನ ವಿವೇಕವನ್ನು ಕಳೆದುಕೊಳ್ಳುತ್ತಾನೆ. ದೀಪದ ಹುಳುವಿನಂತೆ ಸ್ವತಃ ಅವುಗಳಲ್ಲಿ ಬಿದ್ದು ತನ್ನ ನಾಶವನ್ನು ಮಾಡಿಕೊಳ್ಳುತ್ತಾನೆ. ॥ ೮ ॥

(ಈಗ ಭ್ರಮರ (ದುಂಬಿ)ದ ಉದಾಹರಣೆಯನ್ನು ಎರಡು ಶ್ಲೋಕಗಳಲ್ಲಿ ಕೊಡುತ್ತಾರೆ –) ಭ್ರಮರವು ಹೂವುಗಳ ಮೇಲೆ ಹಾರಾಡುತ್ತಾ ಪರಾಗವನ್ನು ಗ್ರಹಿಸುವಂತೆ ಮುನಿಯಾದವನು ಅನೇಕ ಮನೆಗಳಿಂದ ಸ್ವಲ್ಪ-ಸ್ವಲ್ಪ ಅನ್ನವನ್ನು ಬೇಡಿ ತರಬೇಕು. * ಅದರಿಂದ ಶರೀರನಿರ್ವಾಹವೂ ನಡೆದು, ಯಾರಿಗೂ ಕೊಡಲು ಕಷ್ಟವಾಗುವುದಿಲ್ಲ. ಈ ಪ್ರಕಾರ ಮಧುಕರೀ ವೃತ್ತಿಯನ್ನು ಆಶ್ರಯಿಸಬೇಕು. ॥ ೯ ॥ ದುಂಬಿಯು ಹೂವುಗಳಿಂದ ಸಾರ-ರಸ ಗ್ರಹಿಸುವಂತೆ ಕುಶಲನಾದ ಮನುಷ್ಯನು ಎಲ್ಲ ಹಿರಿಯ-ಕಿರಿಯ ಶಾಸ್ತ್ರಗಳಿಂದ ಸಾರವಾದ ಮಾತನ್ನು ತೆಗೆದುಕೊಳ್ಳಬೇಕು. (ವಿವಾದದಿಂದ ದೂರವುಳಿಯಬೇಕು.) ॥ ೧೦ ॥

(ಈಗ ಜೇನುನೊಣದ ದೃಷ್ಟಾಂತವನ್ನು ಎರಡು ಶ್ಲೋಕಗಳಲ್ಲಿ ತಿಳಿಸುತ್ತಾರೆ–) ಸಂನ್ಯಾಸಿಯಾದವನು ಸಂಜೆಗಾಗಿ ಅಥವಾ ಮರುದಿನಕ್ಕಾಗಿ ಭಿಕ್ಷೆಯನ್ನು ಉಳಿಸಿಡಬಾರದು. ಭಿಕ್ಷೆಯ ಪಾತ್ರದ ಸ್ಥಾನದಲ್ಲಿ ಕೇವಲ ಕೈ ಮತ್ತು ಇಡುವುದಕ್ಕಾಗಿ ಹೊಟ್ಟೆಯೇ ಇರಬೇಕು. ಏಕೆಂದರೆ, ಜೇನುನೊಣವು ಜೇನನ್ನು ಸಂಗ್ರಹಿಸಿದರೆ ಜೇನಿನ ಜೊತೆಗೆ ಅದರ ಜೀವನವು ಆಪತ್ತಿಗೆ ಗುರಿಯಾಗುವುದನ್ನು ಪ್ರತ್ಯಕ್ಷವಾಗಿ ನೋಡಲಾಗುತ್ತದೆ. ಇದನ್ನು ಅರಿತುಕೊಂಡು ಸಂನ್ಯಾಸಿಯು ಯಾವುದೇ ರೀತಿಯ ಸಂಗ್ರಹಮಾಡ ಬಾರದು. ॥ ೧೧-೧೨ ॥

* ಇಲ್ಲದಿದ್ದರೆ ಒಂದೇ ಕಮಲದ ಗಂಧದಲ್ಲಿ ಆಸಕ್ತವಾದ ಭ್ರಮರವು ರಾತ್ರಿಯಲ್ಲಿ ಮುಚ್ಚಿಕೊಂಡ ಆ ಕಮಲದಲ್ಲಿ ಸಿಕ್ಕಿಕೊಂಡು ಸತ್ತುಹೋಗುವಂತೆ, ಸ್ವಾದವಾಸನೆಯಿಂದ ಒಂದೇ ಮನೆಯಲ್ಲಿ ಅನ್ನ ತಿನ್ನುವುದರಿಂದ ಸಾಂಸರ್ಗಿಕ ಮೋಹದಲ್ಲಿ ಸಿಕ್ಕಿಕೊಂಡು ಯತಿಯು ಭ್ರಷ್ಟನಾಗಿ ಹೋಗುವನು.

ಪದಾಪಿ ಯುವತೀಂ ಭಿಕ್ಷುರ್ನ ಸ್ಪೃಶೇದ್ದಾರವೀಮಪಿ ।
ಸ್ಪೃಶನ್ ಕರೀವ ಬದ್ಧ್ಯೇತ ಕರಿಣ್ಯಾ ಅಂಗಸಂಗತಃ
॥ ೧೩ ॥

(ಈಗ ಆನೆಯ ದೃಷ್ಟಾಂತವನ್ನು ಎರಡು ಶ್ಲೋಕಗಳಲ್ಲಿ ಹೇಳುತ್ತಾರೆ–) ಸಂನ್ಯಾಸಿಯಾದವನು ಎಲ್ಲಿಯವರೆಗೆಂದರೆ ಮರದಿಂದ ಮಾಡಿದ ಸ್ತ್ರೀಯನ್ನೂ ಕೂಡ ಕಾಲಿನಿಂದಲೂ ಮುಟ್ಟಬಾರದು. ಇಲ್ಲದಿದ್ದರೆ ಹೆಣ್ಣಾನೆಯಲ್ಲಿ ಆಸಕ್ತವಾದ ಗಂಡಾನೆಯು ಖೆಡ್ಡಾದಲ್ಲಿ ಬಿದ್ದು ಬಂಧಿತವಾಗುವಂತೆ* ಅವನೂ ಮೋಸ ಹೋಗುತ್ತಾನೆ. ॥ ೧೩ ॥ ಕದಾಚಿತ್ ಸ್ತ್ರೀಯ ರೂಪದಲ್ಲಿ ತನ್ನ ಮೃತ್ಯುವೂ ಕೂಡ ಆಗಬಹುದು, ಅದಕ್ಕಾಗಿ ವಿವೇಕಿಯಾದ ಪುರುಷನು ಅವಳ ಬಳಿಗೆ ಹೋಗಬಾರದು. ಏಕೆಂದರೆ ಹೆಣ್ಣಾನೆಯಲ್ಲಿ ಆಸಕ್ತವಾದ ಗಂಡಾನೆಯು ಬೇರೆ ಬಲಿಷ್ಠ ಆನೆಗಳಿಂದ ಕೊಲ್ಲಲ್ಪಡುತ್ತದೆ. ಹಾಗೆಯೇ ಅವನೂ ಮೃತ್ಯುವಿಗೆ ತುತ್ತಾಗುತ್ತಾನೆ. ॥ ೧೪ ॥

ನಾಧಿಗಚ್ಛೇತ್ ಸ್ತ್ರಿಯಂ ಪ್ರಾಜ್ಞಃ ಕರ್ಹಿಚಿನ್ಮೃತ್ಯುಮಾತ್ಮನಃ ।
ಬಲಾಧಿಕೈಃ ಸ ಹನ್ಯೇತ ಗಜೈರನ್ಯೈರ್ಗಜೋ ಯಥಾ
॥ ೧೪ ॥

(ಈಗ ಜೇನು ತೆಗೆಯುವವನ ದೃಷ್ಟಾಂತವನ್ನು ಕೊಡುತ್ತಾರೆ –) ಲೋಭಿ ಮನುಷ್ಯನು ಕೂಡಿಟ್ಟ ಧನವನ್ನು ಬೇರೆ ಯಾರಿಗೂ ದಾನ ಮಾಡುವುದಿಲ್ಲ, ತಾನೂ ಭೋಗಿಸುವುದೂ ಇಲ್ಲ. ಅವನ ಧನವನ್ನು ಬೇರೆ ಯಾರೋ ಭೋಗಿಸುತ್ತಾನೆ. ಜೇನು ತೆಗೆಯುವವನ ಬಳಿ ಜೇನಿದೆ ಎಂದು ತಿಳಿದಾಗ ಬೇರೆಯವರು ಏನಾದರೂ ಉಪಾಯ ಮಾಡಿ ಅವನಿಂದ ತೆಗೆದುಕೊಳ್ಳುತ್ತಾರೆ. ಅವನು ಜೇನಿನ ಉಪಭೋಗದಿಂದ ವಂಚಿತನೇ ಆಗಿರುತ್ತಾನೆ. ॥ ೧೫ ॥

ನ ದೇಯ ನೋಪಭೋಗ್ಯಂ ಚ ಲುಬ್ಧೈರ್ಯದ್ದುಃಖಸಂಚಿತಮ್ ।
ಭುಂಕ್ತೇ ತದಪಿ ತಚ್ಚಾನ್ಯೋ ಮಧುಹೇವಾರ್ಥವಿನ್ಮಧು
॥ ೧೫ ॥

ಭೋಗದ ಕಾಮನೆಯುಳ್ಳವರು ಕೇವಲ ತಮ್ಮ ಸುಖಭೋಗದ ಆಸೆಯಿಂದ ಬಹಳ ಕಷ್ಟಪಟ್ಟು ಧನವನ್ನು ಗಳಿಸುತ್ತಾರೆ. ಅವರ ಮನೆಯಲ್ಲಿ ಸಿದ್ಧವಾದ ಅನ್ನವನ್ನು – ಜೇನುತೆಗೆಯವವನ ಜೇನನ್ನು ಬೇರೆ ಜನರೇ ಉಪಭೋಗಿಸುವಂತೆ ಸಂನ್ಯಾಸಿಗಳು ಅವರಿಂದ ಮೊದಲೇ ಊಟಮಾಡುತ್ತಾರೆ. (ಧಾರ್ಮಿಕ ಭಾವನೆಯುಳ್ಳವರಾದರೋ ಎಲ್ಲ ಧನವು ಜನತಾಜನಾರ್ದನದ್ದಾಗಿದೆ ಎಂಬ ಭಾವನೆಯನ್ನಿರಿಸಿ ಅದನ್ನು ಸದ್ವಿನಿಯೋಗ ಮಾಡಿಯೇ ಮಾಡುತ್ತಾರೆ.) ॥ ೧೬ ॥

ಸುದುಃಖೋಪಾರ್ಜಿತೈರ್ವಿತ್ತೈರಾಶಾಸಾನಾಂ ಗೃಹಾಶಿಷಃ ।
ಮಧುಹೇವಾಗ್ರತೋ ಭುಂಕ್ತೇ ಯತಿರ್ವೈ ಗೃಹಮೇಧಿನಾಮ್
॥ ೧೬ ॥

ವನವಾಸೀ ಸಂನ್ಯಾಸಿಯು ಎಂದೂ ವಿಷಯ-ಸಂಬಂಧೀ ಗ್ರಾಮ್ಯಗೀತೆಗಳನ್ನು ಕೇಳಬಾರದು. ವ್ಯಾಧನ ಹಾಡಿನಿಂದ ಮೋಹಿತವಾಗಿ ಬಂಧಿತವಾಗುವ ಜಿಂಕೆಯಿಂದ ಈ ಪಾಠವನ್ನು ಸಂನ್ಯಾಸಿಯು ಕಲಿತುಕೊಳ್ಳಬೇಕು. ಇದನ್ನು ನಾನು ಜಿಂಕೆಯಿಂದ ಕಲಿತುಕೊಂಡೆ. ॥ ೧೭ ॥ ಜಿಂಕೆಯ ಗರ್ಭದಲ್ಲಿ ಹುಟ್ಟಿದ ಋಷ್ಯಶೃಂಗ ಮುನಿಯು ಸ್ತ್ರೀಯರ ಹಾಡು-ಕುಣಿತಗಳನ್ನು ನೋಡಿ ಕೇಳಿ ಅವರಿಗೆ ವಶನಾಗಿ, ಅವರ ಕೈಗೊಂಬೆಯಾದುದು ನಿನಗೆ ತಿಳಿದೇ ಇದೆ. ॥ ೧೮ ॥

ಗ್ರಾಮ್ಯಗೀತಂ ನ ಶೃಣುಯಾದ್ಯತಿರ್ವನಚರಃ ಕ್ವಚಿತ್ ।
ಶಿಕ್ಷೇತ ಹರಿಣಾದ್ಬದ್ಧಾನ್ಮೃಗಯೋರ್ಗೀತಮೋಹಿತಾತ್
॥ ೧೭ ॥

ನೃತ್ಯವಾದಿತ್ರಗೀತಾನಿ ಜುಷನ್ ಗ್ರಾಮ್ಯಾಣಿ ಯೋಷಿತಾಮ್ ।
ಆಸಾಂ ಕ್ರೀಡನಕೋ ವಶ್ಯ ಋಷ್ಯಶೃಂಗೋ ಮೃಗೀಸುತಃ
॥ ೧೮ ॥

* ಕಾಡಾನೆಗಳನ್ನು ಹಿಡಿಯಲು ಮಾಡಿದ ಕಂದಕಕ್ಕೆ ಖೆಡ್ಡಾ ಎಂದು ಹೇಳುತ್ತಾರೆ. ಕಂದಕವನ್ನು ಆಳವಾಗಿ ತೋಡಿ, ಅದನ್ನು ಬಿದಿರು ಹುಲ್ಲಿನಿಂದ ಮುಚ್ಚಿ ಅದರ ಮೇಲೆ ಮರದಿಂದ ಮಾಡಿದ ಹೆಣ್ಣಾನೆಯನ್ನು ನಿಲ್ಲಿಸಿಡುತ್ತಾರೆ. ಅದನ್ನು ದೂರದಿಂದ ನೋಡಿದ ಗಂಡುಸಲಗ ಮರದ ಆನೆಯನ್ನು ನಿಜಆನೆಯೆಂದೇ ಭ್ರಮಿಸಿ ಬಂದು ಖೆಡ್ಡದಲ್ಲಿ ಬಿದ್ದು ಪರಾಧೀನವಾಗುತ್ತದೆ. ಅದಕ್ಕಾಗಿಯೇ ಸಂನ್ಯಾಸಿಯು ಮರದ ಹೆಣ್ಣು ಬೊಂಬೆಯನ್ನೂ ಮುಟ್ಟಬಾರದೆಂದು ತಿಳಿಸಲಾಗಿದೆ.

ಜಿಹ್ವಯಾತಿಪ್ರಮಾಥಿನ್ಯಾ ಜನೋ ರಸವಿಮೋಹಿತಃ ।
ಮೃತ್ಯುಮೃಚ್ಛತ್ಯಸದ್ಬುದ್ಧಿರ್ಮೀನಸ್ತು ಬಡಿಶೈರ್ಯಥಾ
॥ ೧೯ ॥

ಇಂದ್ರಿಯಾಣಿ ಜಯಂತ್ಯಾಶು ನಿರಾಹಾರಾ ಮನೀಷಿಣಃ ।
ವರ್ಜಯಿತ್ವಾ ತು ರಸನಂ ತನ್ನಿರನ್ನಸ್ಯ ವರ್ಧತೇ
॥ ೨೦ ॥

ತಾವಜ್ಜಿತೇಂದ್ರಿಯೋ ನ ಸ್ಯಾದ್ ವಿಜಿತಾನ್ಯೇಂದ್ರಿಯಃ ಪುಮಾನ್ ।
ನ ಜಯೇದ್ರಸನಂ ಯಾವಜ್ಜಿತಂ ಸರ್ವಂ ಜಿತೇ ರಸೇ
॥ ೨೧ ॥

ಪಿಂಗಲಾ ನಾಮ ವೇಶ್ಯಾಽಽಸೀದ್ವಿದೇಹನಗರೇ ಪುರಾ ।
ತಸ್ಯಾ ಮೇ ಶಿಕ್ಷಿತಂ ಕಿಂಚಿನ್ನಿಬೋಧ ನೃಪನಂದನ
॥ ೨೨ ॥

ಸಾ ಸ್ವೈರಿಣ್ಯೇಕದಾ ಕಾಂತಂ ಸಂಕೇತ ಉಪನೇಷ್ಯತೀ ।
ಅಭೂತ್ಕಾಲೇ ಬಹಿರ್ದ್ವಾರಿ ಬಿಭ್ರತೀ ರೂಪಮುತ್ತಮಮ್
॥ ೨೩ ॥

ಮಾರ್ಗ ಆಗಚ್ಛತೋ ವೀಕ್ಷ್ಯ ಪುರುಷಾನ್ ಪುರುಷರ್ಷಭ ।
ತಾನ್ಶುಲ್ಕದಾನ್ವಿತ್ತವತಃ ಕಾಂತಾನ್ ಮೇನೇಽರ್ಥಕಾಮುಕಾ
॥ ೨೪ ॥

ಆಗತೇಷ್ವಪಯಾತೇಷು ಸಾ ಸಂಕೇತೋಪಜೀವಿನೀ ।
ಅಪ್ಯನ್ಯೋ ವಿತ್ತವಾನ್ಕೋಽಪಿ ಮಾಮುಪೈಷ್ಯತಿ ಭೂರಿದಃ
॥ ೨೫ ॥

ಏವಂ ದುರಾಶಯಾ ಧ್ವಸ್ತನಿದ್ರಾ ದ್ವಾರ್ಯವಲಂಬತೀ ।
ನಿರ್ಗಚ್ಛಂತೀ ಪ್ರವಿಶತೀ ನಿಶೀಥಂ ಸಮಪದ್ಯತ
॥ ೨೬ ॥

ತಸ್ಯಾ ವಿತ್ತಾಶಯಾ ಶುಷ್ಯದ್ವಕ್ತ್ರಾಯಾ ದೀನಚೇತಸಃ ।
ನಿರ್ವೇದಃ ಪರಮೋ ಜಜ್ಞೇ ಚಿಂತಾಹೇತುಃ ಸುಖಾವಹಃ
॥ ೨೭ ॥

ಈಗ ನಾನು ನಿನಗೆ ಮೀನಿನಿಂದ ಕಲಿತ ಪಾಠವನ್ನು ತಿಳಿಸುತ್ತೇನೆ. ಗಾಳದ ತುದಿಯಲ್ಲಿದ್ದ ಮಾಂಸದ ತುಂಡಿನ ಆಸೆಯಿಂದ ತನ್ನ ಪ್ರಾಣವನ್ನೇ ಕಳೆದುಕೊಳ್ಳುವಂತೆ, ಜಿಹ್ವಾಚಾಪಲ್ಯಕ್ಕೆ ಸಿಲುಕಿದ ದುರ್ಬುದ್ಧಿಯುಳ್ಳ ಮನುಷ್ಯನು ಮನಸ್ಸನ್ನು ಮಥಿಸಿ ವ್ಯಾಕುಲ ಗೊಳಿಸುವ ತನ್ನ ಜಿಹ್ವೆಗೆ ವಶನಾಗಿ ಹೋಗುತ್ತಾನೆ ಹಾಗೂ ಸತ್ತುಹೋಗುತ್ತಾನೆ. ॥ ೧೯ ॥ ವಿವೇಕಿ ಪುರುಷನು ಭೋಜನವನ್ನು ನಿಲ್ಲಿಸಿ, ಬೇರೆ ಇಂದ್ರಿಯಗಳ ಮೇಲೆ ಬೇಗನೆ ವಿಜಯವನ್ನು ಪಡೆದುಕೊಳ್ಳುತ್ತಾನೆ. ಆದರೆ ಇದರಿಂದ ಅವನ ರಸನೇಂದ್ರಿಯ (ನಾಲಿಗೆ) ವಶವಾಗುವುದಿಲ್ಲ, ಆದಾದರೋ ಊಟ ನಿಲ್ಲಿಸು ವುದರಿಂದ ಇನ್ನೂ ಪ್ರಬಲವಾಗುತ್ತದೆ. ॥ ೨೦ ॥ ಮನುಷ್ಯನು ಎಲ್ಲ ಇಂದ್ರಿಯಗಳ ಮೇಲೆ ವಿಜಯಪಡೆದ ಬಳಿಕವೂ ರಸನೇಂದ್ರಿಯ ವನ್ನು ತನ್ನ ವಶಪಡಿಸಿಕೊಳ್ಳುವ ತನಕ ಅವನು ಜಿತೇಂದ್ರಿಯ ನಾಗಲಾರನು. ರಸನೇಂದ್ರಿಯವನ್ನು ವಶಪಡಿಸಿ ಕೊಂಡಾಗಲಂತೂ ಎಲ್ಲ ಇಂದ್ರಿಯಗಳನ್ನು ವಶವಾದಂತೆಯೇ ಸರಿ. ॥ ೨೧ ॥

ಎಲೈ ರಾಜನೇ! ಹಿಂದಿನಕಾಲದಲ್ಲಿ ವಿದೇಹನಗರ ಮಿಥಿಲೆ ಯಲ್ಲಿ ಓರ್ವ ಪಿಂಗಳಾ ಹೆಸರಿನ ವೇಶ್ಯೆ ಇರುತ್ತಿದ್ದಳು. ಅವಳಿಂದ ಕೆಲವನ್ನು ನಾನು ಕಲಿತುಕೊಂಡಿರುವುದನ್ನು ನಿನಗೆ ಹೇಳುತ್ತೇನೆ. ಮನಸ್ಸಿಟ್ಟು ಕೇಳು. ॥ ೨೨ ॥ ಅವಳು ಸ್ವೇಚ್ಛಾಚಾರಿಣಿಯಾಗಿದ್ದು ರೂಪವತಿಯೂ ಆಗಿದ್ದಳು. ಒಂದು ದಿನ ರಾತ್ರೆ ಯಾರೋ ಪುರುಷನನ್ನು ತನ್ನ ರಮಣಸ್ಥಾನಕ್ಕೆ ಬರಮಾಡಿಕೊಳ್ಳಲು ತುಂಬಾ ಉತ್ತಮ ವಸ್ತ್ರಾಭೂಷಣಗಳಿಂದ ಅಲಂಕರಿಸಿಕೊಂಡು ಅವಳು ಬಹಳ ಹೊತ್ತು ತನ್ನ ಮನೆಯ ಹೊರಬಾಗಿಲಲ್ಲಿ ನಿಂತಿದ್ದಳು. ॥ ೨೩ ॥ ಎಲೈ ಪುರುಷಶ್ರೇಷ್ಠ! ಧನದ ಕಾಮನೆಯುಳ್ಳ ಅರ್ಥ ಲೋಲುಪ ಕಾಮಿನಿಯು ಯಾರೇ ಪುರುಷನು ಅತ್ತಕಡೆಯಿಂದ ಬರುವುದನ್ನು ಕಂಡರೆ, ಇವನು ಯಾರೋ ಶ್ರೀಮಂತನಿರುವನು, ನನಗೆ ಹಣವನ್ನು ಕೊಟ್ಟು ಉಪಭೋಗಿಸಲೆಂದೇ ಈ ಕಡೆ ಬರುತ್ತಿರುವನು ಎಂದು ಯೋಚಿಸುತ್ತಿದ್ದಳು. ॥ ೨೪ ॥

ಆ ಸಂಕೇತೋಪಜೀವಿಯಾದ ವೇಶ್ಯೆಯು ಪುನಃ ಯಾರಾದರೂ ವಿಟಪುರುಷರನ್ನು ನೋಡುತ್ತಲೇ, ಇವನು ನನ್ನ ಬಳಿಗೆ ಬರುತ್ತಿ ರುವನು. ನಾನು ಬಯಸಿದಷ್ಟು ಹಣವನ್ನು ಕೊಡುವನು ಎಂದು ಯೋಚಿಸುತ್ತಾಳೆ. ಆದರೆ ಅವನು ಮುಂದಕ್ಕೆ ಹೋದಾಗ, ಈಗಲಂತೂ ಖಂಡಿತವಾಗಿ ಯಾರಾದರೂ ನನಗೆ ಹೇರಳ ಧನ ವನ್ನು ಕೊಡುವ ಶ್ರೀಮಂತನು ಬಂದೇ ಬರುವನು ಎಂದು ಎಣಿಸಿದಳು. ॥ ೨೫ ॥ ಅವಳ ಮನಸ್ಸಿನ ಈ ದುರಾಸೆ ಬೆಳೆಯುತ್ತಲೇ ಇತ್ತು. ಅವಳು ಬಹಳ ಹೊತ್ತು ಬಾಗಿಲಲ್ಲಿ ನಿಂತೇ ಇದ್ದಳು. ನಿದ್ದೆಯು ದೂರವಾಯಿತು. ಅವಳು ಒಮ್ಮೆ ಒಳಗೂ ಒಮ್ಮೆ ಹೊರಗೂ ಅಲೆಯುತ್ತಿದ್ದಳು. ಹೀಗೆ ಅರ್ಧರಾತ್ರಿ ಕಳೆದು ಹೋಯಿತು. ॥ ೨೬ ॥

ರಾಜನೇ! ನಿಜವಾಗಿಯೂ ಧನದ ಆಸೆಯು ತುಂಬಾ ಕೆಟ್ಟದು. ಶ್ರೀಮಂತರ ದಾರಿ ನೋಡಿ-ನೋಡಿ ಅವಳ ಬಾಯಿ ಒಣಗಿತು, ಚಿತ್ತ ವ್ಯಾಕುಲವಾಯಿತು. ಈಗ ಅವಳಿಗೆ ಈ ವೃತ್ತಿಯಲ್ಲಿ ವೈರಾಗ್ಯ ಉಂಟಾಯಿತು. ಅದರಲ್ಲಿ ದುಃಖ ಬುದ್ಧಿ ಉಂಟಾಯಿತು. ಆ ವಿರಾಗವೇ ಅವಳಿಗೆ ಸುಖಕ್ಕೆ ಕಾರಣವಾಯಿತು. ॥ ೨೭ ॥

ತಸ್ಯಾ ನಿರ್ವಿಣ್ಣಚಿತ್ತಾಯಾ ಗೀತಂ ಶೃಣು ಯಥಾ ಮಮ ।
ನಿರ್ವೇದ ಆಶಾಪಾಶಾನಾಂ ಪುರುಷಸ್ಯ ಯಥಾ ಹ್ಯಸಿಃ
॥ ೨೮ ॥

ನ ಹ್ಯಂಗಾಜಾತನಿರ್ವೇದೋ ದೇಹಬಂಧಂ ಜಿಹಾಸತಿ ।
ಯಥಾ ವಿಜ್ಞಾನರಹಿತೋ ಮನುಜೋ ಮಮತಾಂ ನೃಪ
॥ ೨೯ ॥

*ಪಿಂಗಲೋವಾಚ*

ಅಹೋ ಮೇ ಮೋಹವಿತತಿಂ ಪಶ್ಯತಾವಿಜಿತಾತ್ಮನಃ ।
ಯಾ ಕಾಂತಾದಸತಃ ಕಾಮಂ ಕಾಮಯೇ ಯೇನ ಬಾಲಿಶಾ
॥ ೩೦ ॥

ಸಂತಂ ಸಮೀಪೇ ರಮಣಂ ರತಿಪ್ರದಂ
ವಿತ್ತಪ್ರದಂ ನಿತ್ಯಮಿಮಂ ವಿಹಾಯ ।
ಅಕಾಮದಂ ದುಃಖಭಯಾಧಿಶೋಕ-
ಮೋಹಪ್ರದಂ ತುಚ್ಛಮಹಂ ಭಜೇಽಜ್ಞಾ ॥ ೩೧ ॥

ಅಹೋ ಮಯಾಽಽತ್ಮಾ ಪರಿತಾಪಿತೋ ವೃಥಾ
ಸಾಂಕೇತ್ಯವೃತ್ತ್ಯಾತಿವಿಗರ್ಹ್ಯವಾರ್ತಯಾ ।
ಸ್ತ್ರೈಣಾನ್ನರಾದ್ಯಾರ್ಥತೃಷೋಽನುಶೋಚ್ಯಾತ್
ಕ್ರೀತೇನ ವಿತ್ತಂ ರತಿಮಾತ್ಮನೇಚ್ಛತೀ ॥ ೩೨ ॥

ಯದಸ್ಥಿಭಿರ್ನಿರ್ಮಿತವಂಶವಂಶ್ಯ-
ಸ್ಥೂಣಂ ತ್ವಚಾ ರೋಮನಖೈಃ ಪಿನದ್ಧಮ್ ।
ಕ್ಷರನ್ನವದ್ವಾರಮಗಾರಮೇತದ್
ವಿಣ್ಮೂತ್ರಪೂರ್ಣಂ ಮದುಪೈತಿ ಕಾನ್ಯಾ ॥ ೩೩ ॥

ವಿದೇಹಾನಾಂ ಪುರೇ ಹ್ಯಸ್ಮಿನ್ನಹಮೇಕೈವ ಮೂಢಧೀಃ ।
ಯಾನ್ಯಮಿಚ್ಛಂತ್ಯಸತ್ಯಸ್ಮಾದಾತ್ಮದಾತ್ಕಾಮಮಚ್ಯುತಾತ್
॥ ೩೪ ॥

ಪಿಂಗಳೆಯ ಚಿತ್ತದಲ್ಲಿ ಈ ಪ್ರಕಾರ ವೈರಾಗ್ಯದ ಭಾವನೆ ಜಾಗ್ರತವಾದಾಗ ಅವಳು ಈ ಗೀತೆಯನ್ನು ಹಾಡಿದಳು. ಅದನ್ನು ಕೇಳು – "ವೈರಾಗ್ಯವೇ ಆಶಾರೂಪೀ ಉರುಳನ್ನು ಕತ್ತರಿಸುವಂತಹ ಹರಿತವಾದ ಖಡ್ಗವಾಗಿದೆ." ವೈರಾಗ್ಯವಿಲ್ಲದೆ ಮನುಷ್ಯನ ದುಃಖದ ನಿವೃತ್ತಿ ಆಗುವುದಿಲ್ಲ ॥ ೨೮ ॥ ಪ್ರಿಯರಾಜನೇ! ಯಾರಿಗೆ ವೈರಾಗ್ಯ ಉಂಟಾಗಲಿಲ್ಲವೋ, ಈ ಜಂಜಾಟದಿಂದ ನಿರಾಸಕ್ತನಾಗುವುದಿಲ್ಲವೋ ಆ ಅಜ್ಞಾನಿ ಪುರುಷನು ಮಮತೆಯನ್ನು ಬಿಡಲು ಇಚ್ಛಿಸುವುದಿಲ್ಲ, ಹಾಗೆಯೇ ಈ ಶರೀರಾದಿ ಬಂಧನಗಳನ್ನು ತೊರೆಯಲು ಬಯಸುವುದಿಲ್ಲ ॥ ೨೯ ॥

**ಪಿಂಗಳೆಯು ಈ ಗೀತೆಯನ್ನು ಹಾಡಿದಳು** – ಅಯ್ಯೋ! ನಾನು ಇಂದ್ರಿಯಗಳಿಗೆ ಅಧೀನನಾದೆಯಲ್ಲ! ಇದು ಬಹು ದುಃಖದ ಮಾತಾಗಿದೆ. ನನ್ನ ಮೂರ್ಖತೆಯನ್ನು, ನನ್ನ ಮೋಹದ ವಿಸ್ತಾರವಾದರೋ ನೋಡಿ! ನನ್ನ ಕಾಂತನಲ್ಲದ ಜನರೊಂದಿಗೆ ನಾನು ಕಾಮನೆ ಮಾಡಿದೆನಲ್ಲ! ॥ ೩೦ ॥ ನನ್ನ ಪರಮ ಕಾಂತನಾದರೋ ಶಾಶ್ವತವಾಗಿ ನನ್ನ ಬಳಿಯೇ ಇರುವನು. ಅವನು ಪರಮಾನಂದ ಸ್ವರೂಪನೂ, ಸುಖಪ್ರದಾತನೂ, ಲಕ್ಷ್ಮೀಪತಿಯೂ ಆಗಿರುವ ಕಾರಣದಿಂದ ಧನವನ್ನೂ ಕೊಡುವವನಾಗಿರುವನು. ನನ್ನ ಹೃದಯದಲ್ಲೇ ವಿರಾಜಮಾನನಾದ ಇಂತಹ ಪ್ರಭುವು ಇರುವಾಗ ಅವನನ್ನು ಬಿಟ್ಟು, ಯಥೇಷ್ಟ ಭೋಗವನ್ನು ಸಂಪಾದಿಸಲು ಅಸಮರ್ಥರೂ, ದುಃಖ, ಭಯ, ಆಧಿ-ವ್ಯಾಧಿ, ಶೋಕ, ಮೋಹ ಇವನ್ನು ಕೊಡುವವರೂ ಆದ ಜನರನ್ನು ನಾನು ಸೇವಿಸಿದೆನಲ್ಲ! ಆದ್ದರಿಂದ ನಾನು ಮೂರ್ಖಳಾಗಿದ್ದೇನೆ. ॥ ೩೧ ॥ ನಾನು ಅತ್ಯಂತ ನಿಂದನೀಯ ಆಜೀವಿಕೆಯಾದ ವೇಶ್ಯಾವೃತ್ತಿಯನ್ನು ಆಶ್ರಯಿಸಿದೆ. ವ್ಯರ್ಥವಾಗಿ ನನ್ನ ಶರೀರವನ್ನೂ, ಮನವನ್ನೂ ಮಾರಿಬಿಟ್ಟೆ. ಲಂಪಟರೂ, ಲೋಭಿಗಳೂ, ನಿಂದನೀಯರೂ ಆದ ಮನುಷ್ಯರು ಇದನ್ನು ಕೊಂಡುಕೊಂಡರು. ನಾನು ಇದೇ ಶರೀರದಿಂದ ಧನ ಮತ್ತು ರತಿಸುಖವನ್ನು ಬಯಸಿದೆನಲ್ಲ! ಇದು ಎಂತಹ ದುಃಖದ ಮಾತಾಗಿದೆ. ನನಗೆ ಧಿಕ್ಕಾರವಿರಲಿ! ॥ ೩೨ ॥

ಕಂಬಗಳನ್ನು ನೆಟ್ಟು ಮನೆಯನ್ನು ನಿಲ್ಲಿಸುವಂತೆ ಬೆನ್ನು ಹುರಿ, ಎಲುಬುಗಳಿಂದ ಈ ಶರೀರವೆಂಬ ಮನೆಯು ನಿರ್ಮಾಣಗೊಂಡಿದೆ. ಇದನ್ನು ನಖ, ಚರ್ಮ, ರೋಮಗಳಿಂದ ಮುಚ್ಚಲಾಗಿದೆ. ಇದಕ್ಕೆ ಇರುವ ಒಂಬತ್ತು ಬಾಗಿಲುಗಳಿಂದ ಯಾವಾಗಲೂ ಮಲ-ಮೂತ್ರ ಮುಂತಾದವುಗಳು ಒಸರುತ್ತಿರುತ್ತವೆ. ಇಂತಹ ಅಸ್ಥಿಪಂಜರವಾದ, ನಿಂದ್ಯವಾದ ಶರೀರವನ್ನೇ ಪ್ರಿಯವೆಂದು ತಿಳಿದು ಸೇವಿಸುವ ಸ್ತ್ರೀಯು ನಾನಲ್ಲದೆ ಬೇರೆ ಯಾರು ಇರಬಲ್ಲಳು ? ॥ ೩೩ ॥ ಇದಾದರೋ ವಿದೇಹಿಗಳ ನಗರವಾಗಿದೆ. ಆದರೆ ಇದರಲ್ಲಿ ನಾನೊಬ್ಬಳೇ ಎಲ್ಲರಿಗಿಂತ ಮೂರ್ಖಳೂ, ದುಷ್ಟಳೂ ಆಗಿರುವೆನು. ಏಕೆಂದರೆ, ನಾನೊಬ್ಬಳೇ ಆತ್ಮದಾನೀ, ಅವಿನಾಶೀ ಹಾಗೂ ಪರಮ ಪ್ರಿಯತಮ ಪರಮಾತ್ಮನನ್ನು ಬಿಟ್ಟು ಬೇರೆ ಪುರುಷರ ಅಭಿಲಾಷೆ ಮಾಡುತ್ತಿರುವೆನಲ್ಲ! ॥ ೩೪ ॥

ಸುಹೃತ್ ಪ್ರೇಷ್ಠತಮೋ ನಾಥ ಆತ್ಮಾ ಚಾಯಂ ಶರೀರಿಣಾಮ್ ।
ತಂ ವಿಕ್ರೀಯಾತ್ಮನೈವಾಹಂ ರಮೇಽನೇನ ಯಥಾ ರಮಾ
॥ ೩೫ ॥

ಕಿಯತ್ ಪ್ರಿಯಂ ತೇ ವ್ಯಭಜನ್ ಕಾಮಾ ಯೇ ಕಾಮದಾ ನರಾಃ ।
ಆದ್ಯಂತವಂತೋ ಭಾರ್ಯಾಯಾ ದೇವಾ ವಾ ಕಾಲವಿದ್ರುತಾಃ
॥ ೩೬ ॥

ನೂನಂ ಮೇ ಭಗವಾನ್ ಪ್ರೀತೋ
ವಿಷ್ಣುಃ ಕೇನಾಪಿ ಕರ್ಮಣಾ ।
ನಿರ್ವೇದೋಽಯಂ ದುರಾಶಾಯಾ
ಯನ್ಮೇ ಜಾತಃ ಸುಖಾವಹಃ ॥ ೩೭ ॥

ಮೈವಂ ಸ್ಯುರ್ಮಂದಭಾಗ್ಯಾಯಾಃ ಕ್ಲೇಶಾ ನಿರ್ವೇದಹೇತವಃ ।
ಯೇನಾನುಬಂಧಂ ನಿರ್ಹೃತ್ಯ ಪುರುಷಃ ಶಮಮೃಚ್ಛತಿ
॥ ೩೮ ॥

ತೇನೋಪಕೃತಮಾದಾಯ ಶಿರಸಾ ಗ್ರಾಮ್ಯಸಂಗತಾಃ ।
ತ್ಯಕ್ತ್ವಾ ದುರಾಶಾಃ ಶರಣಂ ವ್ರಜಾಮಿ ತಮಧೀಶ್ವರಮ್
॥ ೩೯ ॥

ಸಂತುಷ್ಟಾ ಶ್ರದ್ದಧತ್ಯೇತದ್ಯಥಾಲಾಭೇನ ಜೀವತೀ ।
ವಿಹರಾಮ್ಯಮುನೈವಾಹಮಾತ್ಮನಾ ರಮಣೇನ ವೈ
॥ ೪೦ ॥

ಸಂಸಾರಕೂಪೇ ಪತಿತಂ ವಿಷಯೈರ್ಮುಷಿತೇಕ್ಷಣಮ್ ।
ಗ್ರಸ್ತಂ ಕಾಲಾಹಿನಾಽಽತ್ಮಾನಂ ಕೋಽನ್ಯಸ್ತ್ರಾತುಮಧೀಶ್ವರಃ
॥ ೪೧ ॥

ಆತ್ಮೈವ ಹ್ಯಾತ್ಮನೋ ಗೋಪ್ತಾ ನಿರ್ವಿದ್ಯೇತ ಯದಾಖಿಲಾತ್ ।
ಅಪ್ರಮತ್ತ ಇದಂ ಪಶ್ಯೇದ್ ಗ್ರಸ್ತಂ ಕಾಲಾಹಿನಾ ಜಗತ್
॥ ೪೨ ॥

ಬ್ರಾಹ್ಮಣ ಉವಾಚ

ಏವಂ ವ್ಯವಸಿತಮತಿರ್ದುರಾಶಾಂ ಕಾಂತತರ್ಷಜಾಮ್ ।
ಛಿತ್ತ್ವೋಪಶಮಮಾಸ್ಥಾಯ ಶಯ್ಯಾಮುಪವಿವೇಶ ಸಾ
॥ ೪೩ ॥

ನನ್ನ ಹೃದಯದಲ್ಲಿ ವಿರಾಜಮಾನನಾದ ಪ್ರಭುವೇ ಸಮಸ್ತ ಪ್ರಾಣಿಗಳ ಹಿತೈಷಿಯೂ, ಸುಹೃದನೂ, ಪ್ರಿಯತಮನೂ, ಒಡೆಯನೂ, ಆತ್ಮನೂ ಆಗಿರುವನು. ಈಗ ನಾನು ನನ್ನನ್ನೇ ಕೊಟ್ಟು ಕೊಂಡು ಅವನನ್ನು ಕೊಂಡುಕೊಳ್ಳುವೆನು. ಅವನೊಡನೆ ಲಕ್ಷ್ಮೀದೇವಿಯು ವಿಹರಿಸುವಂತೆ ನಾನೂ ವಿಹರಿಸುವೆನು. ॥ ೩೫ ॥ ಆದಿ ಮತ್ತು ಅಂತ್ಯವುಳ್ಳ ನಶ್ವರವಾದ ಕಾಮೋಪಭೋಗಗಳಾಗಲೀ, ಆ ಕಾಮೋಪಭೋಗಗಳನ್ನು ಒದಗಿಸಿಕೊಡುವ ಪುರುಷರಾಗಲೀ, ಕಾಲದಿಂದ ನಷ್ಟರಾಗಿ ಹೋಗುವ ದೇವತೆಗಳಾಗಲೀ, ತಮ್ಮ ಭಾರ್ಯೆಯರಿಗೆ ಯಾವ ಸಂತೋಷವನ್ನು ನೀಡಬಲ್ಲರು ? ಪರಮಾತ್ಮನು ದಯಪಾಲಿಸುವ ಆತ್ಮಸುಖದ ಮುಂದೆ ಮನುಷ್ಯರು ಅಥವಾ ದೇವತೆಗಳು ತಮ್ಮ ಭಾರ್ಯೆಯರಿಗೆ ಕೊಡುವ ಸುಖವು ಅತಿ ತುಚ್ಛವಾದುದು. ॥ ೩೬ ॥ ನನ್ನ ಯಾವುದೋ ಶುಭಕರ್ಮದಿಂದ ಭಗವಾನ್ ವಿಷ್ಣುವು ಅವಶ್ಯವಾಗಿ ನನ್ನ ಮೇಲೆ ಪ್ರಸನ್ನನಾಗಿರುವನು. ಅದಕ್ಕಾಗಿಯೇ ದುರಾಸೆಯಿಂದ ನನಗೆ ಈ ವಿಧವಾದ ವೈರಾಗ್ಯ ಉಂಟಾಯಿತು. ನನ್ನ ಈ ವೈರಾಗ್ಯವು ಅವಶ್ಯವಾಗಿ ಸುಖ ಕೊಡುವಂತಹುದಾದೀತು. ॥ ೩೭ ॥ ನನಗೆ ದುಃಖ ಉಂಟಾಯಿತು, ಇದೇ ನನಗೆ ವೈರಾಗ್ಯಕ್ಕೆ ಕಾರಣವಾಯಿತು. ಆದ್ದರಿಂದ ನಾನು ಭಾಗ್ಯಹೀನಳಲ್ಲ, ಏಕೆಂದರೆ, ಇದೇ ವೈರಾಗ್ಯದಿಂದ ಮನುಷ್ಯನು ತನ್ನ ಬಂಧನಗಳನ್ನು ಕಳಕೊಂಡು ಪರಮಶಾಂತಿಯನ್ನು ಪಡೆಯುತ್ತಾನೆ. ॥ ೩೮ ॥ ಈಗ ನಾನು ಆ ಭಗವಂತನ ಈ ಮಹೋಪಕಾರವನ್ನು ಆದರಪೂರ್ವಕ ತಲೆಬಾಗಿ ಸ್ವೀಕರಿಸುತ್ತೇನೆ. ಇನ್ನು ವಿಷಯಭೋಗಗಳ ದುರಾಸೆಯನ್ನು ಬಿಟ್ಟು ಆ ಜಗದೀಶ್ವರನಿಗೇ ಶರಣುಹೋಗುವೆನು. ॥ ೩೯ ॥ ಇನ್ನು ಮುಂದೆ ನಾನು ಪ್ರಾರಬ್ಧಾನುಸಾರ ದೊರೆತುದರಲ್ಲೇ ಜೀವನ ನಿರ್ವಾಹ ಮಾಡುವೆನು. ಬಹಳ ಸಂತೋಷ ಮತ್ತು ಶ್ರದ್ಧೆಯಿಂದೊಡಗೂಡಿ ಇರುವೆನು. ಇನ್ನು ನಾನು ಯಾವುದೇ ಬೇರೆ ಪುರುಷನತ್ತ ಕಣ್ಣೆತ್ತಿಯೂ ನೋಡದೆ, ನನ್ನ ಹೃದಯೇಶ್ವರ, ಆತ್ಮಸ್ವರೂಪೀ ಪ್ರಭುವಿನೊಂದಿಗೆ ವಿಹರಿಸುವೆನು. ॥ ೪೦ ॥ ಈ ಜೀವಿಯು ಸಂಸಾರ ಕೂಪದಲ್ಲಿ ಬಿದ್ದಿರುವುದು. ವಿಷಯಗಳು ಇವನನ್ನು ಕುರುಡಾಗಿಸಿವೆ. ಕಾಲರೂಪೀ ಅಜಗರವು ಇವನನ್ನು ತನ್ನ ಬಾಯಲ್ಲಿ ಕಚ್ಚಿಕೊಂಡಿದೆ. ಈಗ ಭಗವಂತನನ್ನು ಬಿಟ್ಟು ಇವನನ್ನು ರಕ್ಷಿಸುವವರು ಬೇರೆ ಯಾರು ಸಮರ್ಥರಾಗಿರುವರು ? ॥ ೪೧ ॥ ಜೀವಿಯು ಸಮಸ್ತ ವಿಷಯಗಳಿಂದ ವಿರಕ್ತನಾದಾಗ ಅವನು ಸ್ವತಃ ತನ್ನನ್ನು ರಕ್ಷಿಸಿಕೊಳ್ಳುತ್ತಾನೆ. ಅದಕ್ಕಾಗಿ ಇಡೀ ಜಗತ್ತು ಕಾಲರೂಪೀ ಅಜಗರಕ್ಕೆ ತುತ್ತಾಗಿದೆ ಎಂಬುದನ್ನು ಎಚ್ಚರಿಕೆಯಿಂದ ಗಮನಿಸುತ್ತಿರಬೇಕು. ॥ ೪೨ ॥

**ಅವಧೂತ ದತ್ತಾತ್ರೇಯರು ಹೇಳುತ್ತಾರೆ** – ರಾಜನೇ! ಪಿಂಗಳೆ ವೇಶ್ಯೆಯು ಹೀಗೆ ನಿಶ್ಚಯಿಸಿಕೊಂಡು ತನ್ನ ಪ್ರಿಯ ಶ್ರೀಮಂತರ ದುರಾಸೆಯನ್ನು, ವಿಟರನ್ನು ಸೇರುವ ಲಾಲಸೆಯನ್ನು

ಆಶಾ ಹಿ ಪರಮಂ ದುಃಖಂ ನೈರಾಶ್ಯಂ ಪರಮಂ ಸುಖಮ್ ।
ಯಥಾ ಸಂಛಿದ್ಯ ಕಾಂತಾಶಾಂ ಸುಖಂ ಸುಷ್ವಾಪ ಪಿಂಗಲಾ ॥ ೪೪ ॥

ಪರಿತ್ಯಜಿಸಿ, ಶಾಂತಭಾವದಿಂದ ಹೋಗಿ ತನ್ನ ಹಾಸಿಗೆಯಲ್ಲಿ ಮಲಗಿಕೊಂಡಳು. ॥ ೪೩ ॥ ನಿಜವಾಗಿಯೂ ಆಸೆಯೇ ಎಲ್ಲಕ್ಕಿಂತ ದೊಡ್ಡ ದುಃಖವಾಗಿದೆ, ನಿರಾಸೆಯೇ ಎಲ್ಲಕ್ಕಿಂತ ಭಾರೀ ಸುಖವಾಗಿದೆ. ಏಕೆಂದರೆ, ಪಿಂಗಳೆವೇಶ್ಯೆಯು ಪುರುಷರ ಆಸೆಯನ್ನು ತೊರೆದಾಗಲೇ ಅವಳು ಸುಖವಾಗಿ ಮಲಗಲು ಸಾಧ್ಯವಾಯಿತು. ॥ ೪೪ ॥

ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಅಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಅವಧೂತೋಪಾಖ್ಯಾನ – ಕುರರಪಕ್ಷಿಯಿಂದ ಹಿಡಿದು ಭೃಂಗದವರೆಗಿನ ಏಳು ಗುರುಗಳ ಕಥೆ

ಬ್ರಾಹ್ಮಣ ಉವಾಚ

ಪರಿಗ್ರಹೋ ಹಿ ದುಃಖಾಯ ಯದ್ಯತ್ಪ್ರಿಯತಮಂ ನೃಣಾಮ್ ।
ಅನಂತಂ ಸುಖಮಾಪ್ನೋತಿ ತದ್ವಿದ್ವಾನ್ ಯಸ್ತ್ವಕಿಂಚನಃ ॥ ೧ ॥

**ಬ್ರಾಹ್ಮಣಶ್ರೇಷ್ಠರಾದ ಅವಧೂತ ದತ್ತಾತ್ರೇಯರು ಹೇಳುತ್ತಾರೆ –** ರಾಜನೇ! ಮನುಷ್ಯನಿಗೆ ಪ್ರಿಯವೆನಿಸಿದ ವಸ್ತು, ಪದಾರ್ಥಗಳನ್ನೇ ಪರಿಗ್ರಹ, ಸಂಗ್ರಹಮಾಡುತ್ತಾನೆ. ಅವೇ ಅವನ ದುಃಖಕ್ಕೆ ಕಾರಣವಾಗುತ್ತವೆ. ಆದರೆ ಅಕಿಂಚನನೂ, ಅಪರಿಗ್ರಹನೂ ಆದ ವಿದ್ವಾಂಸನು ಆನಂದವನ್ನು ಅನುಭವಿಸುತ್ತಾನೆ. ಆದ್ದರಿಂದ ಶ್ರೇಯೋಕಾಮಿ ಮನುಷ್ಯನು ಸಂಗ್ರಹದಿಂದ ದೂರವುಳಿಯಬೇಕು. ॥ ೧ ॥

ಸಾಮಿಷಂ ಕುರರಂ ಜಘ್ನುರ್ಬಲಿನೋ ಯೇ ನಿರಾಮಿಷಾಃ ।
ತದಾಮಿಷಂ ಪರಿತ್ಯಜ್ಯ ಸ ಸುಖಂ ಸಮವಿಂದತ ॥ ೨ ॥

(ಕುರರಪಕ್ಷಿಯ ದೃಷ್ಟಾಂತವನ್ನು ಕೊಟ್ಟು ಹೇಳುತ್ತಾರೆ –) ಯಾವುದೋ ಕುರರ ಪಕ್ಷಿಗೆ ಎಲ್ಲೋ ಒಂದು ಮಾಂಸದ ತುಂಡು ಸಿಕ್ಕಿತು. ಅದನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಹಾರುವಾಗ ಅದನ್ನು ನೋಡಿ ಬೇರೆ ಮಾಂಸದ ಲೋಭಿಪಕ್ಷಿಗಳು ಅದನ್ನು ಆಕ್ರಮಿಸಿ ಪೀಡಿಸತೊಡಗಿದವು. ಆಗ ಆ ಪಕ್ಷಿಯು ಮಾಂಸದ ತುಂಡನ್ನು ಎಸೆದುಬಿಡಲು ಆಕ್ರಮಣದಿಂದ ಪಾರಾಗಿ ಸುಖಿಯಾಯಿತು. ಇದರಿಂದ ಸಂಗ್ರಹಿಸುವುದನ್ನು ಆಪತ್ತಿನ ಮೂಲವೆಂಬುದನ್ನು ತಿಳಿಯಬೇಕು. ॥ ೨ ॥

ನ ಮೇ ಮಾನಾವಮಾನೌ ಸ್ತೋ ನ ಚಿಂತಾ ಗೇಹಪುತ್ರಿಣಾಮ್ ।
ಆತ್ಮಕ್ರೀಡ ಆತ್ಮರತಿರ್ವಿಚರಾಮೀಹ ಬಾಲವತ್ ॥ ೩ ॥

ದ್ವಾವೇವ ಚಿಂತಯಾ ಮುಕ್ತೌ ಪರಮಾನಂದ ಆಪ್ಲುತೌ ।
ಯೋ ವಿಮುಗ್ಧೋ ಜಡೋ ಬಾಲೋ ಯೋ ಗುಣೇಭ್ಯಃ ಪರಂ ಗತಃ ॥ ೪ ॥

(ಬಾಲಕನ (ಮಗು) ಉದಾಹರಣೆಯಿಂದ ತಿಳಿಸುತ್ತಿದ್ದಾರೆ –) ಸಣ್ಣ ಬಾಲಕನು ತಾನೇ-ತನ್ನಲ್ಲಿ ರಮಮಾಣವಾಗಿದ್ದು, ನಿಶ್ಚಿಂತವಾಗಿರುತ್ತಾನೆ. ಹಾಗೆಯೇ ನಾನೂ ನನ್ನ ಆತ್ಮಾನಂದದಲ್ಲಿ ಮಗ್ನನಾಗಿರುತ್ತೇನೆ. ಮಾನ ಬರಲೀ, ಅಪಮಾನವಾಗಲೀ, ಅದರ ಪರಿಣಾಮ ನನ್ನ ಮೇಲೆ ಏನೂ ಆಗುವುದಿಲ್ಲ ಹಾಗೂ ಮನೆ ಪರಿವಾರ ಚಿಂತೆಯೂ ನನಗಿಲ್ಲ. ಪ್ರಪಂಚದಲ್ಲಿ ಇಬ್ಬರೇ ಚಿಂತೆಯಿಂದ ಮುಕ್ತರಾಗಿದ್ದಾರೆ. ಒಂದು ಮುಗ್ಧ ಮಗು, ಇನ್ನೊಬ್ಬ ಗುಣಾತೀತ ಯೋಗಿ. ಇವರಿಬ್ಬರೂ ಪರಮ ಆನಂದದಲ್ಲಿ ಮಗ್ನರಾಗಿರುತ್ತಾರೆ. ॥ ೩-೪ ॥

ಕ್ವಚಿತ್ ಕುಮಾರೀ ತ್ವಾತ್ಮಾನಂ ವೃಣಾನಾನ್ ಗೃಹಮಾಗತಾನ್ ।
ಸ್ವಯಂ ತಾನರ್ಹಯಾಮಾಸ ಕ್ವಾಪಿ ಯಾತೇಷು ಬಂಧುಷು
॥ ೫ ॥

ತೇಷಾಮಭ್ಯವಹಾರಾರ್ಥಂ ಶಾಲೀನ್ರಹಸಿ ಪಾರ್ಥಿವ ।
ಅವಘ್ನಂತ್ಯಾಃ ಪ್ರಕೋಷ್ಠಸ್ಥಾಶ್ಚಕ್ರುಃ ಶಂಖಾಃ ಸ್ವನಂ ಮಹತ್
॥ ೬ ॥

ಸಾ ತಜ್ಜುಗುಪ್ಸಿತಂ ಮತ್ವಾ ಮಹತೀ ವ್ರೀಡಿತಾ ತತಃ ।
ಬಭಂಜೈಕೈಕಶಃ ಶಂಖಾನ್ ದ್ವೌದ್ವೌಪಾಣ್ಯೋರಶೇಷಯತ್
॥ ೭ ॥

ಉಭಯೋರಪ್ಯಭೂದ್ಘೋಷೋ ಹ್ಯವಘ್ನಂತ್ಯಾಃ ಸ್ಮ ಶಂಖಯೋಃ ।
ತತ್ರಾಪ್ಯೇಕಂ ನಿರಭಿದದೇಕಸ್ಮಾನ್ನಾಭವದ್ಧ್ವನಿಃ
॥ ೮ ॥

ಅನ್ವಶಿಕ್ಷಮಿಮಂ ತಸ್ಯಾ ಉಪದೇಶಮರಿಂದಮ ।
ಲೋಕಾನನುಚರನ್ನೇತಾನ್ ಲೋಕತತ್ತ್ವವಿವಿತ್ಸಯಾ
॥ ೯ ॥

ವಾಸೇ ಬಹೂನಾಂ ಕಲಹೋ ಭವೇದ್ವಾರ್ತಾ ದ್ವಯೋರಪಿ ।
ಏಕ ಏವ ಚರೇತ್ತಸ್ಮಾತ್ ಕುಮಾರ್ಯಾ ಇವ ಕಂಕಣಃ
॥ ೧೦ ॥

ಮನ ಏಕತ್ರ ಸಂಯುಜ್ಯಾಜ್ಜಿತಶ್ವಾಸೋ ಜಿತಾಸನಃ ।
ವೈರಾಗ್ಯಾಭ್ಯಾಸಯೋಗೇನ ಧ್ರಿಯಮಾಣಮತಂದ್ರಿತಃ
॥ ೧೧ ॥

ಯಸ್ಮಿನ್ ಮನೋ ಲಬ್ಧಪದಂ ಯದೇತ-
ಚ್ಛನೈಃ ಶನೈರ್ಮುಂಚತಿ ಕರ್ಮರೇಣೂನ್ ।
ಸತ್ತ್ವೇನ ವೃದ್ಧೇನ ರಜಸ್ತಮಶ್ಚ
ವಿಧೂಯ ನಿರ್ವಾಣಮುಪೈತ್ಯನಿಂಧನಮ್ ॥ ೧೨ ॥

ತದೈವಮಾತ್ಮನ್ಯವರುದ್ಧಚಿತ್ತೋ
ನ ವೇದ ಕಿಂಚಿದ್ಬಹಿರಂತರಂ ವಾ ।
ಯಥೇಷುಕಾರೋ ನೃಪತಿಂ ವ್ರಜಂತ-
ಮಿಷೌ ಗತಾತ್ಮಾ ನ ದದರ್ಶ ಪಾರ್ಶ್ವೇ ॥ ೧೩ ॥

(ಈಗ ಕುಮಾರಿಯೊಬ್ಬಳ ಉದಾಹರಣೆಯನ್ನು ತಿಳಿಸುತ್ತಾರೆ –) ಒಮ್ಮೆ ಕುಮಾರಿಯೋರ್ವಳ ಮನೆಗೆ ಕನ್ಯಾವರಣಕ್ಕಾಗಿ ಕೆಲವರು ಬಂದರು. ಅಂದು ಉಳಿದ ಮನೆಯವರೆಲ್ಲರೂ ಎಲ್ಲೋ ಹೊರಗೆ ಹೋಗಿದ್ದರು. ಅದಕ್ಕಾಗಿ ಅವಳು ಸ್ವತಃ ಅವರ ಆದರ-ಆತಿಥ್ಯ ಮಾಡಬೇಕಾಗಿ ಬಂತು. ॥ ೫ ॥

ರಾಜನೇ! ಬಂದ ಅತಿಥಿಗಳಿಗೆ ಭೋಜನಕ್ಕಾಗಿ ಅವಳು ಮನೆಯೊಳಗೆ ಏಕಾಂತದಲ್ಲಿ ಭತ್ತ ಕುಟ್ಟುತ್ತಿದ್ದಳು. ಆಗ ಅವಳು ತೊಟ್ಟುಕೊಂಡಿದ್ದ ಶಂಖದ ಬಳೆಗಳು ಒಂದಕ್ಕೊಂದು ತಗುಲಿ ಶಬ್ದಮಾಡತೊಡಗಿದವು. ಈ ಶಬ್ದವನ್ನು ನಿಂದಿತವೆಂದು ತಿಳಿದು ಕುಮಾರಿಗೆ ತುಂಬಾ ನಾಚಿಕೆಯಾಯಿತು.* ಅವಳು ಒಂದೊಂದಾಗಿ ಬಳೆಗಳನ್ನು ಒಡೆದು ಹಾಕಿ ಕೊನೆಗೆ ಎರಡೆರಡು ಬಳೆಗಳು ಉಳಿದವು. ॥ ೬-೭ ॥ ಅವಳು ಪುನಃ ಭತ್ತ ಕುಟ್ಟಲು ಪ್ರಾರಂಭಿಸಿದಳು. ಆದರೆ ಆ ಎರಡೆರಡು ಬಳೆಗಳೂ ಸದ್ದು ಮಾಡುತ್ತಿದ್ದವು. ಕೊನೆಗೆ ಅದರಲ್ಲಿ ಒಂದೊಂದನ್ನು ಒಡೆದುಹಾಕಿ ಕೇವಲ ಒಂದೊಂದೇ ಬಳೆ ಉಳಿಯಿತು. ಆಗ ಯಾವ ಸದ್ದೂ ಉಂಟಾಗುತ್ತಿರಲಿಲ್ಲ. ॥ ೮ ॥ ಶತ್ರುಸೂದನಾ! ಆಗಲೇ ವ್ಯವಹಾರವನ್ನು ತಿಳಿಯುವ ಇಚ್ಛೆಯಿಂದ ನಾನೂ ಅಲ್ಲಿಗೆ ತಲುಪಿದೆ. ಆಗ ನಾನು ಅವಳಿಂದ ಈ ಶಿಕ್ಷಣವನ್ನು ಪಡೆದುಕೊಂಡೆ. ಅನೇಕ ಜನರು ಒಟ್ಟಿಗೆ ಒಂದೆಡೆ ಇದ್ದರೆ ಕಲಹ ಉಂಟಾಗುತ್ತದೆ. ಇಬ್ಬರು ಜೊತೆಯಲ್ಲಿದ್ದರೂ ವ್ಯರ್ಥವಾದ ಮಾತುಗಳು ನಡೆಯುತ್ತವೆ. ಅದಕ್ಕಾಗಿ ಆ ಹೆಣ್ಣುಮಗಳ ಬಳೆಗಳಂತೆ ಒಬ್ಬನೇ ಸಂಚರಿಸಬೇಕು. ॥ ೯-೧೦ ॥

ರಾಜನೇ! ಆಸನ ಮತ್ತು ಪ್ರಾಣಾಯಾಮದ ಮೂಲಕ ಶ್ವಾಸವನ್ನು ಗೆದ್ದು ವೈರಾಗ್ಯ ಹಾಗೂ ಅಭ್ಯಾಸದಿಂದ ತನ್ನ ಮನವನ್ನು ವಶಪಡಿಸಿಕೊಳ್ಳಬೇಕು. ಮತ್ತೆ ಬಹಳ ಜಾಗರೂಕತೆಯಿಂದ ಅದನ್ನು ಒಂದು ಗುರಿಯಲ್ಲಿ ನೆಲೆಗೊಳಿಸಬೇಕು. ಇದನ್ನು ನಾನು ಬಾಣವನ್ನು ತಯಾರಿಸುವವನಿಂದ ಕಲಿತೆನು. ॥ ೧೧ ॥ ಪರಮಾನಂದ ಸ್ವರೂಪೀ ಪರಮಾತ್ಮನಲ್ಲಿ ಮನಸ್ಸು ಸ್ಥಿರವಾದಾಗ ಅದು ಕ್ರಮವಾಗಿ ಕರ್ಮವಾಸನೆಯ ಧೂಳನ್ನು ತೊಳೆದುಬಿಡುತ್ತದೆ. ಸತ್ತ್ವಗುಣದ ವೃದ್ಧಿಯಾಗುತ್ತದೆ. ರಜೋಗುಣ ಮತ್ತು ತಮೋಗುಣ ಇವುಗಳ ವೃತ್ತಿಗಳನ್ನು ತ್ಯಾಗಗೈದು ಮನಸ್ಸು – ಕಟ್ಟಿಗೆ ಇಲ್ಲದ ಅಗ್ನಿಯು ಶಾಂತವಾಗುವಂತೆ ಶಾಂತವಾಗುತ್ತದೆ. ॥ ೧೨ ॥ ಈ ವಿಧವಾಗಿ ಚಿತ್ತವು ತನ್ನ ಆತ್ಮನಲ್ಲೇ ಸ್ಥಿರ-ನಿರುದ್ಧನಾದವನಿಗೆ ಒಳ-ಹೊರಗೆ ಎಲ್ಲಿಯೂ ಯಾವುದೇ ಪದಾರ್ಥದ ಎಚ್ಚರವಿರುವುದಿಲ್ಲ. ಓರ್ವ ಕಮ್ಮಾರನು ಬಾಣವನ್ನು ತಯಾರಿಸುತ್ತಿದ್ದನು. ಆವನ ಬಳಿಯಿಂದಲೇ ಭೇರಿ, ನಗಾರಿ, ಕಹಳೆ ಮುಂತಾದ ವಾದ್ಯಗಳೊಂದಿಗೆ ರಾಜನ ಮೆರವಣಿಗೆ ಹೊರಟಿತ್ತು. ಆದರೆ ಅವನಿಗೆ ಇದರ ಅರಿವೇ ಇರದಷ್ಟು ತನ್ನ ಕಾಯಕದಲ್ಲಿ ತನ್ಮಯನಾಗಿ ಹೋಗಿದ್ದನು. ಇದನ್ನು ನಾನು ನೋಡಿದೆ. ॥ ೧೩ ॥

ಸರ್ಪದಿಂದ ನಾನು ಕಲಿತುದು – ಮುನಿಯಾದವನು ಒಬ್ಬಂಟಿಗನಾಗಿರಬೇಕು. (ಮಂಡಳಿ ಕಟ್ಟಿಕೊಳ್ಳಬಾರದು.) ಇರುವ ಜಾಗದಲ್ಲಿ ಮಮತೆ ಇರಬಾರದು. ಎಚ್ಚರಿಕೆಯಿಂದಿರಬೇಕು.

* ಏಕೆಂದರೆ, ಅದರಿಂದ ಅವಳು ಸ್ವತಃ ಭತ್ತಕುಟ್ಟುವುದು, ಅವರ ದರಿದ್ರತೆಯನ್ನು ಪ್ರದರ್ಶಿಸುತ್ತಿತ್ತು.

ಏಕಚಾರ್ಯನಿಕೇತಃ ಸ್ಯಾದಪ್ರಮತ್ತೋ ಗುಹಾಶಯಃ ।
ಅಲಕ್ಷ್ಯಮಾಣ ಆಚಾರೈರ್ಮುನಿರೇಕೋಽಲ್ಪಭಾಷಣಃ
॥ ೧೪ ॥

ಗೃಹಾರಂಭೋಽತಿದುಃಖಾಯ ವಿಫಲಶ್ಚಾಧ್ರುವಾತ್ಮನಃ ।
ಸರ್ಪಃ ಪರಕೃತಂ ವೇಶ್ಮ ಪ್ರವಿಶ್ಯ ಸುಖಮೇಧತೇ
॥ ೧೫ ॥

ಏಕೋ ನಾರಾಯಣೋ ದೇವಃ ಪೂರ್ವಸೃಷ್ಟಂ ಸ್ವಮಾಯಯಾ ।
ಸಂಹೃತ್ಯ ಕಾಲಕಲಯಾ ಕಲ್ಪಾಂತ ಇದಮೀಶ್ವರಃ
॥ ೧೬ ॥

ಏಕ ಏವಾದ್ವಿತೀಯೋಽಭೂದಾತ್ಮಾಧಾರೋಽಖಿಲಾಶ್ರಯಃ ।
ಕಾಲೇನಾತ್ಮಾನುಭಾವೇನ ಸಾಮ್ಯಂ ನೀತಾಸು ಶಕ್ತಿಷು ।
ಸತ್ತ್ವಾದಿಷ್ವಾದಿಪುರುಷಃ ಪ್ರಧಾನಪುರುಷೇಶ್ವರಃ
॥ ೧೭ ॥

ಪರಾವರಾಣಾಂ ಪರಮ ಆಸ್ತೇ ಕೈವಲ್ಯಸಂಜ್ಞಿತಃ ।
ಕೇವಲಾನುಭವಾನಂದಸಂದೋಹೋ ನಿರುಪಾಧಿಕಃ
॥ ೧೮ ॥

ಕೇವಲಾತ್ಮಾನುಭಾವೇನ ಸ್ವಮಾಯಾಂ ತ್ರಿಗುಣಾತ್ಮಿಕಾಮ್ ।
ಸಂಕ್ಷೋಭಯನ್ಸೃಜತ್ಯಾದೌ ತಯಾ ಸೂತ್ರಮರಿಂದಮ
॥ ೧೯ ॥

ತಾಮಾಹುಸ್ತ್ರಿಗುಣವ್ಯಕ್ತಿಂ ಸೃಜಂತೀಂ ವಿಶ್ವತೋಮುಖಮ್ ।
ಯಸ್ಮಿನ್ ಪ್ರೋತಮಿದಂ ವಿಶ್ವಂ ಯೇನ ಸಂಸರತೇ ಪುಮಾನ್
॥ ೨೦ ॥

ಯಥೋರ್ಣನಾಭಿರ್ಹೃದಯಾದೂರ್ಣಾಂ ಸಂತತ್ಯ ವಕ್ತ್ರತಃ ।
ತಯಾ ವಿಹೃತ್ಯ ಭೂಯಸ್ತಾಂ ಗ್ರಸತ್ಯೇವಂ ಮಹೇಶ್ವರಃ
॥ ೨೧ ॥

ಏಕಾಂತದಲ್ಲಿ ಅಥವಾ ಗುಹೆಯಲ್ಲಿ ವಾಸಿಸಬೇಕು. ತನ್ನ ಆಚಾರ-ವ್ಯವಹಾರದಿಂದ ತನ್ನನ್ನು ಯಾರ ಮುಂದೆಯೂ ಪ್ರಕಟಿಸಬಾರದು. ಮಿತಭಾಷಿಯಾಗಿರಬೇಕು. ॥ ೧೪ ॥ ಈ ಅನಿತ್ಯ ಶರೀರಕ್ಕಾಗಿ ಇಷ್ಟು ಕಷ್ಟಪಟ್ಟು ಮನೆಕಟ್ಟುವದು ವ್ಯರ್ಥವಾಗಿದೆ. ಇಲಿಯು ಮಾಡಿದ ಬಿಲದಲ್ಲೇ ಹಾವು ಹಾಯಾಗಿ ವಾಸಿಸುತ್ತದೆ. ಹಾಗೆಯೇ ಎಲ್ಲಾದರೂ ಇದ್ದು ತನ್ನ ನಿರ್ವಾಹವನ್ನು ಮಾಡಿಕೊಳ್ಳಬೇಕು. ॥ ೧೫ ॥

(ಈಗ ಜೇಡರಹುಳುವಿನ ದೃಷ್ಟಾಂತದಿಂದ ತಿಳಿಸುತ್ತಾರೆ –) ಅದ್ವಿತೀಯನಾದ, ದೇವದೇವನಾದ ನಾರಾಯಣನೇ ತನ್ನ ಮಾಯೆಯಿಂದ ವಿಶ್ವವನ್ನು ನಿರ್ಮಿಸುತ್ತಾನೆ. ಅವನೇ ಕಲ್ಪದ ಕೊನೆಯಲ್ಲಿ ತನ್ನ ಕಾಲಶಕ್ತಿಯ ಮೂಲಕ ಇದರ ಉಪಸಂಹಾರವನ್ನು ಮಾಡುತ್ತಾನೆ. ॥ ೧೬ ॥ ಆ ಪರಮಾತ್ಮನು ಓರ್ವನೇ ಆಗಿದ್ದಾನೆ. (ಅವನಲ್ಲಿ ಸಜಾತೀಯ ಜೀವ ಮುಂತಾದ ಭೇದಗಳಿಲ್ಲ) ಅದ್ವಿತೀಯನಾಗಿದ್ದಾನೆ. (ವಿಜಾತೀಯ ಪ್ರಧಾನಾದಿ ಭೇದದಿಂದ ರಹಿತನಾಗಿದ್ದಾನೆ.) ಹಾಗೂ (ನಿರುಪಾಧಿಕನಾಗಿದ್ದಾನೆ.) ಆದ್ದರಿಂದ ಸ್ವಗತಭೇದರಹಿತನಾಗಿದ್ದಾನೆ. ಈ ಪ್ರಕಾರ ಆ ಪರಮಾತ್ಮನು ಅಖಂಡರೂಪದಿಂದ ಸ್ವಯಂ ತಾನೇ ತಾನಾಗಿದ್ದಾನೆ. ಆ ಭಗವಾನ್ ಆದಿನಾರಾಯಣನೇ ಪ್ರಕೃತಿ-ಪುರುಷರ ನಿಯಾಮಕನಾಗಿದ್ದಾನೆ. ಅವನು ತನ್ನ ಕಾಲಶಕ್ತಿಯ ಮೂಲಕ ಈ ಸತ್ತ್ವಾದಿ ಶಕ್ತಿಗಳನ್ನು ಸಾಮ್ಯಾವಸ್ಥೆಗೆ ಒಯ್ದಾಗ ಏಕಮಾತ್ರ ಪರಮಾತ್ಮನೇ ಶೇಷವಾಗಿ ಇರುತ್ತಾನೆ. ॥ ೧೭ ॥ ಅವನು ಪರಮ ಶ್ರೇಷ್ಠನಾಗಿದ್ದು, ಪರಾ ಮತ್ತು ಅಪರಾ ಇವೆರಡೂ ಪ್ರಕೃತಿಗಳಿಂದ ಅತೀತನಾಗಿದ್ದಾನೆ. ಅವನನ್ನು ಕೈವಲ್ಯನೆಂದೂ ಹೇಳಲಾಗುತ್ತದೆ. ಅವನು ಕೇವಲಸ್ವರೂಪನೂ, ಅನುಭವ ಸ್ವರೂಪನೂ, ಆನಂದ ಪುಂಜನೂ ಆಗಿರುವನು. ಅಲ್ಲಿ ಪ್ರಕೃತಿಯ ಯಾವ ಉಪಾಧಿಯೂ ಇಲ್ಲ. ॥ ೧೮ ॥ ಅವನು ಕೇವಲ ತನ್ನ ಸಾಮರ್ಥ್ಯದಿಂದಲೇ ತನ್ನ ತ್ರಿಗುಣಾತ್ಮಿಕಾ ಮಾಯೆಯಲ್ಲಿ ಕ್ಷೋಭೆ ಉಂಟುಮಾಡುತ್ತಾನೆ. ಹೇ ಶತ್ರುಸೂದನಾ ! ಆ ಮಾಯೆಯ ಮೂಲಕ ಮೊಟ್ಟಮೊದಲು ಕ್ರಿಯಾಶಕ್ತಿ ಪ್ರಧಾನನಾದ ಸೂತ್ರಾತ್ಮನನ್ನು ರಚಿಸುತ್ತಾನೆ. ॥ ೧೯ ॥ ಆ ಕ್ರಿಯಾಶಕ್ತಿ ಪ್ರಧಾನ ಸೂತ್ರಾತ್ಮನೇ ತ್ರಿಗುಣಾತ್ಮಿಕಾ ಶಕ್ತಿಯನ್ನು ಮತ್ತು ಮೂರೂ ಗುಣಗಳನ್ನು ಅಭಿವ್ಯಕ್ತಗೊಳಿಸುತ್ತಾನೆ. ಹೀಗೆ ಅವನೇ ಇಡೀ ವಿಶ್ವವನ್ನು ನಿರ್ಮಿಸುತ್ತಾನೆ. ಈ ಎಲ್ಲ ವಿಶ್ವದಲ್ಲಿ ವ್ಯಾಪ್ತವಾಗಿರುವವನು ಅವನೇ. ಆದರೆ ಪುರುಷನು ಅದರಲ್ಲಿ ಅಹಂ ಬುದ್ಧಿಯಿಂದ ಅಲೆಯುತ್ತಾನೆ. ॥ ೨೦ ॥ ಜೇಡರಹುಳುವು ಹೃದಯದಿಂದ ಹೊರಬಂದ ನೂಲೆಳೆಯನ್ನು ಬಾಯಿಂದ ಹರಡಿ ಬಲೆಯನ್ನು ಕಟ್ಟಿ, ಅದರಲ್ಲೇ ಸ್ವೇಚ್ಛೆಯಿಂದ ವಿಹರಿಸುತ್ತಿದ್ದು, ಕಡೆಗೆ ತಾನೇ ಅದನ್ನು ನುಂಗಿಬಿಡುತ್ತದೆ. ಹಾಗೆಯೇ ಪರಮೇಶ್ವರನೂ ಈ ಜಗತ್ತನ್ನು ತನ್ನಿಂದಲೇ ಸೃಷ್ಟಿಸಿ, ಅದರಲ್ಲಿ ಜೀವರೂಪದಿಂದ ವಿಹರಿಸುತ್ತಾ ಕೊನೆಗೆ ಅದನ್ನು ತನ್ನಲ್ಲೇ ಲೀನಗೊಳಿಸಿಕೊಳ್ಳುತ್ತಾನೆ. ಇದರಿಂದ ಒಟ್ಟಾಗಿ ಈ ವಿಶ್ವವು ಪರಮಾತ್ಮನದೇ ಸ್ವರೂಪವಾಗಿದೆ ಎಂದು ತಿಳಿಯಬೇಕು. ॥ ೨೧ ॥

ಯತ್ರ ಯತ್ರ ಮನೋ ದೇಹೀ ಧಾರಯೇತ್ಸಕಲಂ ಧಿಯಾ ।
ಸ್ನೇಹಾದ್ದ್ವೇಷಾದ್ಭಯಾದ್ವಾಪಿ ಯಾತಿ ತತ್ತತ್ಸರೂಪತಾಮ್
॥ ೨೨ ॥

ಕೀಟಃ ಪೇಶಸ್ಕೃತಂ ಧ್ಯಾಯನ್ ಕುಡ್ಯಾಂ ತೇನ ಪ್ರವೇಶಿತಃ ।
ಯಾತಿ ತತ್ಸಾತ್ಮತಾಂ ರಾಜನ್ ಪೂರ್ವರೂಪಮಸಂತ್ಯಜನ್
॥ ೨೩ ॥

ಏವಂ ಗುರುಭ್ಯ ಏತೇಭ್ಯ ಏಷಾ ಮೇ ಶಿಕ್ಷಿತಾ ಮತಿಃ ।
ಸ್ವಾತ್ಮೋಪಶಿಕ್ಷಿತಾಂ ಬುದ್ಧಿಂ ಶೃಣು ಮೇ ವದತಃ ಪ್ರಭೋ
॥ ೨೪ ॥

ದೇಹೋ ಗುರುರ್ಮಮ ವಿರಕ್ತಿವಿವೇಕಹೇತು-
ರ್ಬಿಭ್ರತ್ ಸ್ಮ ಸತ್ತ್ವನಿಧನಂ ಸತತಾರ್ತ್ಯುದರ್ಕಮ್ ।
ತತ್ತ್ವಾನ್ಯನೇನ ವಿಮೃಶಾಮಿ ಯಥಾ ತಥಾಪಿ
ಪಾರಕ್ಯಮಿತ್ಯವಸಿತೋ ವಿಚರಾಮ್ಯಸಂಗಃ ॥ ೨೫ ॥

ಜಾಯಾತ್ಮಜಾರ್ಥಪಶುಭೃತ್ಯಗೃಹಾಪ್ತವರ್ಗಾನ್
ಪುಷ್ಣಾತಿ ಯತ್ಪ್ರಿಯಚಿಕೀರ್ಷುತಯಾ ವಿತನ್ವನ್ ।
ಸ್ವಾಂತೇ ಸಕೃಚ್ಛ್ರಮವರುದ್ಧಧನಃ ಸ ದೇಹಃ
ಸೃಷ್ಟ್ವಾಸ್ಯ ಬೀಜಮವಸೀದತಿ ವೃಕ್ಷಧರ್ಮಾ ॥ ೨೬ ॥

ಜಿಹ್ವೈಕತೋಽಮುಮಪಕರ್ಷತಿ ಕರ್ಹಿ ತರ್ಷಾ
ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।
ಘ್ರಾಣೋಽನ್ಯತಶ್ಚಪಲದೃಕ್ ಕ್ವಚ ಕರ್ಮಶಕ್ತಿ-
ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನಂತಿ ॥ ೨೭ ॥

ರಾಜನೇ ! ಪ್ರಾಣಿಯು ಸ್ನೇಹದಿಂದಾಗಲೀ, ದ್ವೇಷದಿಂದಾಗಲೀ ಅಥವಾ ಭಯದಿಂದಾಗಲೀ ತಿಳಿದು - ತಿಳಿದು ಏಕಾಗ್ರವಾಗಿ ತನ್ನ ಮನಸ್ಸನ್ನು ಯಾವುದರಲ್ಲಾದರೂ ತೊಡಗಿಸಿದರೆ, ಅದಕ್ಕೆ ಅದೇ ವಸ್ತುವಿನ ಸ್ವರೂಪ ಪ್ರಾಪ್ತವಾಗುತ್ತದೆ. ಇದನ್ನು ನಾನು ಭೃಂಗೀ (ಕಣಜದ) ಹುಳುವಿನಿಂದ ಕಲಿತುಕೊಂಡೆನು. ॥ ೨೨ ॥ ಕಣಜದ ಹುಳುವು ಯಾವುದೋ ಹುಳವನ್ನು ತಂದು ಅದನ್ನು ಮಣ್ಣಿನ ಗೂಡಿನಲ್ಲಿ ಮುಚ್ಚಿಡುತ್ತದೆ. ಹೊರಗಿನಿಂದ ತಾನು ಬಂದು ಪದೇ-ಪದೇ ಅದನ್ನು ಭೊಂ-ಭೊಂ ಮಾಡುತ್ತಾ ಹೆದರಿಸುತ್ತದೆ. ಒಳಗಿರುವ ಹುಳುವು ಕಣಜದ ಭಯದಿಂದ ಅದನ್ನೇ ಚಿಂತಿಸುತ್ತಾ ತನ್ನ ಹಿಂದಿನ ಶರೀರವನ್ನು ಬಿಡದೆ ತದ್ರೂಪವಾಗುತ್ತದೆ. ಅಂದರೆ ಕಣಜದ ಹುಳುವೇ ಆಗುತ್ತದೆ.* ಹೀಗೆಯೇ ಹೇಗೆಬೇಕಾದರೂ ಇರಲಿ ಪರಮಾತ್ಮನನ್ನು ಸತತ ಚಿಂತಿಸುವುದರಿಂದ ಮನುಷ್ಯನೂ ಅವಶ್ಯವಾಗಿ ಪರಮಾತ್ಮಸ್ವರೂಪನೇ ಆಗುವನು. ॥ ೨೩ ॥

ರಾಜನೇ ! ಈ ಪ್ರಕಾರ ನಾನು ಇಷ್ಟು ಗುರುಗಳಿಂದ ಈ ಶಿಕ್ಷಣವನ್ನು ಗ್ರಹಿಸಿದೆ. ಈಗ ನಾನು ನನ್ನ ಶರೀರದಿಂದ ಕಲಿತಿರುವುದನ್ನು ನಿನಗೆ ತಿಳಿಸುತ್ತೇನೆ. ಮನಗೊಟ್ಟು ಕೇಳು. ॥ ೨೪ ॥ ಈ ದೇಹವೂ ನನ್ನ ಗುರುವಾಗಿದೆ. ಇದು ನನಗೆ ವೈರಾಗ್ಯ ಮತ್ತು ವಿವೇಕವನ್ನು ಉಪದೇಶಿಸುತ್ತದೆ. ದೇಹವು ಜನ್ಮ-ಮರಣಶೀಲವಾಗಿದೆ ಎಂಬುದು ಪ್ರಸಿದ್ಧವೇ ಆಗಿದೆ. ಪರಿಣಾಮದಲ್ಲಿ ಇದರೊಂದಿಗೆ ನಿರಂತರ ದುಃಖವೇ ಅಂಟಿಕೊಂಡಿದೆ. ಆದರೆ ಈ ದೇಹದಿಂದಲೇ ನಾನು ಪರಮಾತ್ಮ ತತ್ತ್ವವನ್ನು ಚಿಂತಿಸುತ್ತೇನೆ, ಇದೇ ಇದರ ದೊಡ್ಡ ಲಾಭವಾಗಿದೆ. ಈ ದೇಹವನ್ನು ಒಂದು ದಿನ ನರಿ-ನಾಯಿಗಳು ತಿಂದುಬಿಡುವುವು ಇದು ನಿಶ್ಚಯವಾಗಿದೆ. ಆದ್ದರಿಂದ ಇದು ನಮ್ಮದಲ್ಲ, ಬೇರೆಯವರದೇ ಆಗಿದೆ. ಆದಕ್ಕಾಗಿ ನಾನು ದೇಹದಿಂದಲೂ ಅಸಂಗನಾಗಿ ಸಂಚರಿಸುತ್ತೇನೆ. ॥ ೨೫ ॥ ಮನುಷ್ಯನು ಪತ್ನೀ-ಪುತ್ರ, ಧನ-ಸಂಪತ್ತು, ಪಶು, ಸೇವಕರು, ಮನೆ, ಸಂಬಂಧಿಗಳು, ಇವುಗಳನ್ನು ಬೆಳೆಸುತ್ತಾ , ಅವುಗಳಿಂದ ಸುಖ ಪಡೆಯುವ ಇಚ್ಛೆಯಿಂದ ಅವರ ಲಾಲನೆ-ಪೋಷಣೆ ಮಾಡುತ್ತಾನೆ. ತುಂಬಾ ಕಷ್ಟಪಟ್ಟು ಧನವನ್ನು ಗಳಿಸುತ್ತಾನೆ. ಬೀಜವನ್ನಿತ್ತು ವೃಕ್ಷವು ನಾಶವಾಗುವಂತೆ ಕೊನೆಗೆ ಅವನು ಮುಂದಿನ ಜನ್ಮಕ್ಕಾಗಿ ಕರ್ಮಬೀಜವನ್ನು ನಿರ್ಮಿಸಿಕೊಂಡು ಮೃತ್ಯುಮುಖನಾಗುತ್ತಾನೆ. ಈ ವಿಧವಾಗಿ ದೇಹವು ನಾಶವಾದ ಬಳಿಕವೂ ಅವನ ದುಃಖಗಳ ಕೊನೆಯಾಗುವುದಿಲ್ಲ. ಜನ್ಮ-ಮರಣದ ಚಕ್ರದಲ್ಲಿ ಸುತ್ತುತ್ತಾ ಇರುತ್ತಾನೆ. ॥ ೨೬ ॥ ಮನೆಯ ಯಜಮಾನನನ್ನು ಅವನ ಅನೇಕ ಸವತಿಯರು ತಮ್ಮ-ತಮ್ಮ ಕಡೆಗೆ ಸೆಳೆದುಕೊಂಡು ಹರಿದು ಹಂಚಿ ಹಾಕಿಬಿಡುವಂತೆ, ದೇಹಾಭಿಮಾನೀ ಜೀವಿಯನ್ನು ಒಂದು ಕಡೆಯಿಂದ ಅವನನ್ನು ನಾಲಿಗೆ ಸೆಳೆದರೆ, ಕೆಲವೊಮ್ಮೆ ಬಾಯಾರಿಕೆ ಕಂಗೆಡಿಸುತ್ತದೆ. ಕೆಲವೊಮ್ಮೆ ಜನನೇಂದ್ರಿಯವು ಸಂಭೋಗಕ್ಕಾಗಿ ವ್ಯಾಕುಲಗೊಳಿಸುತ್ತದೆ. ಹಾಗೆಯೇ ಚರ್ಮ, ಉದರ, ಕಿವಿ ಇವು ತಮ್ಮ-ತಮ್ಮ ವಿಷಯಗಳತ್ತ ಸೆಳೆಯುತ್ತವೆ. ಮೂಗೂ ಪರಿಮಳದತ್ತ

* ಅದೇ ಶರೀರದಿಂದ ಚಿಂತಿಸಿದ ಸ್ವರೂಪವೇ ಪ್ರಾಪ್ತವಾಗುವುದಾದರೆ ಬೇರೆ ಶರೀರದಿಂದ ಹೇಳುವುದೇನಿದೆ ? ಅದಕ್ಕಾಗಿ ಮನುಷ್ಯನು ಬೇರೆ ವಸ್ತುಗಳ ಚಿಂತನೆಮಾಡದೆ ಭಗವತ್ಪ್ರಾಪ್ತಿಯ ಉದ್ದೇಶದಿಂದ ಕೇವಲ ಪರಮಾತ್ಮನನ್ನೇ ಚಿಂತಿಸುತ್ತಿರಬೇಕು.

ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾಽಽತ್ಮಶಕ್ತ್ಯಾ
ವೃಕ್ಷಾನ್ಸರೀಸೃಪಪಶೂನ್ ಖಗದಂಶಮತ್ಸ್ಯಾನ್ ।
ತೈಸ್ತೈರತುಷ್ಟಹೃದಯಃ ಪುರುಷಂ ವಿಧಾಯ
ಬ್ರಹ್ಮಾವಲೋಕಧಿಷಣಂ ಮುದಮಾಪ ದೇವಃ ॥ ೨೮ ॥

ಲಬ್ಧ್ವಾ ಸುದುರ್ಲಭಮಿದಂ ಬಹುಸಂಭವಾಂತೇ
ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ ।
ತೂರ್ಣಂ ಯತೇತ ನಪತೇದನುಮೃತ್ಯು ಯಾವ-
ನ್ನಿಃಶ್ರೇಯಸಾಯ ವಿಷಯಃ ಖಲು ಸರ್ವತಃ ಸ್ಯಾತ್ ॥ ೨೯ ॥

ಏವಂ ಸಂಜಾತವೈರಾಗ್ಯೋ ವಿಜ್ಞಾನಾಲೋಕ ಆತ್ಮನಿ ।
ವಿಚರಾಮಿ ಮಹೀಮೇತಾಂ ಮುಕ್ತಸಂಗೋಽನಹಂಕೃತಿಃ ॥ ೩೦ ॥

ನ ಹ್ಯೇಕಸ್ಮಾತ್ ಗುರೋರ್ಜ್ಞಾನಂ ಸುಸ್ಥಿರಂ ಸ್ಯಾತ್ಸುಪುಷ್ಕಲಮ್ ।
ಬ್ರಹ್ಮೈತದದ್ವಿತೀಯಂ ವೈ ಗೀಯತೇ ಬಹುಧರ್ಷಿಭಿಃ ॥ ೩೧ ॥

*ಶ್ರೀಭಗವಾನುವಾಚ*

ಇತ್ಯುಕ್ತ್ವಾ ಸ ಯದುಂ ವಿಪ್ರಸ್ತಮಾಮಂತ್ರ್ಯ ಗಭೀರಧೀಃ ।
ವಂದಿತೋಽಭ್ಯರ್ಥಿತೋ ರಾಜ್ಞಾ ಯಯೌ ಪ್ರೀತೋ ಯಥಾಗತಮ್ ॥ ೩೨ ॥

ಅವಧೂತವಚಃ ಶ್ರುತ್ವಾ ಪೂರ್ವೇಷಾಂ ನಃ ಸ ಪೂರ್ವಜಃ ।
ಸರ್ವಸಂಗವಿನಿರ್ಮುಕ್ತಃ ಸಮಚಿತ್ತೋ ಬಭೂವ ಹ ॥ ೩೩ ॥

ಸೆಳೆದರೆ, ಚಂಚಲನೇತ್ರಗಳು ಸುಂದರರೂಪವನ್ನು ನೋಡಲು ಆಕರ್ಷಿಸುತ್ತವೆ. ಹೀಗೆ ಕರ್ಮೇಂದ್ರಿಯ – ಜ್ಞಾನೇಂದ್ರಿಯಗಳು ಈ ದೇಹಾಭಿಮಾನಿ ಜೀವಿಯನ್ನು ತಮ್ಮ-ತಮ್ಮ ವಿಷಯಗಳ ಕಡೆಗೆ ಆಕರ್ಷಿಸಿ ಅವನನ್ನು ಕಂಗೆಡಿಸುತ್ತವೆ. ॥ ೨೭ ॥ ಭಗವಂತನು ತನ್ನ ಅಚಿಂತ್ಯ ಶಕ್ತಿ ಮಾಯೆಯಿಂದ ವೃಕ್ಷ, ಸರೀಸೃಪ, ಪಶು, ಪಕ್ಷಿ, ನೊಣ, ಮೀನು ಮುಂತಾದ ಅನೇಕ ಪ್ರಕಾರದ ಯೋನಿಗಳನ್ನು ರಚಿಸಿದನು. ಆದರೆ ಅದರಿಂದ ಅವನಿಗೆ ಸಂತೋಷವಾಗಲಿಲ್ಲ, ಕೊನೆಗೆ ಅವನು ಮನುಷ್ಯಶರೀರವನ್ನು ಸೃಷ್ಟಿಸಿದನು. ಇದು ಬ್ರಹ್ಮಸಾಕ್ಷಾತ್ಕಾರ ಮಾಡಬಹುದಾದ ಬುದ್ಧಿಯಿಂದ ಕೂಡಿದೆ. ಇದನ್ನು ರಚಿಸಿ ಅವನಿಗೆ ಬಹಳ ಆನಂದವಾಯಿತು. ॥ ೨೮ ॥ ಈ ಮನುಷ್ಯಶರೀರವು ಅತ್ಯಂತ ದುರ್ಲಭವಾಗಿದೆ. ಅನೇಕ ಜನ್ಮಗಳ ಬಳಿಕ ಭಗವಂತನ ಅಸೀಮಕೃಪೆಯಿಂದ ಪ್ರಾಪ್ತವಾಗಿದೆ. ಇದರಿಂದ ಪರಮ ಪುರುಷಾರ್ಥಸ್ವರೂಪೀ ಪರಮಾತ್ಮನ ಪ್ರಾಪ್ತಿಯಾಗ ಬಲ್ಲದು. ಜೊತೆಗೆ ಇದು ಅನಿತ್ಯವೂ ಆಗಿದೆ. ಇಂತಹ ಅಮೂಲ್ಯ ಮನುಷ್ಯಜೀವನವನ್ನು ಪಡೆದ ಬಳಿಕ ಶರೀರವನ್ನು ಮೃತ್ಯುವು ಬಂದು ನುಂಗಿಬಿಡುವ ಮೊದಲೇ ಭಗವತ್ಪ್ರಾಪ್ತಿರೂಪೀ ತನ್ನ ಪರಮ ಶ್ರೇಯಸ್ಸನ್ನು ಮಾಡಿಕೊಳ್ಳುವುದರಲ್ಲೇ ಮನುಷ್ಯತ್ವ ವಿದೆ ಎಂದು ಬುದ್ಧಿವಂತರು ತಿಳಿಯಬೇಕು. ಏಕೆಂದರೆ, ವಿಷಯ ಭೋಗಗಳಾದರೋ ಎಲ್ಲ ಯೋನಿಗಳಲ್ಲಿಯೂ ಸಿಗುತ್ತವೆ. ಅದರಲ್ಲಿ ತಮ್ಮ ಅಮೂಲ್ಯ ಸಮಯವನ್ನು ಕಳೆಯ ಬಾರದು. ॥ ೨೯ ॥

ಎಲೈ ರಾಜನೇ! ಈ ವಿಧವಾಗಿ ನನಗೆ ವೈರಾಗ್ಯ ಉಂಟಾಯಿತು. ಅಂತಃಕರಣದಲ್ಲಿ ವಿಜ್ಞಾನದ ಪ್ರಕಾಶ ಹರಡಿಕೊಂಡಿತು. ಈಗ ನಾನು ಅಹಂಕಾರವನ್ನು ಬಿಟ್ಟು ಈ ಭೂತಲದಲ್ಲಿ ಸ್ವಚ್ಛಂದವಾಗಿ ವಿಚರಿಸುತ್ತೇನೆ. ॥ ೩೦ ॥ ಈ ಪ್ರಕಾರ ಒಬ್ಬನೇ ಗುರುವಿನಿಂದ ಪಡೆಯುವ ಜ್ಞಾನವು ಸುಸ್ಥಿರವೂ, ಪುಷ್ಕಳ ವಿಚಾರವುಳ್ಳದ್ದೂ ಆಗಿರುವುದಿಲ್ಲ, ಇದೆಲ್ಲವನ್ನು ನಾನು ನಿನಗೆ ಅರುಹಿದೆನು. ಒಂದೇ ಅದ್ವಿತೀಯ ಬ್ರಹ್ಮನ ಕುರಿತು ಋಷಿಗಳು ಅನೇಕ ರೀತಿಯಿಂದ ವರ್ಣಿಸಿರುವರು. ॥ ೩೧ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವನೇ! ಆಳವಾದ ಬುದ್ಧಿಯುಳ್ಳ ಅವಧೂತ ದತ್ತಾತ್ರೇಯರು ಯದು ರಾಜನಿಗೆ ಹೀಗೆ ಉಪದೇಶಿಸಿದರು. ಯದುವು ಅವರನ್ನು ಪೂಜಿಸಿ, ವಂದಿಸಿಕೊಂಡನು. ದತ್ತಾತ್ರೇಯರು ಅವನಿಂದ ಬೀಳ್ಕೊಂಡು ತುಂಬಾ ಸಂತೋಷವಾಗಿ ತಮ್ಮ ಇಚ್ಛಾನುಸಾರ ದಯಮಾಡಿಸಿದರು. ನಮ್ಮ ಪೂರ್ವಜರ ಪೂರ್ವಜನೂ ಆದ ಯದುರಾಜರು ಅವಧೂತ ದತ್ತಾತ್ರೇಯರ ಈ ಮಾತುಗಳನ್ನು ಆಲಿಸಿ ಸಮಸ್ತ ಆಸಕ್ತಿಗಳಿಂದ ಬಿಡುಗಡೆಹೊಂದಿ ಸಮದರ್ಶಿಗಳಾದರು. (ಹೀಗೆಯೇ ನೀನೂ ಕೂಡ ಸಮಸ್ತ ಆಸಕ್ತಿಗಳನ್ನು ಪರಿತ್ಯಜಿಸಿ ಸಮದರ್ಶಿಯಾಗಬೇಕು.) ॥ ೩೨-೩೩ ॥

*ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ನವಮೋಽಧ್ಯಾಯಃ ॥ ೯ ॥

# ಹತ್ತನೆಯ ಅಧ್ಯಾಯ

## ಅಸಾರವಾದ ಲೌಕಿಕ ಮತ್ತು ಪಾರಲೌಕಿಕವಾದ ಭೋಗಗಳ ನಿರೂಪಣೆ

ಶ್ರೀಭಗವಾನುವಾಚ

ಮಯೋದಿತೇಷ್ವವಹಿತಃ ಸ್ವಧರ್ಮೇಷು ಮದಾಶ್ರಯಃ ।
ವರ್ಣಾಶ್ರಮಕುಲಾಚಾರಮಕಾಮಾತ್ಮಾ ಸಮಾಚರೇತ್ ॥ ೧ ॥

ಅನ್ವೀಕ್ಷೇತ ವಿಶುದ್ಧಾತ್ಮಾ ದೇಹಿನಾಂ ವಿಷಯಾತ್ಮನಾಮ್ ।
ಗುಣೇಷು ತತ್ತ್ವಧ್ಯಾನೇನ ಸರ್ವಾರಂಭವಿಪರ್ಯಯಮ್ ॥ ೨ ॥

ಸುಪ್ತಸ್ಯ ವಿಷಯಾಲೋಕೋ ಧ್ಯಾಯತೋ ವಾ ಮನೋರಥಃ ।
ನಾನಾತ್ಮಕತ್ವಾದ್ವಿಫಲಸ್ತಥಾ ಭೇದಾತ್ಮಧೀರ್ಗುಣೈಃ ॥ ೩ ॥

ನಿವೃತ್ತಂ ಕರ್ಮ ಸೇವೇತ ಪ್ರವೃತ್ತಂ ಮತ್ಪರಸ್ತ್ಯಜೇತ್ ।
ಜಿಜ್ಞಾಸಾಯಾಂ ಸಂಪ್ರವೃತ್ತೋ ನಾದ್ರಿಯೇತ್ಕರ್ಮಚೋದನಾಮ್ ॥ ೪ ॥

ಯಮಾನಭೀಕ್ಷ್ಣಂ ಸೇವೇತ ನಿಯಮಾನ್ಮತ್ಪರಃ ಕ್ವಚಿತ್ ।
ಮದಭಿಜ್ಞಂ ಗುರುಂ ಶಾಂತಮುಪಾಸೀತ ಮದಾತ್ಮಕಮ್ ॥ ೫ ॥

ಅಮಾನ್ಯಮತ್ಸರೋ ದಕ್ಷೋ ನಿರ್ಮಮೋ ದೃಢಸೌಹೃದಃ ।
ಅಸತ್ವರೋಽರ್ಥಜಿಜ್ಞಾಸುರನಸೂಯುರಮೋಘವಾಕ್ ॥ ೬ ॥

ಜಾಯಾಪತ್ಯಗೃಹಕ್ಷೇತ್ರಸ್ವಜನದ್ರವಿಣಾದಿಷು ।
ಉದಾಸೀನಃ ಸಮಂ ಪಶ್ಯನ್ಸರ್ವೇಷ್ವರ್ಥಮಿವಾತ್ಮನಃ ॥ ೭ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ –** ಪ್ರಿಯ ಉದ್ಧವನೇ! ಸಾಧಕನಾದವನು ಎಲ್ಲ ರೀತಿಯಿಂದ ನನಗೆ ಶರಣಾಗಿ, ನನ್ನಿಂದ ಉಪದಿಷ್ಟವಾದ ಧರ್ಮಗಳನ್ನು ಜಾಗರೂಕತೆಯಿಂದ ಪಾಲನೆ ಮಾಡಬೇಕು. ನಿಷ್ಕಾಮ ಭಾವದಿಂದ ತಮ್ಮ ವರ್ಣ-ಆಶ್ರಮ ಹಾಗೂ ಕುಲಕ್ಕನುಸಾರ ಸದಾಚಾರವನ್ನು ಅನುಷ್ಠಾನ ಮಾಡಬೇಕು. ॥ ೧ ॥ ವಿಷಯಗಳಲ್ಲಿ ಮುಳುಗಿದ ಚಿತ್ತವುಳ್ಳ ಸಂಸಾರೀ ಜನರ ಎಲ್ಲ ಕರ್ಮಗಳ ಪರಿಣಾಮವು ವಿಪರೀತವೇ ಆಗುತ್ತದೆ. ಈ ಮಾತನ್ನು ಆಳವಾಗಿ ತಿಳಿದುಕೊಂಡು ಶುದ್ಧ ಅಂತಃಕರಣನಾಗಿ ಸಂಸಾರದಿಂದ ವಿಮುಖನಾಗಬೇಕು. ॥ ೨ ॥ ಮಲಗಿದ ಮನುಷ್ಯನು ಸ್ವಪ್ನಾವಸ್ಥೆಯಲಿ ವಿಷಯಗಳನ್ನು ಕಂಡು, ಎಚ್ಚರಗೊಂಡಾಗ ಅವನಿಗೆ ಅವುಗಳ ಮಿಥ್ಯತ್ವ ತಿಳಿದುಬರುತ್ತದೆ. ಹಾಗೆಯೇ ಜಾಗ್ರತ್ ಅವಸ್ಥೆಯಲ್ಲಿಯೂ ಮನಸ್ಸಿನಿಂದ ಮಾಡುವ ಸಂಕಲ್ಪ-ವಿಕಲ್ಪಗಳೆಲ್ಲವೂ ಮಿಥ್ಯೆಯೇ ಆಗಿದೆ. ಈ ನಾನಾತ್ವದ ಭ್ರಮೆಯು ಅಜ್ಞಾನದ ಕಾರಣದಿಂದಲೇ ಇದೆ. ॥ ೩ ॥ ಮನುಷ್ಯನು ನಿಷ್ಕಾಮ ಕರ್ಮವನ್ನು ಆಚರಿಸಬೇಕು. ಎಲ್ಲ ಕರ್ಮಗಳನ್ನು ಭಗವಂತನಿಗೆ ಅರ್ಪಿಸಿಬಿಡಬೇಕು. ಸಕಾಮ ಕರ್ಮವನ್ನು ಎಂದೂ ಮಾಡಬಾರದು. ಆತ್ಮ ಜ್ಞಾನದ ಉತ್ಕಟ ಇಚ್ಛೆ ಇದ್ದರೆ ಕರ್ಮಸಂಬಂಧೀ ವಿಧಾನವನ್ನು ಆದರಿಸಬಾರದು. ॥ ೪ ॥ ಯಮಗಳನ್ನು ಅಂದರೆ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ಇವನ್ನು ಪೂರ್ಣರೂಪದಿಂದ ಪಾಲಿಸಲಿ. ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ ಈ ನಿಯಮಗಳನ್ನೂ ಕೂಡ ಯಥಾಸಾಧ್ಯ ಪಾಲಿಸಲಿ. ಪರಮಾತ್ಮನಾದ ನನ್ನನ್ನು ತಿಳಿದಿರುವ ಶಾಂತಸ್ವರೂಪೀ ಗುರುವಿನ ಬಳಿಗೆ ಹೋಗಿ, ಗುರುವನ್ನು ನನ್ನ ಸ್ವರೂಪವೆಂದೇ ತಿಳಿಯಲಿ. ಯಾವ ರೀತಿಯ ಅಭಿಮಾನವನ್ನೂ ಪಡದಿರಲಿ. ಯಾವುದೇ ಮತ್ಸರದ ಭಾವ ಇರಿಸದಿರಲಿ. ಎಲ್ಲ ವಿಧದಿಂದ ಕುಶಲನಾಗಲಿ. ಮಮತಾ ರಹಿತನಾಗಲಿ. ಗುರುವಿನಲ್ಲಿ ಮತ್ತು ನನ್ನಲ್ಲಿ ಹೃತ್ಪೂರ್ವಕವಾಗಿ ಅನುರಾಗವಿರಲಿ. ತತ್ತ್ವದ ಜಿಜ್ಞಾಸುವಿನಲ್ಲಿ ಯಾವುದೇ ಬೇಸರಿಕೆ ಇರದಿರಲಿ. ಯಾರೊಂದಿಗೂ ದೋಷದೃಷ್ಟಿ ಇರದಿರಲಿ. ವ್ಯರ್ಥ ಹಾಗೂ ಅಸತ್ಯ ಭಾಷಣದಿಂದ ದೂರವಿರಲಿ. ॥ ೫-೬ ॥ ಈ ಪ್ರಕಾರ ಅಭ್ಯಾಸ ಮಾಡುತ್ತಾ ಮಾಡುತ್ತಾ ಸಮತೆಯಲ್ಲಿ ಅವನ ಸ್ಥಿತಿ ಉಂಟಾದಾಗ ಪತ್ನೀ ಪುತ್ರ, ಮನೆ, ಭೂಮಿ, ಬಂಧು-ಬಾಂಧವರು, ಧನ ಮುಂತಾದವುಗಳಲ್ಲಿ ಎಲ್ಲಿಯೂ ಅವನಿಗೆ ಆಸಕ್ತಿಯು ಉಳಿಯುವುದಿಲ್ಲ, ಮತ್ತೆ ಅವನು ತನ್ನ ಪದಾರ್ಥದಂತೆಯೇ ಎಲ್ಲದರಲ್ಲಿ ಸಮಭಾವವನ್ನಿಡುತ್ತಾ, ಎಲ್ಲರಿಂದ ಪೂರ್ಣವಾಗಿ ಉದಾಸೀನನಾಗಿ ಹೋಗುತ್ತಾನೆ. ॥ ೭ ॥

ವಿಲಕ್ಷಣಃ ಸ್ಥೂಲಸೂಕ್ಷ್ಮಾದ್ದೇಹಾದಾತ್ಮೇಕ್ಷಿತಾ ಸ್ವದೃಕ್ ।
ಯಥಾಗ್ನಿರ್ದಾರುಣೋ ದಾಹ್ಯಾದ್ದಾಹಕೋಽನ್ಯಃ ಪ್ರಕಾಶಕಃ
॥ ೮ ॥

ನಿರೋಧೋತ್ಪತ್ತ್ಯಣುಬೃಹನ್ನಾನಾತ್ವಂ ತತ್ಕೃತಾನ್ಗುಣಾನ್ ।
ಅಂತಃಪ್ರವಿಷ್ಟ ಆಧತ್ತ ಏವಂ ದೇಹಗುಣಾನ್ ಪರಃ
॥ ೯ ॥

ಯೋಽಸೌ ಗುಣೈರ್ವಿರಚಿತೋ
ದೇಹೋಽಯಂ ಪುರುಷಸ್ಯ ಹಿ ।
ಸಂಸಾರಸ್ತನ್ನಿಬಂಧೋಽಯಂ
ಪುಂಸೋ ವಿದ್ಯಾಚ್ಛಿದಾತ್ಮನಃ ॥ ೧೦ ॥

ತಸ್ಮಾಜ್ಜಿಜ್ಞಾಸಯಾಽಽತ್ಮಾನಮಾತ್ಮಸ್ಥಂ ಕೇವಲಂ ಪರಮ್ ।
ಸಂಗಮ್ಯ ನಿರಸೇದೇತದ್ವಸ್ತುಬುದ್ಧಿಂ ಯಥಾಕ್ರಮಮ್
॥ ೧೧ ॥

ಆಚಾರ್ಯೋಽರಣಿರಾದ್ಯಃ ಸ್ಯಾದಂತೇವಾಸ್ಯುತ್ತರಾರಣಿಃ ।
ತತ್ಸಂಧಾನಂ ಪ್ರವಚನಂ ವಿದ್ಯಾಸಂಧಿಃ ಸುಖಾವಹಃ
॥ ೧೨ ॥

ವೈಶಾರದೀ ಸಾತಿವಿಶುದ್ಧಬುದ್ಧಿ-
ರ್ಧುನೋತಿ ಮಾಯಾಂ ಗುಣಸಂಪ್ರಸೂತಾಮ್ ।
ಗುಣಾಂಶ್ಚ ಸಂದಹ್ಯ ಯದಾತ್ಮಮೇತತ್
ಸ್ವಯಂ ಚ ಶಾಮ್ಯತ್ಯಸಮಿದ್ಯಥಾಗ್ನಿಃ ॥ ೧೩ ॥

ಅಥೈಷಾಂ ಕರ್ಮಕರ್ತೄಣಾಂ
ಭೋಕ್ತೄಣಾಂ ಸುಖದುಃಖಯೋಃ ।
ನಾನಾತ್ವಮಥ ನಿತ್ಯತ್ವಂ
ಲೋಕಕಾಲಾಗಮಾತ್ಮನಾಮ್ ॥ ೧೪ ॥

ಆತ್ಮವು ಸ್ವಯಂ ಪ್ರಕಾಶಸ್ವರೂಪವಾಗಿದ್ದು, ಎಲ್ಲರ ಸಾಕ್ಷಿಯಾಗಿದೆ. ಸ್ಥೂಲ ಮತ್ತು ಸೂಕ್ಷ್ಮ ಇವೆರಡೂ ದೇಹಗಳಿಂದ ಖಂಡಿತವಾಗಿ ಭಿನ್ನನಾಗಿದ್ದಾನೆ. ಉರಿಯುವ ಕಟ್ಟಿಗೆಗಿಂತ ಅದನ್ನು ಸುಡುತ್ತಿರುವ ಅಗ್ನಿಯು ಭಿನ್ನವೇ ಆಗಿದೆ. ಹಾಗೆಯೇ ಇವೆಲ್ಲ ಶರೀರಗಳನ್ನು ಪ್ರಕಾಶಿಸುವ ಆತ್ಮನೂ ಕೂಡ ಈ ಶರೀರಗಳಿಂದ ಭಿನ್ನವಾಗಿದೆ. ॥ ೮ ॥ ಕಟ್ಟಿಗೆಯ ಸಂಬಂಧದ ಕಾರಣ ಅಗ್ನಿಯು ಕಟ್ಟಿಗೆಯ ಆಕಾರಕ್ಕನು ಸಾರ ಚಿಕ್ಕದಾಗಿ ದೊಡ್ಡದಾಗಿ ಕಾಣುತ್ತದೆ. ಕಟ್ಟಿಗೆಯು ಪೂರ್ಣ ವಾಗಿ ಸುಟ್ಟುಹೋದಾಗ ಅಗ್ನಿಯು ಶಾಂತವಾಗುವುದು ಮತ್ತು ಉರಿದಾಗ ಕಾಣಿಸಿಕೊಳ್ಳುವುದು ಮುಂತಾಗಿ ಕಂಡುಬರುತ್ತದೆ. ಆದರೆ ವಾಸ್ತವವಾಗಿ ಕಟ್ಟಿಗೆಯಿಂದ ಅಗ್ನಿಯು ಬೇರೆಯೇ ಆಗಿದೆ. ಹೀಗೆಯೇ ಆತ್ಮನೂ ಕೂಡ ದೇಹದ ಗುಣಗಳನ್ನು ಧರಿಸಿದಾಗ ದೇಹದ ವಿಕಾರಗಳು ಆದರಲ್ಲಿ ಆರೋಪಿತವಾಗುತ್ತದೆ. ॥ ೯ ॥

ಪುರುಷನ ಈ ಶರೀರವು ತ್ರಿಗುಣಗಳ ರಚನೆಯಾಗಿದೆ. ಈ ಗುಣಗಳಲ್ಲಿ ಅಹಂತೆ-ಮಮತೆಯ ಕಾರಣವೇ ಅವನು ಬಂಧಿತ ನಾಗಿದ್ದಾನೆ. ಅದು ಆತ್ಮನ ಜ್ಞಾನವನ್ನು ಮುಚ್ಚಿಬಿಡುತ್ತದೆ. ॥ ೧೦ ॥ ಆದ್ದರಿಂದ ತತ್ತ್ವವನ್ನು ತಿಳಿಯುವ ಇಚ್ಛೆಯನ್ನಿರಿಸಿಕೊಳ್ಳಬೇಕು. ಅದರಿಂದ ಆತ್ಮಸ್ವರೂಪದ ಬೋಧವಾಗುತ್ತದೆ. ಈ ಆತ್ಮನು ತನ್ನಲ್ಲೇ ಸ್ಥಿತನಾಗಿದ್ದಾನೆ, ಕೇವಲನಾಗಿದ್ದಾನೆ, ಶ್ರೇಷ್ಠನಾಗಿದ್ದಾನೆ. ಇದನ್ನು ಅರಿತುಕೊಂಡ ಬಳಿಕ ಅನಾತ್ಮ ಪದಾರ್ಥಗಳಲ್ಲಿ ಇರುವ ಸತ್ಯತೆಯ ಬುದ್ಧಿಯು ಕ್ರಮಶಃ ದೂರವಾಗುತ್ತಾ ಹೋಗುತ್ತದೆ. ॥ ೧೧ ॥

ಈ ವಿದ್ಯೆಯ ಜ್ಞಾನವನ್ನು ಪಡೆಯಲು ಗುರುವನ್ನೇ ಆಶ್ರಯಿಸಬೇಕು. ಅವರ ಬಳಿ ವಾಸಿಸಬೇಕು. ಅರಣಿಯನ್ನು ಕಡೆದು ಯಜ್ಞೇಶ್ವರನನ್ನು ಪ್ರಕಟಗೊಳಿಸುವಂತೆ ಇಲ್ಲಿಯೂ ಆಚಾರ್ಯನೇ ಅಧರಾರಣಿ, (ಕೆಳಗಿನದು) ಶಿಷ್ಯನೇ ಉತ್ತರಾರಣಿ (ಮೇಲಿನದು). ಆಚಾರ್ಯರ ಪ್ರವಚನವೇ ಅದರ ಮಂಥನದಂಡ. ಅದರಿಂದ ವಿದ್ಯಾರೂಪೀ ಅಗ್ನಿಯು ಪ್ರಕಟಗೊಳ್ಳುತ್ತದೆ. ಅದು ಅಜ್ಞಾನವನ್ನು ನಾಶಮಾಡಿ, ಪರಮಾನಂದವನ್ನು ಕರುಣಿಸುತ್ತದೆ. ॥ ೧೨ ॥ ಈ ಪ್ರಕಾರ ಅಭ್ಯಾಸಮಾಡುತ್ತಾ-ಮಾಡುತ್ತಾ ಬುದ್ಧಿಯು ಸೂಕ್ಷ್ಮವಾದಾಗ ಅತ್ಯಂತ ಶುದ್ಧವಾದ ಆ ಬುದ್ಧಿಯು ಮಾಯೆಯಿಂದ ಉಂಟಾಗುವ ಎಲ್ಲ ಗುಣಗಳನ್ನು ಭಸ್ಮಮಾಡಿಬಿಡುತ್ತದೆ. ಗುಣಗಳು ಭಸ್ಮವಾದಾಗ ಗುಣಗಳಿಂದ ಉಂಟಾದ ಈ ವಿಶ್ವವು ಅವನಿಗೆ ಉಳಿಯುವುದಿಲ್ಲ. ಅಗ್ನಿಯು ಇಂಧನಗಳನ್ನು ಭಸ್ಮಮಾಡಿ ಶಾಂತ ವಾಗುವಂತೆ, ಗುಣಗಳನ್ನು ಸುಟ್ಟು ಮತ್ತೆ ಆ ಬುದ್ಧಿಯು ಶಾಂತ ವಾಗುತ್ತದೆ. * ॥ ೧೩ ॥

ಕರ್ಮ ಮಾಡುವವರಲ್ಲಿ ಭಿನ್ನತೆ ಇದೆ ಎಂದು ಕದಾಚಿತ್ ಒಪ್ಪಿಕೊಂಡರೆ, ಅದಕ್ಕನುಸಾರ ಅವರ ಸುಖ-ದುಃಖಾದಿ ಫಲ ಗಳಲ್ಲಿಯೂ ಭಿನ್ನತೆ ಇದೆ ಹಾಗೂ ಅವರ ಕರ್ಮಗಳನುಸಾರ ಅವರ ಫಲಸ್ವರೂಪ ಸಿಗಬಹುದಾದ ಲೋಕ, ಅವುಗಳ ಭೋಗದ ಸಮಯ, ಆಯಾ ಕರ್ಮಗಳನ್ನು ವಿಧಾನ ಮಾಡುವ ಶಾಸ್ತ್ರಗಳು,

* ಸ್ವಯಂಪ್ರಕಾಶ ಜ್ಞಾನಸ್ವರೂಪೀ ಆತ್ಮನು ನಿತ್ಯನೂ, ಏಕನೂ ಆಗಿದ್ದಾನೆ ಎಂಬುದು ಸ್ಪಷ್ಟವಾಯಿತು. ಕರ್ತೃತ್ವ, ಭೋಕ್ತೃತ್ವ ಮುಂತಾದ ಧರ್ಮಗಳು ದೇಹಾಭಿಮಾನದ ಕಾರಣವಾಗಿವೆ. ಆತ್ಮನಲ್ಲದೆ ಇರುವುದೆಲ್ಲವೂ ಅನಿತ್ಯವೂ, ಮಾಯಾಮಯವಾಗಿವೆ. ಆದಕ್ಕಾಗಿ ಆತ್ಮಜ್ಞಾನ ಉಂಟಾಗುತ್ತಲೇ ಸಮಸ್ತ ವಿಪತ್ತುಗಳಿಂದ ಮುಕ್ತಿ ದೊರೆಯುತ್ತದೆ.

ಮನ್ಯಸೇ ಸರ್ವಭಾವಾನಾಂ ಸಂಸ್ಥಾ ಹ್ಯೌತ್ಪತ್ತಿಕೀ ಯಥಾ ।
ತತ್ತದಾಕೃತಿಭೇದೇನ ಜಾಯತೇ ಭಿದ್ಯತೇ ಚ ಧೀಃ
॥ ೧೫ ॥

ಏವಮಪ್ಯಂಗ ಸರ್ವೇಷಾಂ ದೇಹಿನಾಂ ದೇಹಯೋಗತಃ ।
ಕಾಲಾವಯವತಃ ಸಂತಿ ಭಾವಾ ಜನ್ಮಾದಯೋಽಸಕೃತ್
॥ ೧೬ ॥

ಅತ್ರಾಪಿ ಕರ್ಮಣಾಂ ಕರ್ತು-
ರಸ್ವಾತಂತ್ರ್ಯಂ ಚ ಲಕ್ಷ್ಯತೇ ।
ಭೋಕ್ತುಶ್ಚ ದುಃಖಸುಖಯೋಃ
ಕೋ ನ್ವರ್ಥೋ ವಿವಶಂ ಭಜೇತ್ ॥ ೧೭ ॥

ನ ದೇಹಿನಾಂ ಸುಖಂ ಕಿಂಚಿದ್ವಿದ್ಯತೇ ವಿದುಷಾಮಪಿ ।
ತಥಾ ಚ ದುಃಖಂ ಮೂಢಾನಾಂ ವೃಥಾಹಂಕರಣಂ ಪರಮ್
॥ ೧೮ ॥

ಯದಿ ಪ್ರಾಪ್ತಿಂ ವಿಘಾತಂ ಚ ಜಾನಂತಿ ಸುಖದುಃಖಯೋಃ ।
ತೇಽಪ್ಯದ್ಧಾ ನ ವಿದುರ್ಯೋಗಂ ಮೃತ್ಯುರ್ನ ಪ್ರಭವೇದ್ಯಥಾ
॥ ೧೯ ॥

ಕೋ ನ್ವರ್ಥಃ ಸುಖಯತ್ಯೇನಂ ಕಾಮೋ ವಾ ಮೃತ್ಯುರಂತಿಕೇ ।
ಆಘಾತಂ ನೀಯಮಾನಸ್ಯ ವಧ್ಯಸ್ಯೇವ ನ ತುಷ್ಟಿದಃ
॥ ೨೦ ॥

ಶ್ರುತಂ ಚ ದೃಷ್ಟವದ್ದುಷ್ಟಂ ಸ್ಪರ್ಧಾಸೂಯಾತ್ಯಯವ್ಯಯೈಃ ।
ಬಹ್ವಂತರಾಯಕಾಮತ್ವಾತ್ ಕೃಷಿವಚ್ಚಾಪಿ ನಿಷ್ಫಲಮ್
॥ ೨೧ ॥

ಅಂತರಾಯೈರವಿಹತೋ ಯದಿ ಧರ್ಮಃ ಸ್ವನುಷ್ಠಿತಃ ।
ತೇನಾಪಿ ನಿರ್ಜಿತಂ ಸ್ಥಾನಂ ಯಥಾ ಗಚ್ಛತಿ ತಚ್ಛೃಣು
॥ ೨೨ ॥

ಇಷ್ಟ್ವೇಹ ದೇವತಾ ಯಜ್ಞೈಃ ಸ್ವರ್ಲೋಕಂ ಯಾತಿ ಯಾಜ್ಞಿಕಃ ।
ಭುಂಜೀತ ದೇವವತ್ತತ್ರ ಭೋಗಾನ್ ದಿವ್ಯಾನ್ ನಿಜಾರ್ಜಿತಾನ್
॥ ೨೩ ॥

ಆದರಿಂದ ದೊರೆಯುವ ಶರೀರ ಇವೆಲ್ಲವೂ ಭಿನ್ನ-ಭಿನ್ನವಾಗಿವೆ. ಈ ಭಿನ್ನತೆಗೆ ಮಾನ್ಯತೆ ಕೊಟ್ಟರೆ ಹಾಗೂ ಎಲ್ಲ ವಸ್ತು, ಪ್ರಾಣಿ, ಪದಾರ್ಥ, ಪ್ರವಾಹರೂಪದಿಂದ ಉತ್ಪನ್ನವಾಗುತ್ತವೆ ಮತ್ತು ನಾಶವಾಗುತ್ತವೆ ಎಂದು ಒಪ್ಪಿಕೊಂಡರೆ ಇದರಿಂದ ಬುದ್ಧಿಯಲ್ಲಿ ನಾನಾತ್ವದ ಭ್ರಮೆಯೇ ಉಪಸ್ಥಿತವಾಗುತ್ತದೆ. ಏಕೆಂದರೆ, ಮನುಷ್ಯನು ಯಾವ ರೀತಿಯ ಸತ್ತ್ವಾದಿ ದೇವತೆಗಳನ್ನು ಆರಾಧಿಸುತ್ತಾನೋ, ಅವರ ಆಕೃತಿಗನುಸಾರ ಸತ್ತ್ವಾದಿ ಗುಣಗಳ ತಾರತಮ್ಯದಿಂದ ಅವನ ಬುದ್ಧಿಯೂ ಅಂತಹ ಗುಣಗಳಿಂದಲೇ ಕೂಡಿರುತ್ತದೆ. ಆದರೆ ಇವೆಲ್ಲವೂ ದೇಹಾಭಿಮಾನೀ ಜೀವರಿಗೆ ದೇಹದೊಂದಿಗೆ ಸಂಬಂಧ ಬೆಳೆಸುವುದೇ ಆಗಿದೆ. ಕಾಲದ ಪ್ರವಾಹದಿಂದ ಎಲ್ಲ ಪ್ರಾಣಿ, ಪದಾರ್ಥಗಳು ಪ್ರತಿಕ್ಷಣ ವಿನಾಶದತ್ತ ಸಾಗುತ್ತಿವೆ. ಕರ್ಮಮಾಡುವ ಜೀವಿಯೂ ಸ್ವತಂತ್ರನಲ್ಲ, ಅವನು ಸುಖ-ದುಃಖದ ಭೋಗದಲ್ಲಿಯೂ ಪರತಂತ್ರನಾಗಿದ್ದಾನೆ. ಪರತಂತ್ರನಲ್ಲದಿದ್ದರೆ ವಿವಶನಾಗಿ ಯಾರು ದುಃಖವನ್ನು ಅನುಭವಿಸಲು ಬಯಸುವನು? ಎಲ್ಲರೂ ಸುಖವನ್ನೇ ಬಯಸುವರು. ॥ ೧೪-೧೭ ॥ ವಿದ್ವಾಂಸನಾದರೂ ಕೂಡಾ ಸುಖಿಯಾಗಿಲ್ಲ ಎಂಬುದನ್ನು ನೋಡಲಾಗುತ್ತದೆ. ಹಾಗೆಯೇ ಮೂಢರಾದವರೂ ಕೂಡ ದುಃಖಿಗಳಾಗಿಲ್ಲ, ಇಂತಹ ಸ್ಥಿತಿಯಲ್ಲಿ ಅಹಂಕಾರ ಮಾಡುವುದು ವ್ಯರ್ಥವಾಗಿದೆ. ಸುಖ-ದುಃಖದ ಪ್ರಾಪ್ತಿ ಹಾಗೂ ಅದರ ನಾಶ ಹೇಗಾದೀತು ಎಂದು ತಿಳಿದುಕೊಂಡರೂ ಮೃತ್ಯುವನ್ನು ಎಂದು ಬಂದೀತು ಎಂಬುದಂತೂ ತಿಳಿಯಲಾಗುವುದಿಲ್ಲ. ಮೃತ್ಯುವು ಹೇಗೆ ಪರಿಹರಿಸಬಹುದು, ಇದೂ ಕೂಡ ಯಾರು ತಿಳಿಯಲಾರರು. ॥ ೧೮-೧೯ ॥ ಯಾರಿಗಾದರೂ ನೇಣುಶಿಕ್ಷೆಯಾಗಿ ಸಾಯುವವನೆಂದಾದರೆ ಅವನಿಗೆ ಯಾವುದೇ ಭೋಗ-ಸಾಮಗ್ರಿಯು ಸಂತುಷ್ಟಪಡಿಸಲಾರದು. ಹಾಗೆಯೇ ಮೃತ್ಯುವಾದರೋ ಪ್ರತಿಯೋರ್ವ ಮನುಷ್ಯನ ತಲೆಯ ಮೇಲೆ ಕುಣಿಯುತ್ತಿದೆ ಎಂದಾದರೆ ಯಾವ ವಸ್ತುವೂ ಈ ಮರಣಧರ್ಮಿಯನ್ನು ಹೇಗೆ ಸುಖಿಯಾಗಿಸಬಲ್ಲವು ? ॥ ೨೦ ॥

ಈ ಲೋಕದಂತೆಯೇ ಪರಲೋಕಗಳೂ ದೋಷಯುಕ್ತವೇ ಆಗಿವೆ. ಅಲ್ಲಿಯೂ ಸ್ಪರ್ಧೆ, ಅಸೂಯೆ, ನಿಧಾನವಾಗಿ ಕ್ಷೀಣವಾಗುವುದು ಮತ್ತು ನಾಶವಾಗುವುದು ಇವೆಲ್ಲವೂ ಇವೆ. ಪುಣ್ಯವು ಮುಗಿದಾಗ ಅಲ್ಲಿಂದಲೂ ಪತನವಿದ್ದೇ ಇದೆ. ರೈತನು ಪೈರನ್ನು ಬೆಳೆಸುತ್ತಾನೆ, ಆದರೆ ಅದು ಅತಿವೃಷ್ಟಿ, ಅನಾವೃಷ್ಟಿ ಮುಂತಾದ ಈತಿಬಾಧೆಗಳಿಂದ ನಾಶವಾಗಿ ಹೋಗುತ್ತದೆ. ಹಾಗೆಯೇ ಸ್ವರ್ಗಾದಿ ಕಾಮನೆಯಿಂದ ಮನುಷ್ಯನು ಮಾಡುವ ಪ್ರಯಾಸಗಳಲ್ಲಿಯೂ ಅನೇಕ ರೀತಿಯ ವಿಘ್ನಗಳು ಎದುರಾಗುತ್ತವೆ. ಆದರಿಂದ ಅವೂ ನಾಶವಾಗುತ್ತವೆ. ॥ ೨೧ ॥ ಒಂದೊಮ್ಮೆ ನಿರ್ವಿಘ್ನತೆಯಿಂದ ಚೆನ್ನಾಗಿ ಯಜ್ಞಾದಿ ಅನುಷ್ಠಾನವು ಸಾಂಗವಾಗಿ ನಡೆದು, ಅವನು ಊರ್ಧ್ವಲೋಕವನ್ನು ಪಡೆದುಕೊಂಡರೂ ಅವನ ಮುಂದಿನ ಗತಿಯ ಮಾತನ್ನು ಕೇಳು. ॥ ೨೨ ॥ ಯಜ್ಞ ಮಾಡುವ ಮನುಷ್ಯನು ಯಜ್ಞದ ಮೂಲಕ ದೇವತೆಗಳನ್ನು ಆರಾಧಿಸಿ ಸ್ವರ್ಗಕ್ಕೆ ಹೋಗುತ್ತಾನೆ ಮತ್ತು ಅಲ್ಲಿ ತನ್ನ ಪುಣ್ಯಕರ್ಮಗಳ ಮೂಲಕ ಗಳಿಸಿದ ದಿವ್ಯ ಭೋಗಗಳನ್ನು ದೇವತೆಗಳಂತೆ ಭೋಗಿಸುತ್ತಾನೆ. ॥ ೨೩ ॥ ಅವನಿಗೆ ಅವನ ಪುಣ್ಯಗಳನುಸಾರ

ಸ್ವಪುಣ್ಯೋಪಚಿತೇ ಶುಭ್ರೇ ವಿಮಾನ ಉಪಗೀಯತೇ ।
ಗಂಧರ್ವೈರ್ವಿಹರನ್ ಮಧ್ಯೇ ದೇವೀನಾಂ ಹೃದ್ಯವೇಷಧೃಕ್ ॥ ೨೪ ॥

ಸ್ತ್ರೀಭಿಃ ಕಾಮಗಯಾನೇನ ಕಿಂಕಿಣೀಜಾಲಮಾಲಿನಾ ।
ಕ್ರೀಡನ್ ನ ವೇದಾತ್ಮಪಾತಂ ಸುರಾಕ್ರೀಡೇಷು ನಿರ್ವೃತಃ ॥ ೨೫ ॥

ತಾವತ್ಪ್ರಮೋದತೇ ಸ್ವರ್ಗೇ ಯಾವತ್ಪುಣ್ಯಂ ಸಮಾಪ್ಯತೇ ।
ಕ್ಷೀಣಪುಣ್ಯಃ ಪತತ್ಯರ್ವಾಗನಿಚ್ಛನ್ ಕಾಲಚಾಲಿತಃ ॥ ೨೬ ॥

ಯದ್ಯಧರ್ಮರತಃ ಸಂಗಾದಸತಾಂ ವಾಜಿತೇಂದ್ರಿಯಃ ।
ಕಾಮಾತ್ಮಾ ಕೃಪಣೋ ಲುಬ್ಧಃ ಸ್ತ್ರೈಣೋ ಭೂತವಿಹಿಂಸಕಃ ॥ ೨೭ ॥

ಪಶೂನವಿಧಿನಾಽಽಲಭ್ಯ ಪ್ರೇತಭೂತಗಣಾನ್ಯಜನ್ ।
ನರಕಾನವಶೋ ಜಂತುರ್ಗತ್ವಾ ಯಾತ್ಯುಲ್ಬಣಂ ತಮಃ ॥ ೨೮ ॥

ಕರ್ಮಾಣಿ ದುಃಖೋದರ್ಕಾಣಿ ಕುರ್ವನ್ದೇಹೇನ ತೈಃ ಪುನಃ ।
ದೇಹಮಾಭಜತೇ ತತ್ರ ಕಿಂ ಸುಖಂ ಮರ್ತ್ಯಧರ್ಮಿಣಃ ॥ ೨೯ ॥

ಲೋಕಾನಾಂ ಲೋಕಪಾಲಾನಾಂ ಮದ್ಭಯಂ ಕಲ್ಪಜೀವಿನಾಮ್ ।
ಬ್ರಹ್ಮಣೋಽಪಿ ಭಯಂ ಮತ್ತೋ ದ್ವಿಪರಾರ್ಧಪರಾಯುಷಃ ॥ ೩೦ ॥

ಗುಣಾಃ ಸೃಜಂತಿ ಕರ್ಮಾಣಿ ಗುಣೋಽನುಸೃಜತೇ ಗುಣಾನ್ ।
ಜೀವಸ್ತು ಗುಣಸಂಯುಕ್ತೋ ಭುಂಕ್ತೇ ಕರ್ಮಫಲಾನ್ಯಸೌ ॥ ೩೧ ॥

ಯಾವತ್ ಸ್ಯಾದ್ಗುಣವೈಷಮ್ಯಂ ತಾವನ್ನಾನಾತ್ವಮಾತ್ಮನಃ ।
ನಾನಾತ್ವಮಾತ್ಮನೋ ಯಾವತ್ಪಾರತಂತ್ರ್ಯಂ ತದೈವ ಹಿ ॥ ೩೨ ॥

ಒಂದು ಹೊಳೆಯುವ ವಿಮಾನ ದೊರೆಯುತ್ತದೆ ಮತ್ತು ಅದರ ಮೂಲಕ ಸುರ-ಸುಂದರಿಯರೊಂದಿಗೆ ವಿಹರಿಸುತ್ತಾನೆ. ಗಂಧರ್ವರು ಅವನ ಗುಣಗಳನ್ನು ಗಾನಮಾಡುತ್ತಾರೆ. ಅವನ ರೂಪ ಲಾವಣ್ಯವನ್ನು ನೋಡಿ ಬೇರೆಯವರ ಮನಸ್ಸು ಆಕರ್ಷಿತವಾಗುತ್ತದೆ. ॥ ೨೪ ॥ ಅವನ ವಿಮಾನವು ಅವನು ಬಯಸಿದಲ್ಲಿಗೆ ಕೊಂಡು ಹೋಗುತ್ತದೆ. ಅದರ ಘಂಟೆಗಳ ಧ್ವನಿಗಳು ಎಲ್ಲ ದಿಕ್ಕುಗಳನ್ನು ಪ್ರತಿಧ್ವನಿಸುತ್ತವೆ. ಅವನು ಅಪ್ಸರೆಯರೊಂದಿಗೆ ನಂದನವನ ಮುಂತಾದ ದೇವತೆಗಳ ವಿಹಾರ ಸ್ಥಳಗಳಲ್ಲಿ ಕ್ರೀಡಿಸುತ್ತಾ ಇರುವಾಗ ಅವನಿಗೆ ಈಗ ನನ್ನ ಪುಣ್ಯವು ಮುಗಿದುಹೋದೀತು ಹಾಗೂ ನಾನು ಇಲ್ಲಿಂದ ತಳ್ಳಲ್ಪಡುವೆನೆಂಬ ಮಾತಿನ ಅರಿವು ಕೂಡ ಇರದಷ್ಟು ಮೈಮರೆಯುತ್ತಾನೆ. ॥ ೨೫ ॥ ಅವನ ಪುಣ್ಯಗಳು ಶೇಷವಾಗಿರುವತನಕ ಅವನು ಸ್ವರ್ಗದಲ್ಲಿ ಸಂತೋಷಪಡುತ್ತಾನೆ. ಪುಣ್ಯವೂ ಕ್ಷೀಣವಾಗುತ್ತಲೇ ಇಚ್ಛೆ ಇಲ್ಲದಿದ್ದರೂ ಅವನನ್ನು ಕಾಲದಮೂಲಕ ಕೆಳಗೆ ತಳ್ಳಲ್ಪಡುತ್ತಾನೆ. ॥ ೨೬ ॥

ಯಾವನಾದರೂ ಮನುಷ್ಯನು ದುಷ್ಟರ ಸಂಗತಿಯಲ್ಲಿ ಬಿದ್ದು ಅಧರ್ಮಪರಾಯಣನಾದರೆ, ತನ್ನ ಇಂದ್ರಿಯಗಳಿಗೆ ವಶನಾದರೆ, ಸ್ವಚ್ಛಂದವಾಗಿ ವಿಹರಿಸತೊಡಗಿದರೆ, ಲೋಭಿಯಾದರೆ, ಲಂಪಟನಾದರೆ, ಪ್ರಾಣಿಗಳನ್ನು ಸತಾಯಿಸುತ್ತಿದ್ದರೆ. ವಿಧಿ-ವಿರುದ್ಧ ಪಶುಬಲಿಯನ್ನಿತ್ತು ಭೂತ-ಪ್ರೇತಗಳ ಉಪಾಸನೆಯಲ್ಲಿ ತೊಡಗಿದರೆ, ಅವನು ಪರವಶನಾಗಿ ಘೋರ ಅಂಧಕಾರಪೂರ್ಣ ನರಕಕ್ಕೆ ಹೋಗಬೇಕಾಗುತ್ತದೆ. ॥ ೨೭-೨೮ ॥ ಸಕಾಮ ಕರ್ಮಗಳೆಲ್ಲದರ ಫಲವು ದುಃಖವೇ ಆಗಿದೆ. ಶರೀರದಲ್ಲಿ ಅಹಂತೆ-ಮಮತೆಯನ್ನಿಟ್ಟು ಅದರಲ್ಲೇ ತೊಡಗಿರುವ ಜೀವಿಗೆ ಜನ್ಮ-ಮರಣದ ಚಕ್ರದಿಂದ ಬಿಡುಗಡೆ ಸಿಗುವುದಿಲ್ಲ. ಇಂತಹ ಸ್ಥಿತಿಯಲ್ಲಿ ಮೃತ್ಯುಧರ್ಮಿಯಾದ ಜೀವಿಗೆ ಆ ಸಕಾಮ ಕರ್ಮಗಳಿಂದ ಯಾವ ಸುಖ ಸಿಗಬಹುದು ? ಲೋಕ ಮತ್ತು ಲೋಕಪಾಲರ ಆಯುಸ್ಸು ಕೂಡ ಕೇವಲ ಒಂದು ಕಲ್ಪವೇ ಆಗಿದೆ. ಅವರೂ ಕೂಡ ನನಗೆ ಭಯಪಡುವಾಗ, ಬೇರೆಯವರ ಮಾತೇನಿದೆ ? ಸ್ವಯಂ ಬ್ರಹ್ಮನ ಆಯುಸ್ಸು ಎರಡು ಪರಾರ್ಧವಾಗಿದೆ. ಇಷ್ಟು ದೀರ್ಘವಾದ ಆಯುಸ್ಸಿದ್ದರೂ ಅವನೂ ಕೂಡ ನನಗೆ ಭಯಪಡುತ್ತಾನೆ. ॥ ೨೯-೩೦ ॥ ಸತ್ತ್ವಾದಿ ಗುಣಗಳು ಇಂದ್ರಿಯಗಳನ್ನು ಅವುಗಳ ಕರ್ಮಗಳಲ್ಲಿ ಪ್ರೇರೇಪಿಸುತ್ತವೆ ಮತ್ತು ಇಂದ್ರಿಯಗಳು ಕರ್ಮಮಾಡುತ್ತವೆ. ಜೀವಿಯು ಅಜ್ಞಾನವಶನಾಗಿ ಸತ್ತ್ವ, ರಜ, ತಮ ಗುಣಗಳನ್ನು ಹಾಗೂ ಇಂದ್ರಿಯಗಳನ್ನು ತನ್ನ ಸ್ವರೂಪವೆಂದು ತಿಳಿದುಕೊಳ್ಳುತ್ತಾನೆ. ಅವುಗಳು ಮಾಡಿದ ಕರ್ಮಗಳೊಂದಿಗೆ ಸಂಬಂಧ ಬೆಳೆಸಿ ಸುಖ-ದುಃಖಗಳನ್ನು ಭೋಗಿಸತೊಡಗುತ್ತಾನೆ. ಗುಣಗಳ ವಿಷಮತೆ ಇರುವತನಕ ಅರ್ಥಾತ್ – ಶರೀರಾದಿಗಳಲ್ಲಿ ನಾನು-ನನ್ನದೆಂಬ ಅಭಿಮಾನವಿರುವತನಕ ಆತ್ಮನ ಏಕತ್ವದ ಅನುಭೂತಿ ಉಂಟಾಗುವುದಿಲ್ಲ, ನಾನಾತ್ವದ ಭ್ರಮೆ ಅಳಿಯುವುದಿಲ್ಲ. ಈ ಅಜ್ಞಾನಮೂಲ ಭ್ರಮದ ನಿವೃತ್ತಿ ಆಗುವವರೆಗೆ ಅವನು ಪರತಂತ್ರನೇ ಆಗಿರುವನು. ॥ ೩೧-೩೨ ॥

ಯಾವದಸ್ಯಾಸ್ವತಂತ್ರತ್ವಂ ತಾವದೀಶ್ವರತೋ ಭಯಮ್ ।
ಯ ಏತತ್ಸಮುಪಾಸೀರಂಸ್ತೇ ಮುಹ್ಯಂತಿ ಶುಚಾರ್ಪಿತಾಃ
॥ ೩೩ ॥

ಕಾಲ ಆತ್ಮಾಽಽಗಮೋ ಲೋಕಃ ಸ್ವಭಾವೋ ಧರ್ಮ ಏವ ಚ ।
ಇತಿ ಮಾಂ ಬಹುಧಾ ಪ್ರಾಹುರ್ಗುಣವ್ಯತಿಕರೇ ಸತಿ
॥ ೩೪ ॥

ಉದ್ಧವ ಉವಾಚ

ಗುಣೇಷು ವರ್ತಮಾನೋಽಪಿ ದೇಹಜೇಷ್ವನಪಾವೃತಃ ।
ಗುಣೈರ್ನ ಬಧ್ಯತೇ ದೇಹೀ ಬಧ್ಯತೇ ವಾ ಕಥಂ ವಿಭೋ
॥ ೩೫ ॥

ಕಥಂ ವರ್ತೇತ ವಿಹರೇತ್ಕೈರ್ವಾ ಜ್ಞಾಯೇತ ಲಕ್ಷಣೈಃ ।
ಕಿಂ ಭುಂಜೀತೋತ ವಿಸೃಜೇಚ್ಛಯೀತಾಸೀತ ಯಾತಿ ವಾ
॥ ೩೬ ॥

ಏತದಚ್ಯುತ ಮೇ ಬ್ರೂಹಿ ಪ್ರಶ್ನಂ ಪ್ರಶ್ನವಿದಾಂ ವರ ।
ನಿತ್ಯಮುಕ್ತೋ ನಿತ್ಯಬದ್ಧ ಏಕ ಏವೇತಿ ಮೇ ಭ್ರಮಃ
॥ ೩೭ ॥

ಪರತಂತ್ರತೆ ಇರುವ ತನಕ ಈಶ್ವರನಿಂದ ಭಯವಿದ್ದೇ ಇರುತ್ತದೆ. ಈ ಪ್ರಕಾರದ ಗುಣ-ಧರ್ಮಗಳಲ್ಲಿ ಬಿದ್ದುಕೊಂಡಿರುವವನಿಗೆ ಶೋಕ ಮತ್ತು ಮೋಹದ ಪ್ರಾಪ್ತಿ ಆಗುತ್ತಾ ಇರುತ್ತದೆ. ॥ ೩೩ ॥ ಪ್ರಿಯ ಉದ್ಧವನೇ! ಮಾಯೆಯ ಗುಣಗಳಲ್ಲಿ ಕ್ಷೋಭೆ ಉಂಟಾದಾಗ ಅವುಗಳ ವ್ಯಾವಹಾರಿಕ ಸತ್ತೆಯು ಅನೇಕವಾಗಿ ಕಂಡುಬರುತ್ತದೆ. ಕಾಲ, ಆತ್ಮಾ, ಆಗಮ (ವೇದ), ಲೋಕ, ಸ್ವಭಾವ ಮತ್ತು ಧರ್ಮ ಇವೆಲ್ಲವೂ ನಾನೇ ಆಗಿದ್ದೇನೆ. (ಹೀಗೆ ಇವೆಲ್ಲದರಲ್ಲಿ ನಾನಾತ್ವದ ಭಾವನೆಯನ್ನಿರಿಸದೆ ಇವೆಲ್ಲದರ ರೂಪದಲ್ಲಿ ಓರ್ವ ಪರಮಾತ್ಮನಾದ ನನ್ನನ್ನೇ ನೋಡಬೇಕು.) ॥ ೩೪ ॥

**ಉದ್ಧವನು ಕೇಳಿದನು** – ಭಗವಂತಾ! ಈ ಜೀವಿಯು ದೇಹದಿಂದ ಉಂಟಾಗುವ ಗುಣಗಳಲ್ಲಿ ಇದ್ದರೂ ಕೂಡ ಅವುಗಳಿಂದ ಮುಕ್ತಜೀವನ ಹೇಗೆ ನಡೆಸುತ್ತಾನೆ ಮತ್ತು ಆ ಗುಣಗಳಿಂದ ಹೇಗೆ ಬಂಧಿತನಾಗುವುದಿಲ್ಲ? ಹಾಗೆಯೇ ಬೇರೆಯವನು ಗುಣಗಳಿಂದ ಬದ್ಧನಾಗುತ್ತಾನೆ. ಇದು ಏಕೆ? ॥ ೩೫ ॥ ಬದ್ಧ ಅಥವಾ ಮುಕ್ತ ಪುರುಷನು ಹೇಗೆ ವರ್ತಿಸುತ್ತಾನೆ, ಅವನು ಹೇಗೆ ವಿಹರಿಸುತ್ತಾನೆ, ಅವನನ್ನು ಯಾವ ಲಕ್ಷಣಗಳಿಂದ ಗುರುತಿಸಲಾಗುತ್ತದೆ, ಹೇಗೆ ಊಟಮಾಡುತ್ತಾನೆ ಮತ್ತು ಹೇಗೆ ಮಲತ್ಯಾಗ ಇತ್ಯಾದಿ ಮಾಡುತ್ತಾನೆ, ಹೇಗೆ ಮಲಗುತ್ತಾನೆ, ಹೇಗೆ ಕುಳಿತುಕೊಳ್ಳುತ್ತಾನೆ ಹಾಗೂ ಹೇಗೆ ನಡೆಯುತ್ತಾನೆ? ॥ ೩೬ ॥ ಹೇ ಅಚ್ಯುತಾ! ಪ್ರಶ್ನೆಯ ಮರ್ಮವನ್ನು ತಿಳಿಯುವುದರಲ್ಲಿ ನೀನು ಶ್ರೇಷ್ಠನಾಗಿರುವೆ. ಆದಕ್ಕಾಗಿ ನೀನು ನನ್ನ ಪ್ರಶ್ನೆಗಳ ಉತ್ತರವನ್ನು ಕೊಡುವವನಾಗು. ಒಂದೇ ಆತ್ಮನು ನಿತ್ಯಬದ್ಧನೂ ಆಗಿದ್ದಾನೆ ಮತ್ತು ನಿತ್ಯಮುಕ್ತನೂ ಆಗಿದ್ದಾನೆ. ಈ ಮಾತಿನ ಕುರಿತು ನನಗೆ ಭ್ರಮೆ ಉಂಟಾಗುತ್ತಿದೆ. ॥ ೩೭ ॥

*ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ
ಭಗವದುದ್ಧವ ಸಂವಾದೇ ದಶಮೋಽಧ್ಯಾಯಃ ॥ ೧೦ ॥

# ಹನ್ನೊಂದನೆಯ ಅಧ್ಯಾಯ

## ಬದ್ಧ, ಮುಕ್ತ ಮತ್ತು ಭಕ್ತಜನರ ಲಕ್ಷಣಗಳು

ಶ್ರೀಭಗವಾನುವಾಚ

ಬದ್ಧೋ ಮುಕ್ತ ಇತಿ ವ್ಯಾಖ್ಯಾ
ಗುಣತೋ ಮೇ ನ ವಸ್ತುತಃ ।
ಗುಣಸ್ಯ ಮಾಯಾಮೂಲತ್ವಾನ್ನ
ಮೇ ಮೋಕ್ಷೋ ನ ಬಂಧನಮ್ ॥ ೧ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವನೇ! ಬದ್ಧ ಅಥವಾ ಮುಕ್ತನೆಂದು ಹೇಳುವುದು ಗುಣಗಳನ್ನು ಪರಿಗಣಿಸಿಯೇ ಆಗಿದೆ. ವಸ್ತುತಃ ನನ್ನ ಸ್ವರೂಪದಲ್ಲಿ ಅರ್ಥಾತ್ ಆತ್ಮನಲ್ಲಿ ಇವೆರಡು ಇಲ್ಲವೇ ಇಲ್ಲ. ಗುಣಗಳು ಮಾಯಾಮೂಲಕವಾಗಿವೆ. ಆತ್ಮಸ್ವರೂಪದಲ್ಲಿ ಬಂಧನವಾಗಲಿ, ಮೋಕ್ಷವಾಗಲಿ ಇಲ್ಲ. ॥ ೧ ॥ ಶೋಕ, ಮೋಹ, ಸುಖ, ದುಃಖ, ದೇಹಪ್ರಾಪ್ತಿ ಇವೆಲ್ಲವೂ ಮಾಯೆಯ ಕಾರಣದಿಂದಲೇ ಇದೆ.

ಶೋಕಮೋಹೌ ಸುಖಂ ದುಃಖಂ ದೇಹಾಪತ್ತಿಶ್ಚ ಮಾಯಯಾ ।
ಸ್ವಪ್ನೋ ಯಥಾಽಽತ್ಮನಃ ಖ್ಯಾತಿಃ ಸಂಸೃತಿರ್ನ ತು ವಾಸ್ತವೀ ॥ ೨ ॥

ವಿದ್ಯಾವಿದ್ಯೇ ಮಮ ತನೂ ವಿದ್ಧ್ಯುದ್ಧವ ಶರೀರಿಣಾಮ್ ।
ಮೋಕ್ಷಬಂಧಕರೀ ಆದ್ಯೇ ಮಾಯಯಾ ಮೇ ವಿನಿರ್ಮಿತೇ ॥ ೩ ॥

ಏಕಸ್ಯೈವ ಮಮಾಂಶಸ್ಯ ಜೀವಸ್ಯೈವ ಮಹಾಮತೇ ।
ಬಂಧೋಽಸ್ಯಾವಿದ್ಯಯಾನಾದಿರ್ವಿದ್ಯಯಾ ಚ ತಥೇತರಃ ॥ ೪ ॥

ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ ।
ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕಧರ್ಮಿಣಿ ॥ ೫ ॥

ಸುಪರ್ಣಾವೇತೌ ಸದೃಶೌ ಸಖಾಯೌ
ಯದೃಚ್ಛಯೈತೌ ಕೃತನೀಡೌ ಚ ವೃಕ್ಷೇ ।
ಏಕಸ್ತಯೋಃ ಖಾದತಿ ಪಿಪ್ಪಲಾನ್ನ-
ಮನ್ಯೋ ನಿರನ್ನೋಽಪಿ ಬಲೇನ ಭೂಯಾನ್ ॥ ೬ ॥

ಆತ್ಮಾನಮನ್ಯಂ ಚ ಸ ವೇದ ವಿದ್ವಾ-
ನಪಿಪ್ಪಲಾದೋ ನ ತು ಪಿಪ್ಪಲಾದಃ ।
ಯೋಽವಿದ್ಯಯಾ ಯುಕ್ ಸ ತು ನಿತ್ಯಬದ್ಧೋ
ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ ॥ ೭ ॥

ದೇಹಸ್ಥೋಽಪಿ ನ ದೇಹಸ್ಥೋ ವಿದ್ವಾನ್ ಸ್ವಪ್ನಾದ್ಯಥೋತ್ಥಿತಃ ।
ಅದೇಹಸ್ಥೋಽಪಿ ದೇಹಸ್ಥಃ ಕುಮತಿಃ ಸ್ವಪ್ನದೃಗ್ಯಥಾ ॥ ೮ ॥

ಇಂದ್ರಿಯೈರಿಂದ್ರಿಯಾರ್ಥೇಷು ಗುಣೈರಪಿ ಗುಣೇಷು ಚ ।
ಗೃಹ್ಯಮಾಣೇಷ್ವಹಂಕುರ್ಯಾನ್ನ ವಿದ್ವಾನ್ ಯಸ್ತ್ವವಿಕ್ರಿಯಃ ॥ ೯ ॥

ಆತ್ಮನಿಗಾಗಿ ಸಂಸೃತಿಯ ಮಾತು ಹೇಳುವುದು ಯಥಾರ್ಥವಲ್ಲ, ಸ್ವಪ್ನದ ಮಾತಿನಂತೆ ಇದೆ. ಅರ್ಥಾತ್ – ಸ್ವಪ್ನವು ಮಿಥ್ಯೆಯಾಗಿರುವಂತೆ ಆತ್ಮನಿಗಾಗಿ ಸಂಸೃತಿ ಹೇಳುವುದು ಮಿಥ್ಯೆಯೇ ಆಗಿದೆ. ॥ ೨ ॥ ಎಲೈ ಉದ್ಧವಾ ! ವಿದ್ಯೆ ಮತ್ತು ಅವಿದ್ಯೆ ಇವೆರಡೂ ನನ್ನದೇ ಶಕ್ತಿಗಳಾಗಿವೆ. ಅದು ಶರೀರಧಾರಿಗಳಿಗೆ ಕ್ರಮಶಃ ಮೋಕ್ಷ ಹಾಗೂ ಬಂಧನಗಳನ್ನು ಕೊಡುವುದಾಗಿದೆ. ಇವೆರಡೂ ಅನಾದಿಯಾಗಿದ್ದು ನನ್ನ ಮಾಯೆಯಿಂದ ರಚಿತವಾಗಿವೆ. ॥ ೩ ॥ ಬುದ್ಧಿವಂತನೇ ! ಈ ಜೀವಿಯು ಏಕಮಾತ್ರ ನನ್ನದೇ ಅಂಶವಾಗಿದ್ದಾನೆ. ಅನಾದಿ ಅವಿದ್ಯೆಯು ಜೀವಿಯನ್ನು ಬಂಧಿಸುತ್ತದೆ, ಎರಡನೆಯದಾದ ನನ್ನ ವಿದ್ಯಾಶಕ್ತಿಯಿಂದ ಮೋಕ್ಷ ಉಂಟಾಗುತ್ತದೆ. ॥ ೪ ॥ ಬದ್ಧ ಮತ್ತು ಮುಕ್ತ ಎರಡರಲ್ಲಿರುವ ಪ್ರಭೇದವನ್ನು ಈಗ ನಾನು ನಿನಗೆ ಹೇಳುತ್ತೇನೆ. ಪ್ರಿಯ ಉದ್ಧವನೇ ! ಜೀವವು ನನ್ನದೇ ಸ್ವರೂಪವಾದ್ದರಿಂದ ವಾಸ್ತವವಾಗಿ ಆತ್ಮಾ ಮತ್ತು ಜೀವ ಇವೆರಡೂ ಒಂದೇ ಆಗಿದೆ. ಆದರೂ ಇವೆರಡರಲ್ಲಿ ಇರುವ ಪರಸ್ಪರ ಭೇದವನ್ನು ಕೇಳು. ನಾನು ಶಾಸಕ (ಆಳುವವನು)ನಾಗಿದ್ದೇನೆ, ಜೀವಿಯು ಶಾಸಿತಾ (ಆಳಲ್ಪಡುವವನು) ಆಗಿದ್ದಾನೆ. ನಾನು ಆನಂದಸ್ವರೂಪನಾಗಿದ್ದೇನೆ, ಜೀವಿಯು ಶೋಕ-ಮೋಹದಿಂದ ಗ್ರಸಿತನಾಗಿ ಸುಖೀ-ದುಃಖೀಯಾಗುತ್ತಾನೆ. ॥ ೫ ॥ ಈ ಶರೀರರೂಪೀ ವೃಕ್ಷದಲ್ಲಿ ಗೂಡು ಕಟ್ಟಿಕೊಂಡು ಜೊತೆಗೆ ವಾಸಿಸುವ ಇವೆರಡು ಪಕ್ಷಿಗಳಾಗಿವೆ. ಇಬ್ಬರೂ ಮಿತ್ರರಾಗಿದ್ದು ಸಮಾನ ಧರ್ಮಿಗಳಾಗಿವೆ. ಇವೆರಡರಲ್ಲಿ ಒಂದಾದರೋ ಈ ಶರೀರದ ಮೂಲಕ ಗೈದ ಕರ್ಮಗಳ ಫಲವನ್ನು ಉಪಭೋಗಿಸುತ್ತದೆ. ಆದರೆ ಅದು ಅವನ್ನು ಉಪಭೋಗಿಸಿಯೂ ಕ್ಷೀಣವಾಗುತ್ತದೆ. ಆದರೆ ಇನ್ನೊಂದು ಪಕ್ಷಿಯು ಆ ಫಲಗಳನ್ನು ಉಪಭೋಗಿಸುವುದಿಲ್ಲ, ಆದರೂ ಅದು ಸಾಕಷ್ಟು ಬಲಶಾಲಿಯಾಗಿದೆ. ॥ ೬ ॥ ಫಲವನ್ನು ಉಪಭೋಗಿಸದಿರುವವನು ತನ್ನನ್ನೂ ತಿಳಿಯುತ್ತಾನೆ ಹಾಗೂ ತನ್ನ ಸಖನಾದ ಇನ್ನೊಂದು ಜೀವವನ್ನೂ ತಿಳಿಯುತ್ತಾನೆ. ಆದರೆ ಭೋಗಗಳನ್ನು ಉಪಭೋಗಿಸುವವನು ತನ್ನನ್ನೂ ತಿಳಿಯುವುದಿಲ್ಲ, ತನ್ನ ಸಖನಾದ ಆತ್ಮಸ್ವರೂಪವನ್ನೂ ತಿಳಿಯುವುದಿಲ್ಲ. ಈ ವಿಧವಾಗಿ ಅವಿದ್ಯೆಯಲ್ಲಿ ತೊಡಗಿರುವವನು ನಿತ್ಯಬದ್ಧನಾಗಿದ್ದಾನೆ ಮತ್ತು ತನ್ನ ನಿಜಸ್ವರೂಪವನ್ನು ಅರಿಯುವವನು ನಿತ್ಯಮುಕ್ತನಾಗಿದ್ದಾನೆ. ॥ ೭ ॥ ತನ್ನ ಆತ್ಮಸ್ವರೂಪವನ್ನು ಅರಿತುಕೊಂಡವನು ಈ ದೇಹದಲ್ಲಿ ಇದ್ದರೂ ದೇಹದ ಗುಣಧರ್ಮಗಳಿಂದ ಅತೀತನಾಗಿದ್ದಾನೆ. ಏಕೆಂದರೆ, ಸ್ವಪ್ನ ಪ್ರಪಂಚವು ಮಿಥ್ಯೆಯಾಗಿರುವಂತೆ ಈ ಪ್ರಪಂಚವೆಲ್ಲವೂ ಮಾಯಾಮಯವಾಗಿದ್ದು ಮಿಥ್ಯೆಯೇ ಆಗಿದೆ ಎಂದು ಅವನು ತಿಳಿದಿರುವನು. ಆದರೆ ಆತ್ಮನಿಗೆ ಶರೀರದೊಂದಿಗೆ ಯಾವ ಸಂಬಂಧವೂ ಇರದಿದ್ದರೂ ಅಜ್ಞಾನಿಯು ಸ್ವಪ್ನದ ಪ್ರಪಂಚವನ್ನು ನೋಡಿ ಸುಖಿ-ದುಃಖಿಯಾಗುವಂತೆ ಈ ಜಗತ್ತನ್ನೂ ಸತ್ಯವೆಂದು ತಿಳಿದು ಸುಖೀ-ದುಃಖಿಯಾಗುತ್ತಾ ಇರುತ್ತಾನೆ. ॥ ೮ ॥ ಇಂದ್ರಿಯಗಳೂ ಕೂಡ ತ್ರಿಗುಣಗಳ ವಿಕಾರವಾಗಿವೆ. ಮತ್ತು ಈ ವಿಷಯ ಭೋಗಗಳೂ ತ್ರಿಗುಣಗಳದ್ದೇ ವಿಕಾರವಾಗಿವೆ. ಹೀಗೆ ಗುಣಗಳ ಮೂಲಕ ಗುಣಗಳ ವ್ಯವಹಾರ ಪರಸ್ಪರ ನಡೆಯುತ್ತಾ ಇರುತ್ತದೆ. ವಿದ್ವಾಂಸನು ತನ್ನ ಆತ್ಮಸ್ವರೂಪದಲ್ಲಿ ಸ್ಥಿತನಾದ್ದರಿಂದ ಇವುಗಳಿಂದ ಪೂರ್ಣವಾಗಿ ನಿರ್ವಿಕಾರಿಯಾಗಿರುತ್ತಾನೆ ಹಾಗೂ ನಾನು ಏನನ್ನೂ ಮಾಡುವುದಿಲ್ಲ ಎಂದು ತಿಳಿಯುತ್ತಾನೆ. ॥ ೯ ॥

ದೈವಾಧೀನೇ ಶರೀರೇಽಸ್ಮಿನ್ ಗುಣಭಾವ್ಯೇನ ಕರ್ಮಣಾ ।
ವರ್ತಮಾನೋಽಬುಧಸ್ತತ್ರ ಕರ್ತಾಸ್ಮೀತಿ ನಿಬದ್ಧ್ಯತೇ ॥ ೧೦ ॥

ಏವಂ ವಿರಕ್ತಃ ಶಯನೇ ಆಸನಾಟನಮಜ್ಜನೇ ।
ದರ್ಶನಸ್ಪರ್ಶನಘ್ರಾಣಭೋಜನಶ್ರವಣಾದಿಷು ॥ ೧೧ ॥

ನ ತಥಾ ಬದ್ಧ್ಯತೇ ವಿದ್ವಾಂಸ್ತತ್ರ ತತ್ರಾದಯನ್ಗುಣಾನ್ ।
ಪ್ರಕೃತಿಸ್ಥೋಽಪ್ಯಸಂಸಕ್ತೋ ಯಥಾ ಖಂ ಸವಿತಾನಿಲಃ ॥ ೧೨ ॥

ವೈಶಾರದ್ಯೇಕ್ಷಯಾಸಂಗಶಿತಯಾ ಛಿನ್ನಸಂಶಯಃ ।
ಪ್ರತಿಬುದ್ಧ ಇವ ಸ್ವಪ್ನಾನ್ನಾನಾತ್ವಾದ್ವಿನಿವರ್ತತೇ ॥ ೧೩ ॥

ಯಸ್ಯ ಸ್ಯುರ್ವೀತಸಂಕಲ್ಪಾಃ ಪ್ರಾಣೇಂದ್ರಿಯಮನೋಧಿಯಾಮ್ ।
ವೃತ್ತಯಃ ಸ ವಿನಿರ್ಮುಕ್ತೋ ದೇಹಸ್ಥೋಽಪಿ ಹಿ ತದ್ಗುಣೈಃ ॥ ೧೪ ॥

ಯಸ್ಯಾತ್ಮಾ ಹಿಂಸ್ಯತೇ ಹಿಂಸ್ರೈರ್ಯೇನ ಕಿಂಚಿದ್ಯದೃಚ್ಛಯಾ ।
ಅರ್ಚ್ಯತೇ ವಾ ಕ್ವಚಿತ್ತತ್ರ ನ ವ್ಯತಿಕ್ರಿಯತೇ ಬುಧಃ ॥ ೧೫ ॥

ನ ಸ್ತುವೀತ ನ ನಿಂದೇತ ಕುರ್ವತಃ ಸಾಧ್ವಸಾಧು ವಾ ।
ವದತೋ ಗುಣದೋಷಾಭ್ಯಾಂ ವರ್ಜಿತಃ ಸಮದೃಙ್ಮುನಿಃ ॥ ೧೬ ॥

ನ ಕುರ್ಯಾನ್ನ ವದೇತ್ಕಿಂಚಿನ್ನ ಧ್ಯಾಯೇತ್ ಸಾಧ್ವಸಾಧು ವಾ ।
ಆತ್ಮಾರಾಮೋಽನಯಾ ವೃತ್ತ್ಯಾ ವಿಚರೇಜ್ಜಡವನ್ಮುನಿಃ ॥ ೧೭ ॥

ಈ ಶರೀರವಾದರೋ ಪ್ರಾರಬ್ಧಕ್ಕಧೀನವಾಗಿದೆ. ಇಂದ್ರಿಯಗಳಿಂದ ಕರ್ಮಗಳು ಮಾಡಲ್ಪಡುತ್ತವೆ ಅವುಗಳ ಪ್ರೇರಕವು ಮನಸ್ಸಾಗಿದೆ. ಹೀಗೆ ಈ ಮನ ಮತ್ತು ಇಂದ್ರಿಯಗಳು ಎರಡೂ ಗುಣಗಳ ಕಾರ್ಯವೇ ಆಗಿದೆ. ವಾಸ್ತವವಾಗಿ ಗುಣಗಳೇ ಗುಣಗಳಲ್ಲಿ ವರ್ತಿಸುತ್ತವೆ. ಆದರೆ ಅಜ್ಞಾನಿಯು 'ನಾನು ಕರ್ತಾ ಆಗಿದ್ದೇನೆ' ಹೀಗೆ ತಿಳಿದು ಬಂಧಿತನಾಗುತ್ತಾನೆ. ॥ ೧೦ ॥

ಆದರೆ ವಿರಕ್ತಜ್ಞಾನಿಯು ಮಲಗುವುದು, ಕುಳಿತುಕೊಳ್ಳುವುದು, ತಿರುಗಾಡುವುದು, ಸ್ನಾನಮಾಡುವುದು, ನೋಡುವುದು, ಮುಟ್ಟುವುದು, ಮೂಸುವುದು, ತಿನ್ನುವುದು, ಕೇಳುವುದು ಮುಂತಾದ ಕ್ರಿಯೆಗಳನ್ನು ಮಾಡುತ್ತಿದ್ದರೂ ತನ್ನನ್ನು ಕರ್ತಾ ಭೋಕ್ತಾ ಎಂದು ತಿಳಿಯುವುದಿಲ್ಲ, ಅವನು ಪ್ರಕೃತಿಯಲ್ಲಿ ನೆಲೆಸಿಯೂ ಅದರಿಂದ ಪೂರ್ಣ ಅಸಂಗನಾಗಿದ್ದಾನೆ. ಅರ್ಥಾತ್ – ಅವನು ಆ ಕರ್ಮಗಳಿಂದ ಲಿಪ್ತನಾಗುವುದಿಲ್ಲ, ಆಕಾಶ, ಸೂರ್ಯ, ವಾಯು ಇವು ಯಾರ ಗುಣದೋಷಗಳನ್ನು ಗ್ರಹಿಸುವುದಿಲ್ಲ, ಎಲ್ಲಿಯೂ ಲಿಪ್ತವಾಗುವುದಿಲ್ಲ, ಹಾಗೆಯೇ ಜ್ಞಾನಿಯು ಪೂರ್ಣವಾಗಿ ನಿರ್ಲಿಪ್ತನಾಗಿರುತ್ತಾನೆ. ಹೀಗೆ ವೈರಾಗ್ಯದಿಂದ ತೀಕ್ಷ್ಣವಾದ ದೃಷ್ಟಿಯುಳ್ಳವನ ಎಲ್ಲ ಸಂಶಯಗಳು ದೂರವಾಗುತ್ತವೆ. ಸ್ವಪ್ನದಿಂದ ಎಚ್ಚತ್ತಮೇಲೆ ಸ್ವಪ್ನದ ಸೃಷ್ಟಿಯು ಕಣ್ಮರೆಯಾಗುವಂತೆ ವಿವೇಕ ಜ್ಞಾನದ ಮೂಲಕ ಅವನ ಎಲ್ಲ ನಾನಾತ್ವದ ಭ್ರಮೆಯು ದೂರವಾಗುತ್ತದೆ. ॥ ೧೧-೧೩ ॥ ಪ್ರಾಣ, ಇಂದ್ರಿಯಗಳು, ಮನಸ್ಸು, ಬುದ್ಧಿ ಇವುಗಳ ಸಂಕಲ್ಪಗಳಿಂದ ಪೂರ್ಣವಾಗಿ ನಿವೃತ್ತವಾದವನು, ಪ್ರಾಪಂಚಿಕ ಕರ್ಮಗಳನ್ನು ಮಾಡುವ ಪರಂಪರೆ ನಾಶವಾದವನು ದೇಹದಲ್ಲಿ ಸ್ಥಿತನಾಗಿದ್ದರೂ ಅದರ ಗುಣಗಳಿಂದ ಸರ್ವಥಾ ಅತೀತನಾಗಿರುತ್ತಾನೆ ಅರ್ಥಾತ್ ಅವನು ಗುಣಾತೀತ ಅವಸ್ಥೆಯನ್ನು ಪಡೆದುಕೊಳ್ಳುತ್ತಾನೆ. ॥ ೧೪ ॥

ಆ ತತ್ತ್ವಜ್ಞ ಮುಕ್ತ ಪುರುಷನ ಶರೀರಕ್ಕೆ ಬೇಕಾದರೆ ಹಿಂಸಕರು ಸತಾಯಿಸಿ ದುಃಖಕೊಟ್ಟರೂ, ಬೇಕಾದರೆ ಎಂದಾದರೂ, ಯಾರಾದರೂ ದೈವಯೋಗದಿಂದ ಪೂಜಿಸಿದರೆ, ಅವನು ಸತಾಯಿಸುವುದರಿಂದ ದುಃಖಿಯೂ, ಪೂಜೆಯಿಂದ ಸುಖಿಯೂ ಆಗುವುದಿಲ್ಲ. ॥ ೧೫ ॥ ಮುನಿಯಾದವನು ತನ್ನನ್ನು ಬೇಕಾದರೆ ಸ್ತುತಿಸಲಿ, ನಿಂದಿಸಲಿ, ಅವರನ್ನು ಒಳ್ಳೆಯವರೆಂದಾಗಲೀ, ಕೆಟ್ಟವರೆಂದಾಗಲೀ ಹೇಳುವುದಿಲ್ಲ, ಎಲ್ಲೆಡೆ ಸಮದೃಷ್ಟಿಯಿದ್ದು ಓರ್ವ ಪರಮಾತ್ಮನದೇ ಭಾವನೆವಿರಿಸಬೇಕು. ಯಾರಾದರೂ ಗುಣದೋಷಗಳ ವಿಷಯದಲ್ಲಿ ಚರ್ಚಿಸುತ್ತಿದ್ದರೆ ಅದರಿಂದ ದೂರವುಳಿಯಬೇಕು. ॥ ೧೬ ॥ ಹೀಗೆ ಮುನಿಯಾದವನು ತನ್ನ ಆತ್ಮನಲ್ಲೇ ತನ್ಮಯನಾಗಿರಲಿ. ಈ ರೀತಿಯಿಂದ ಪ್ರಕೃತಿಯಲ್ಲಿ ಸ್ಥಿತನಾಗಿದ್ದರೂ ಅವನು ಯಾರಿಗಾಗಿಯೂ ಒಳ್ಳೆಯದಾಗಲೀ, ಕೆಟ್ಟದಾಗಲಿ ಮಾತನಾಡದಿರಲಿ, ಹೇಳದಿರಲಿ, ಚಿಂತಿಸದಿರಲಿ, ಜಡನಂತೆ ವರ್ತಿಸಲಿ. ತನ್ನ ಗೂಢಭಾವವನ್ನು ಯಾರಲ್ಲಿಯೂ ಪ್ರಕಟಿಸದಿರಲಿ. ॥ ೧೭ ॥

ಶಬ್ದಬ್ರಹ್ಮಣಿ ನಿಷ್ಣಾತೋ ನ ನಿಷ್ಣಾಯಾತ್ಪರೇ ಯದಿ ।
ಶ್ರಮಸ್ತಸ್ಯ ಶ್ರಮಫಲೋ ಹ್ಯಧೇನುಮಿವ ರಕ್ಷತಃ ॥ ೧೮ ॥

ಗಾಂ ದುಗ್ಧದೋಹಾಮಸತೀಂ ಚ ಭಾರ್ಯಾಂ
ದೇಹಂ ಪರಾಧೀನಮಸತ್ಪ್ರಜಾಂ ಚ ।
ವಿತ್ತಂ ತ್ವತೀರ್ಥೀಕೃತಮಂಗ ವಾಚಂ
ಹೀನಾಂ ಮಯಾ ರಕ್ಷತಿ ದುಃಖದುಃಖೀ ॥ ೧೯ ॥

ಯಸ್ಯಾಂ ನ ಮೇ ಪಾವನಮಂಗ ಕರ್ಮ
ಸ್ಥಿತ್ಯುದ್ಭವಪ್ರಾಣನಿರೋಧಮಸ್ಯ ।
ಲೀಲಾವತಾರೇಪ್ಸಿತಜನ್ಮ ವಾ ಸ್ಯಾದ್
ವಂಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ ॥ ೨೦ ॥

ಏವಂ ಜಿಜ್ಞಾಸಯಾಪೋಹ್ಯ ನಾನಾತ್ವಭ್ರಮಮಾತ್ಮನಿ ।
ಉಪಾರಮೇತ ವಿರಜಂ ಮನೋ ಮಯ್ಯರ್ಪ್ಯ ಸರ್ವಗೇ ॥ ೨೧ ॥

ಯದ್ಯನೀಶೋ ಧಾರಯಿತುಂ ಮನೋ ಬ್ರಹ್ಮಣಿ ನಿಶ್ಚಲಮ್ ।
ಮಯಿ ಸರ್ವಾಣಿ ಕರ್ಮಾಣಿ ನಿರಪೇಕ್ಷಃ ಸಮಾಚರ ॥ ೨೨ ॥

ಶ್ರದ್ಧಾಲುರ್ಮೇ ಕಥಾಃ ಶೃಣ್ವನ್ ಸುಭದ್ರಾ ಲೋಕಪಾವನೀಃ ।
ಗಾಯನ್ನನುಸ್ಮರನ್ಕರ್ಮ ಜನ್ಮ ಚಾಭಿನಯನ್ಮುಹುಃ ॥ ೨೩ ॥

ಮದರ್ಥೇ ಧರ್ಮಕಾಮಾರ್ಥಾನಾಚರನ್ಮದಪಾಶ್ರಯಃ ।
ಲಭತೇ ನಿಶ್ಚಲಾಂ ಭಕ್ತಿಂ ಮಯ್ಯುದ್ಧವ ಸನಾತನೇ ॥ ೨೪ ॥

ಸತ್ಸಂಗಲಬ್ಧಯಾ ಭಕ್ತ್ಯಾ ಮಯಿ ಮಾಂ ಸ ಉಪಾಸಿತಾ ।
ಸ ವೈ ಮೇ ದರ್ಶಿತಂ ಸದ್ಭಿರಂಜಸಾ ವಿಂದತೇ ಪದಮ್ ॥ ೨೫ ॥

ಉದ್ಧವ ಉವಾಚ

ಸಾಧುಸ್ತವೋತ್ತಮಶ್ಲೋಕ ಮತಃ ಕೀದೃಗ್ವಿಧಃ ಪ್ರಭೋ ।
ಭಕ್ತಿಸ್ತ್ವಯ್ಯುಪಯುಜ್ಯೇತ ಕೀದೃಶೀ ಸದ್ಭಿರಾದೃತಾ ॥ ೨೬ ॥

ಏತನ್ಮೇ ಪುರುಷಾಧ್ಯಕ್ಷ ಲೋಕಾಧ್ಯಕ್ಷ ಜಗತ್ಪ್ರಭೋ ।
ಪ್ರಣತಾಯಾನುರಕ್ತಾಯ ಪ್ರಪನ್ನಾಯ ಚ ಕಥ್ಯತಾಮ್ ॥ ೨೭ ॥

ಆದರೆ ಪ್ರಿಯ ಉದ್ಧವನೇ! ವೇದದಲ್ಲಿ ಪಾರಂಗತನಾದ ವಿದ್ವಾಂಸನು ಪರಬ್ರಹ್ಮನ ಅನುಭವವು ಆಗದಿದ್ದರೆ, ಅವನ ಪರಿಶ್ರಮವು ಹಾಲುಕೊಡದ ಹಸುವನ್ನು ಸಾಕಿದಂತೆ ಇದೆ ಎಂದು ತಿಳಿಯಬೇಕು. ಅರ್ಥಾತ್ – ವ್ಯರ್ಥವೇ ಆಗಿದೆ. ॥ ೧೮ ॥

ಎಲೈ ಉದ್ಧವನೇ! ಹಾಲುಕೊಡದ ಹಸು, ಕುಲಟೆಯಾದ ಪತ್ನೀ, ಪರಾಧೀನದೇಹ, ದುಷ್ಟ ಸಂತತಿ,ಸತ್ಪಾತ್ರಕ್ಕೆ ದಾನಕೊಡದ ಧನ, ಭಗವಂತನ ನಾಮ-ರೂಪ-ಲೀಲೆ-ಧಾಮ ಮುಂತಾದ ಭಗವತ್ಸಂಬಂಧೀ ಚರ್ಚೆಯಿಲ್ಲದ ವಾಣೀ, ಇವುಗಳನ್ನು ಆಶ್ರಯಿಸಿದವನಿಗಾದರೋ ದುಃಖದ ಮೇಲೆ ದುಃಖವನ್ನೇ ಭೋಗಿಸಬೇಕಾಗುತ್ತದೆ. ॥ ೧೯॥ ನನ್ನ ಪವಿತ್ರ ಕರ್ಮಗಳ ಉಲ್ಲೇಖವಿಲ್ಲದ ವಾಣೀ, ಈ ಜಗತ್ತಿನ ಉತ್ಪತ್ತಿ , ಸ್ಥಿತಿ, ಸಂಹಾರಗೈವ ಭಗವಂತನ ಶಕ್ತಿಯ ನಿರೂಪಣೆಯಿಲ್ಲದ ವಾಣಿಯು, ಭಗವಂತನ ಬೇರೆ-ಬೇರೆ ಅವತಾರಗಳ, ಅವುಗಳ ಪವಿತ್ರಗುಣಗಳ, ಯಶೋಗಾನದ ವರ್ಣನೆ ಇಲ್ಲದಿರುವ ವಾಣಿಯು ವಂಧ್ಯೆಯೇ ಆಗಿದೆ. ಇಂತಹ ವಾಣಿಯನ್ನು ಜ್ಞಾನಿಗಳು ಆದರಿಸಬಾರದು. ॥ ೨೦ ॥

ಹೀಗೆ ತತ್ತ್ವದ ಜಿಜ್ಞಾಸೆಯಿಂದ ಜಗತ್ತಿನಲ್ಲಿ ಎಲ್ಲೆಡೆ ಓರ್ವ ಬ್ರಹ್ಮವನ್ನೇ ನೋಡಲಿ, ಆತ್ಮನಲ್ಲಿರುವ ನಾನಾತ್ವದ ಭ್ರಮೆಯು ಪೂರ್ಣವಾಗಿ ದೂರಾಗಿಸಲಿ, ಈ ಪ್ರಕಾರ ಶುದ್ಧವಾದ ಮನಸ್ಸನ್ನು ಸರ್ವವ್ಯಾಪೀ ಪರಮಾತ್ಮನಾದ ನನ್ನಲ್ಲಿ ತೊಡಗಿಸಲಿ, ಉಳಿದೆಲ್ಲದರಲ್ಲಿಯೂ ಉಪರಾಮನಾಗಲಿ. ॥ ೨೧ ॥ ಈ ವಿಧವಾಗಿ ಪರಮಾತ್ಮನಾದ ನನ್ನಲ್ಲಿ ನಿಶ್ಚಲರೂಪದಿಂದ ಮನಸ್ಸನ್ನು ತೊಡಗಿಸಲು ಅಸಮರ್ಥನಾದರೆ, ಮಾಡುವ ಎಲ್ಲ ಕ್ರಿಯೆಗಳನ್ನು ನಿರಪೇಕ್ಷನಾಗಿ ನನಗಾಗಿಯೇ ಮಾಡಲಿ. ॥ ೨೨ ॥ ಲೋಕಗಳನ್ನು ಪವಿತ್ರಗೊಳಿಸುವ ನನ್ನ ಶ್ರೇಯಸ್ಕರವಾದ ಕಥೆಗಳನ್ನು ಶ್ರದ್ಧಾಳುವಾದವನು ಶ್ರವಣಿಸಲಿ, ಕೀರ್ತಿಸಲಿ ಹಾಗೂ ಸ್ಮರಿಸಲಿ. ಹಾಗೆಯೇ ನನ್ನ ಅವತಾರದ (ರಾಮನವಮಿ, ಕೃಷ್ಣ-ಜನ್ಮಾಷ್ಟಮಿ ಮುಂತಾದ) ಲೀಲೆಗಳನ್ನು ಅಭಿನಯಿಸಲಿ. ॥ ೨೩ ॥ ಎಲೈ ಉದ್ಧವಾ! ಈ ಪ್ರಕಾರ ನನಗೆ ಶರಣಾಗಿ, ನನಗಾಗಿಯೇ ಧರ್ಮ, ಅರ್ಥ, ಕಾಮ ಇವುಗಳನ್ನು ಆಚರಿಸುತ್ತಿರುವ ನನ್ನ ಅನನ್ಯ ಪ್ರೇಮಿ ಭಕ್ತನು ಸನಾತನ ಪರಮಾತ್ಮನಾದ ನನ್ನಲ್ಲಿ ನಿಶ್ಚಲ ಭಕ್ತಿಯನ್ನು ಪಡೆದುಕೊಳ್ಳುತ್ತಾನೆ. ॥ ೨೪ ॥

ಸತ್ಸಂಗದಿಂದ ಭಕ್ತಿಯು ಪ್ರಾಪ್ತವಾಗುತ್ತದೆ. ಮತ್ತೆ ಅವನು ನನ್ನನ್ನು ಉಪಾಸಿಸುತ್ತಾನೆ. ಸಂತರು ಹೇಳಿದ ಮಾರ್ಗದಿಂದ ನಡೆದು ಅವನು ಸುಲಭವಾಗಿ ನನ್ನನ್ನು ಪಡೆದುಕೊಳ್ಳುತ್ತಾನೆ. ॥ ೨೫ ॥

**ಉದ್ಧವನು ಕೇಳಿದನು** – ಪವಿತ್ರಕೀರ್ತಿಯುಳ್ಳ ಭಗವಂತನೇ! ನಿನ್ನ ಅಭಿಪ್ರಾಯದಲ್ಲಿ ಸಂತರ ಲಕ್ಷಣಗಳು ಯಾವುವು? ಸಂತಜನರು ಆದರಿಸುತ್ತಿರುವ ನಿನ್ನ ಕುರಿತಾದ ಭಕ್ತಿಯನ್ನು ಹೇಗೆ ಮಾಡಬೇಕು? ನೀನು ದಯಮಾಡಿ ತಿಳಿಸುವವನಾಗು. ॥ ೨೬ ॥ ಭಗವಂತನೇ! ನೀನೇ ಬ್ರಹ್ಮಾದಿ ಶ್ರೇಷ್ಠ ದೇವತೆಗಳಿಗೆ, ಸತ್ಯಾದಿ ಲೋಕಗಳಿಗೆ, ಚರಾಚರ ಜಗತ್ತಿಗೆ ಒಡೆಯನಾಗಿರುವೆ. ನಾನು ವಿನೀತ, ಪ್ರೇಮಿ, ಶರಣಾಗತನಾದ ನಿನ್ನ ಭಕ್ತನಾಗಿರುವೆನು. ನೀನು ನನಗೆ ಭಕ್ತಿ ಹಾಗೂ ಭಕ್ತರ ರಹಸ್ಯವನ್ನು ಹೇಳುವವನಾಗು. ॥ ೨೭ ॥

ತ್ವಂ ಬ್ರಹ್ಮ ಪರಮಂ ವ್ಯೋಮ ಪುರುಷಃ ಪ್ರಕೃತೇಃ ಪರಃ ।
ಅವತೀರ್ಣೋಽಸಿ ಭಗವನ್ ಸ್ವೇಚ್ಛೋಪಾತ್ತಪೃಥಗ್ವಪುಃ
॥ ೨೮ ॥

ಪರಮಾತ್ಮಾ! ನೀನು ಪ್ರಕೃತಿಗಿಂತ ಅತೀತನಾದ ಪುರುಷೋತ್ತಮನು ಹಾಗೂ ಚಿದಾಕಾಶಸ್ವರೂಪೀ ಬ್ರಹ್ಮನಾಗಿರುವೆ ಎಂಬುದನ್ನು ನಾನು ಬಲ್ಲೆನು. ನಿನ್ನಿಂದ ಭಿನ್ನವಾದುದು ಯಾವುದೂ ಇಲ್ಲ, ಆದರೂ ನೀನು ಲೀಲೆಗಾಗಿ ಸ್ವೇಚ್ಛೆಯಿಂದಲೇ ಈ ಬೇರೆಯಾದ ಕೃಷ್ಣರೂಪದಿಂದ ಅವತರಿಸಿರುವೆ. ಆದ್ದರಿಂದ ವಾಸ್ತವವಾಗಿ ನೀನೇ ಭಕ್ತಿ ಮತ್ತು ಭಕ್ತರ ರಹಸ್ಯವನ್ನು ತಿಳಿಸಬಲ್ಲೆ. ॥ ೨೮॥

ಶ್ರೀಭಗವಾನುವಾಚ

ಕೃಪಾಲುರಕೃತದ್ರೋಹಸ್ತಿತಿಕ್ಷುಃ ಸರ್ವದೇಹಿನಾಮ್ ।
ಸತ್ಯಸಾರೋಽನವದ್ಯಾತ್ಮಾ ಸಮಃ ಸರ್ವೋಪಕಾರಕಃ
॥ ೨೯ ॥

**ಭಗವಾನ್ ಶ್ರೀಕೃಷ್ಣನೆಂದನು** – ಪ್ರಿಯ ಉದ್ಧವನೇ! ನನ್ನ ಭಕ್ತನು ಕೃಪೆಯಮೂರ್ತಿಯಾಗಿರುತ್ತಾನೆ. ಅವನು ಯಾವುದೇ ಪ್ರಾಣಿಯಲ್ಲಿ ವೈರಭಾವವಿರಿಸುವುದಿಲ್ಲ ಹಾಗೂ ಭಾರೀ ದೊಡ್ಡ ದುಃಖವನ್ನೂ ಕೂಡ ಸಂತೋಷವಾಗಿ ಸಹಿಸುತ್ತಾನೆ. ಸತ್ಯವೇ ಅವನ ಜೀವನದ ಜೀವಾಳವಾಗಿದೆ. ಅವನ ಮನಸ್ಸಿನಲ್ಲಿ ಯಾವ ವಿಧವಾದ ಪಾಪವಾಸನೆಯು ಎಂದೂ ಉಂಟಾಗುವುದಿಲ್ಲ. ಅವನು ಸಮದರ್ಶಿಯಾಗಿದ್ದು, ಎಲ್ಲರ ಒಳಿತನ್ನೇ ಮಾಡುವವನಾಗಿರುತ್ತಾನೆ. ॥ ೨೯ ॥ ಅವನ ಬುದ್ಧಿಯು ಕಾಮನೆಗಳಿಂದ ಕಲುಷಿತವಾಗುವುದಿಲ್ಲ. ಅವನು ಸಂಯಮಿಯೂ, ಮೃದು ಸ್ವಭಾವದವನೂ, ಪವಿತ್ರನೂ ಆಗಿರುತ್ತಾನೆ. ಸಂಗ್ರಹ-ಪರಿಗ್ರಹಗಳಿಂದ ಪೂರ್ಣವಾಗಿ ದೂರವಾಗಿರುತ್ತಾನೆ. ಯಾವುದೇ ವಸ್ತುವಿಗಾಗಿ ಅವನು ಪ್ರಯತ್ನಿಸುವುದಿಲ್ಲ. ಮಿತವಾಗಿ ಭೋಜನಮಾಡುತ್ತಾನೆ ಹಾಗೂ ಶಾಂತವಾಗಿರುತ್ತಾನೆ. ಅವನ ಬುದ್ಧಿಯು ಸ್ಥಿರವಾಗಿರುತ್ತದೆ. ಅವನಿಗೆ ಕೇವಲ ನನ್ನ ಭರವಸೆಯೇ ಇರುತ್ತದೆ ಹಾಗೂ ಆತ್ಮತತ್ತ್ವದ ಚಿಂತನೆಯಲ್ಲೇ ಸದಾಕಾಲ ತೊಡಗಿರುತ್ತಾನೆ. ॥ ೩೦॥ ಅವನು ಪೂರ್ಣವಾಗಿ ಎಚ್ಚರಿಕೆಯಿಂದಿರುತ್ತಾನೆ. ಗಂಭೀರಸ್ವಭಾವವಿದ್ದು ಧೈರ್ಯಶಾಲಿಯಾಗಿರುತ್ತಾನೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಈ ಆರು ಅವಗುಣಗಳನ್ನು ಗೆದ್ದಿರುತ್ತಾನೆ. ಅವನು ಸ್ವತಃ ಎಂದೂ, ಯಾರಿಂದಲೂ, ಯಾವ ಪ್ರಕಾರದ ಸನ್ಮಾನವನ್ನು ಬಯಸುವುದಿಲ್ಲ, ಆದರೆ ಬೇರೆಯವರನ್ನು ಸನ್ಮಾನಿಸುತ್ತಾನೆ. ಸಮರ್ಥನಾಗಿದ್ದು, ನನ್ನ ಕುರಿತಾದ ವಿಷಯವನ್ನು ಬೇರೆಯವರಿಗೆ ತಿಳಿಸಿಹೇಳಲು ತುಂಬಾ ನಿಪುಣನಾಗಿರುತ್ತಾನೆ. ಎಲ್ಲರೊಂದಿಗೆ ಮಿತ್ರತೆಯ ವ್ಯವಹಾರ ಮಾಡುತ್ತಾನೆ. ಅವನ ಹೃದಯದಲ್ಲಿ ಕರುಣೆ ತುಂಬಿರುತ್ತದೆ. ನನ್ನ ತತ್ತ್ವದ ಯಥಾರ್ಥಜ್ಞಾನ ಅವನಿಗಿರುತ್ತದೆ. ॥ ೩೧ ॥

ಕಾಮೈರಹತಧೀರ್ದಾಂತೋ ಮೃದುಃ ಶುಚಿರಕಿಂಚನಃ ।
ಅನೀಹೋ ಮಿತಭುಕ್ ಶಾಂತಃ ಸ್ಥಿರೋ ಮಚ್ಛರಣೋ ಮುನಿಃ
॥ ೩೦ ॥

ಅಪ್ರಮತ್ತೋ ಗಭೀರಾತ್ಮಾ ಧೃತಿಮಾನ್ ಜಿತಷಡ್ಗುಣಃ ।
ಅಮಾನೀ ಮಾನದಃ ಕಲ್ಯೋ ಮೈತ್ರಃ ಕಾರುಣಿಕಃ ಕವಿಃ
॥ ೩೧ ॥

ಆಜ್ಞಾಯೈವಂ ಗುಣಾನ್ ದೋಷಾನ್ ಮಯಾಽಽದಿಷ್ಟಾನಪಿ ಸ್ವಕಾನ್ ।
ಧರ್ಮಾನ್ ಸಂತ್ಯಜ್ಯ ಯಃ ಸರ್ವಾನ್ ಮಾಂ ಭಜೇತ ಸ ಸತ್ತಮಃ
॥ ೩೨ ॥

ನನ್ನ ಭಕ್ತನು ಗುಣ ಯಾವುದು, ದೋಷ ಯಾವುದು ಎಂಬುದನ್ನು ತಿಳಿದಿರುತ್ತಾನೆ. ಅವನ ಅಂತಃಕರಣವು ಶುದ್ಧವಾಗಿರುತ್ತದೆ. ಅವನಲ್ಲಿ ಭಕ್ತಿಯ ಪ್ರವಾಹ ನಿರಂತರ ಹೆಚ್ಚುತ್ತಲೇ ಇರುತ್ತದೆ, ಆಗ ಅವನು ನನ್ನಿಂದ ನಿರ್ದೇಶಿಸಲ್ಪಟ್ಟ ಕರ್ಮಗಳನ್ನು ಕೂಡ ಭಕ್ತಿಯಲ್ಲಿ ಬಾಧಕವೆಂದು ತಿಳಿದು ಎಲ್ಲ ಕರ್ಮಗಳನ್ನು ಭಗವಂತನಿಗೆ ಅರ್ಪಿಸಿ, ಅವನು ಎಲ್ಲ ರೀತಿಯ ಕರ್ಮಗಳಿಂದ ಉಪರಾಮನಾಗಿ, ಅನನ್ಯ ಭಾವದಿಂದ ಶರಣಾಗತನಾಗುತ್ತಾನೆ. ಭಕ್ತಿಯಲ್ಲೇ ಮುಳುಗಿರುವ ಇಂತಹ ಭಕ್ತನು ಬಹಳ ಶ್ರೇಷ್ಠನಾಗಿದ್ದಾನೆ.* ॥ ೩೨ ॥

ಜ್ಞಾತ್ವಾಜ್ಞಾತ್ವಾಥ ಯೇ ವೈ ಮಾಂ ಯಾವಾನ್ಯಶ್ಚಾಸ್ಮಿ ಯಾದೃಶಃ ।
ಭಜಂತ್ಯನನ್ಯಭಾವೇನ ತೇ ಮೇ ಭಕ್ತತಮಾ ಮತಾಃ
॥ ೩೩ ॥

ನಾನು (ಭಗವಂತನು) ಯಾರು, ಎಷ್ಟು ದೊಡ್ಡವನಾಗಿದ್ದೇನೆ, ಹೇಗಿದ್ದೇನೆ, ಎಂಬುದನ್ನು ತಿಳಿಯಲಿ, ತಿಳಿಯದಿರಲಿ; ಆದರೆ ಅನನ್ಯಭಾವದಿಂದ ನನ್ನನ್ನು ಭಜಿಸುವವನೇ ನನ್ನ ಅಭಿಪ್ರಾಯದಲ್ಲಿ ನನ್ನ ಪರಮಭಕ್ತನಾಗಿದ್ದಾನೆ. ॥ ೩೩ ॥

* ಗೀತೆ ೧೮/೬೬ರಲ್ಲಿ ಭಗವದ್ಗೀತೆಯ ಉಪಸಂಹಾರವನ್ನು ಭಗವಂತನು ಶರಣಾಗತಿಯಲ್ಲೇ ಮಾಡಿರುವನು.

ಮಲ್ಲಿಂಗ ಮದ್ಭಕ್ತಜನದರ್ಶನಸ್ಪರ್ಶನಾರ್ಚನಮ್ ।
ಪರಿಚರ್ಯಾ ಸ್ತುತಿಃ ಪ್ರಹ್ವಗುಣಕರ್ಮಾನುಕೀರ್ತನಮ್
॥ ೩೪ ॥

ಮತ್ಕಥಾಶ್ರವಣೇ ಶ್ರದ್ಧಾ ಮದನುಧ್ಯಾನಮುದ್ಧವ ।
ಸರ್ವಲಾಭೋಪಹರಣಂ ದಾಸ್ಯೇನಾತ್ಮನಿವೇದನಮ್
॥ ೩೫ ॥

ಮಜ್ಜನ್ಮ ಕರ್ಮಕಥನಂ ಮಮ ಪರ್ವಾನುಮೋದನಮ್ ।
ಗೀತತಾಂಡವವಾದಿತ್ರಗೋಷ್ಠೀಭಿರ್ಮದ್ಗೃಹೋತ್ಸವಃ
॥ ೩೬ ॥

ಯಾತ್ರಾ ಬಲಿವಿಧಾನಂ ಚ ಸರ್ವವಾರ್ಷಿಕಪರ್ವಸು ।
ವೈದಿಕೀ ತಾಂತ್ರಿಕೀ ದೀಕ್ಷಾ ಮದೀಯವ್ರತಧಾರಣಮ್
॥ ೩೭ ॥

ಮಮಾರ್ಚಾಸ್ಥಾಪನೇ ಶ್ರದ್ಧಾ ಸ್ವತಃ ಸಂಹತ್ಯ ಚೋದ್ಯಮಃ ।
ಉದ್ಯಾನೋಪವನಾಕ್ರೀಡಪುರಮಂದಿರಕರ್ಮಣಿ
॥ ೩೮ ॥

ಸಮ್ಮಾರ್ಜನೋಪಲೇಪಾಭ್ಯಾಂ ಸೇಕಮಂಡಲವರ್ತನೈಃ ।
ಗೃಹಶುಶ್ರೂಷಣಂ ಮಹ್ಯಂ ದಾಸವದ್ಯದಮಾಯಯಾ
॥ ೩೯ ॥

ಅಮಾನಿತ್ವಮದಂಭಿತ್ವಂ ಕೃತಸ್ಯಾಪರಿಕೀರ್ತನಮ್ ।
ಅಪಿ ದೀಪಾವಲೋಕಂ ಮೇ ನೋಪಯುಂಜ್ಯಾನ್ನಿವೇದಿತಮ್
॥ ೪೦ ॥

ಯದ್ಯದಿಷ್ಟತಮಂ ಲೋಕೇ ಯಚ್ಚಾತಿಪ್ರಿಯಮಾತ್ಮನಃ ।
ತತ್ತನ್ನಿವೇದಯೇನ್ಮಹ್ಯಂ ತದಾನಂತ್ಯಾಯ ಕಲ್ಪತೇ
॥ ೪೧ ॥

ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ ಮರುಜ್ಜಲಮ್ ।
ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿ ಮೇ
॥ ೪೨ ॥

ಸೂರ್ಯೇ ತು ವಿದ್ಯಯಾ ತ್ರಯ್ಯಾ ಹವಿಷಾಗ್ನೌ ಯಜೇತ ಮಾಮ್ ।
ಆತಿಥ್ಯೇನ ತು ವಿಪ್ರಾಗ್ರ್ಯೇ ಗೋಷ್ವಂಗ ಯವಸಾದಿನಾ
॥ ೪೩ ॥

ಪ್ರಿಯ ಉದ್ಧವನೇ ! ಭಕ್ತರಾದವರು ನನ್ನ ಮೂರ್ತಿ ಮತ್ತು ನನ್ನ ಭಕ್ತರ ದರ್ಶನ, ಸ್ಪರ್ಶ, ಪೂಜೆ, ಸೇವೆ, ಶುಶ್ರೂಷೆ, ಸ್ತುತಿ ಮತ್ತು ನಮಸ್ಕಾರ ಮುಂತಾದುವನ್ನು ಮಾಡುತ್ತಾ, ನನ್ನ ಗುಣ-ಕರ್ಮಗಳನ್ನು ಕೀರ್ತಿಸಲಿ. ॥ ೩೪ ॥ ನನ್ನ ಕಥಾಶ್ರವಣದಲ್ಲಿ ಶ್ರದ್ಧೆಯಿದ್ದು, ನಿರಂತರ ನನ್ನನ್ನು ಧ್ಯಾನಿಸುತ್ತಿರಲಿ. ದೊರೆತುದೆಲ್ಲವನ್ನು ನನಗೆ ಅರ್ಪಿಸುತ್ತಾ, ದಾಸ್ಯಭಾವದಿಂದ ನನ್ನಲ್ಲಿ ಆತ್ಮನಿವೇದನ ಮಾಡಲಿ ॥ ೩೫ ॥ ನನ್ನ ದಿವ್ಯವಾದ ಜನ್ಮ-ಕರ್ಮಗಳನ್ನು ಚರ್ಚಿಸುತ್ತಿರಲಿ. ಜನ್ಮಾಷ್ಟಮಿ, ರಾಮನವಮಿ ಮುಂತಾದ ಪರ್ವಗಳಲ್ಲಿ ಉತ್ಸವವನ್ನಾಚರಿಸುತ್ತಾ, ಸಂಗೀತ, ನೃತ್ಯ, ವಾದ್ಯಗೋಷ್ಠಿ ಇವುಗಳಿಂದ ಸೇವೆ ನಡೆಸಲಿ. ಸಮಾಜಬಾಂಧವರಿಂದೊಡಗೂಡಿ ನನ್ನ ಮಂದಿರದಲ್ಲಿ ಮಹೋತ್ಸವವನ್ನು ಏರ್ಪಡಿಸಲಿ. ॥ ೩೬ ॥ ವಾರ್ಷಿಕ ಹಬ್ಬ-ಹರಿದಿನಗಳಲ್ಲಿ ನನ್ನ ಕ್ಷೇತ್ರಗಳ ಯಾತ್ರೆ ಮಾಡಲಿ, ಮೆರವಣಿಗೆ ಹೊರಡಿಸಲಿ, ವಿವಿಧ ವಸ್ತು, ಉಪಚಾರಗಳಿಂದ ನನ್ನ ಪೂಜೆ ಮಾಡಲಿ, ವೈದಿಕ ಅಥವಾ ತಾಂತ್ರಿಕ ಪದ್ಧತಿಯಿಂದ ದೀಕ್ಷೆಯನ್ನು ಕೈಗೊಂಡು, ನನ್ನ ವ್ರತಗಳನ್ನು ಪಾಲಿಸುತ್ತಿರಲಿ. ॥ ೩೭ ॥ ಮಂದಿರಗಳಲ್ಲಿ ನನ್ನ ಮೂರ್ತಿಗಳ ಸ್ಥಾಪನೆಯಲ್ಲಿ ಶ್ರದ್ಧೆಯಿರಲಿ. ಒಂದು ವೇಳೆ ಈ ಕಾರ್ಯವು ಒಬ್ಬನಿಂದಾಗದಿದ್ದರೆ, ಬೇರೆಯವರನ್ನು ಸೇರಿಸಿಕೊಂಡು ಉದ್ಯೋಗಮಾಡಲಿ. ನನಗಾಗಿ ಹೂದೋಟ, ಉದ್ಯಾನಗಳು, ಕ್ರೀಡಾಮಂದಿರ, ನಗರ ಹಾಗೂ ದೇವಸ್ಥಾನಗಳನ್ನು ನಿರ್ಮಿಸಲಿ. ॥ ೩೮ ॥ ಸೇವಕನಂತೆ ಭಕ್ತಿಶ್ರದ್ಧೆಯಿಂದೊಡಗೂಡಿ ನಿಷ್ಕಪಟಭಾವದಿಂದ ನನ್ನ ಮಂದಿರದ ಕೈಂಕರ್ಯ ಕೈಗೊಳ್ಳಲಿ. ಗುಡಿಸುವುದು, ಸಾರಿಸುವುದು, ರಂಗೋಲಿಯಿಡುವುದು ಮುಂತಾದುವನ್ನು ಮಾಡುತ್ತಾ, ಬಣ್ಣ-ಬಣ್ಣದ ಮಂಡಲಗಳನ್ನು ಅಲಂಕರಿಸಲಿ. ॥ ೩೯ ॥ ಅಭಿಮಾನ, ದಂಭಾಚಾರ ಇಲ್ಲದಿರಲಿ, ಜೊತೆಗೆ ತನ್ನ ಶುಭಕರ್ಮಗಳ ಬಗ್ಗೆ 'ನಾನು ಇದನ್ನು ಮಾಡಿದೆ' ಎಂದು ಹೇಳಬಾರದು. ಬೇರೆ ದೇವರಿಗೆ ತೋರಿಸಿದ ದೀಪ (ಆರತಿ)ವನ್ನು ನನ್ನ ಪೂಜೆಯಲ್ಲಿ ಉಪಯೋಗಿಸಬಾರದು. ಅರ್ಥಾತ್ ಬೇರೆಯೇ ದೀಪವನ್ನು ನನಗಾಗಿ ಬೆಳಗಿಸಬೇಕು. ॥ ೪೦ ॥ ಪ್ರಪಂಚದಲ್ಲಿ ತನಗೆ ಎಲ್ಲಕ್ಕಿಂತ ಪ್ರಿಯವಾದ, ಅಭೀಷ್ಟವಾಗಿ ಕಂಡುಬರುವ ವಸ್ತುವನ್ನು ನನಗೆ ಸಮರ್ಪಿಸಲಿ. ಹೀಗೆ ಮಾಡುವುದರಿಂದ ಆ ವಸ್ತುಗಳು ಅನಂತಫಲವನ್ನು ಕೊಡುವವು. ॥ ೪೧ ॥

ಪುಣ್ಯಾತ್ಮನಾದ ಉದ್ಧವನೇ ! ಸೂರ್ಯ, ಅಗ್ನಿ, ಬ್ರಾಹ್ಮಣ, ಗೋವು, ವೈಷ್ಣವ, ಆಕಾಶ, ವಾಯು, ಜಲ, ಪೃಥ್ವಿ, ಆತ್ಮಾ ಮತ್ತು ಸಮಸ್ತ ಪ್ರಾಣಿಗಳು ಇವೆಲ್ಲವೂ ನನ್ನ ಪೂಜಾಸ್ಥಾನಗಳಾಗಿವೆ. ॥ ೪೨ ॥ ಪ್ರಿಯ ಉದ್ಧವಾ ! ಋಗ್ವೇದ, ಯಜುರ್ವೇದ, ಸಾಮವೇದಗಳ ಮಂತ್ರಗಳಿಂದ ಸೂರ್ಯನಲ್ಲಿ ನನ್ನನ್ನು ಪೂಜಿಸಬೇಕು. ಹವನದ ಮೂಲಕ ಅಗ್ನಿಯಲ್ಲಿ, ಅತಿಥಿಯ ಮೂಲಕ ಶ್ರೇಷ್ಠಬ್ರಾಹ್ಮಣನಲ್ಲಿ, ಹಚ್ಚ-ಹಸಿರಾದ ಹುಲ್ಲಿನ ಮೂಲಕ ಗೋವಿನಲ್ಲಿ ನನ್ನನ್ನು ಪೂಜಿಸಬೇಕು. ॥ ೪೩ ॥

ವೈಷ್ಣವೇ ಬಂಧುಸತ್ಕೃತ್ಯಾ ಹೃದಿ ಖೇ ಧ್ಯಾನನಿಷ್ಠಯಾ ।
ವಾಯೌ ಮುಖ್ಯಧಿಯಾ ತೋಯೇ ದ್ರವ್ಯೈಸ್ತೋಯಪುರಸ್ಕೃತೈಃ
॥ ೪೪ ॥

ಸ್ಥಂಡಿಲೇ ಮಂತ್ರಹೃದಯೈರ್ಭೋಗೈರಾತ್ಮಾನಮಾತ್ಮನಿ ।
ಕ್ಷೇತ್ರಜ್ಞಂ ಸರ್ವಭೂತೇಷು ಸಮತ್ವೇನ ಯಜೇತ ಮಾಮ್
॥ ೪೫ ॥

ಧಿಷ್ಣ್ಯೇಷ್ವೇಷ್ವಿತಿ ಮದ್ರೂಪಂ ಶಂಖಚಕ್ರಗದಾಂಬುಜೈಃ ।
ಯುಕ್ತಂ ಚತುರ್ಭುಜಂ ಶಾಂತಂ ಧ್ಯಾಯನ್ನರ್ಚೇತ್ ಸಮಾಹಿತಃ
॥ ೪೬ ॥

ಇಷ್ಟಾಪೂರ್ತೇನ ಮಾಮೇವಂ ಯೋ ಯಜೇತ ಸಮಾಹಿತಃ ।
ಲಭತೇ ಮಯಿ ಸದ್ಭಕ್ತಿಂ ಮತ್ಸ್ಮೃತಿಃ ಸಾಧುಸೇವಯಾ
॥ ೪೭ ॥

ಪ್ರಾಯೇಣ ಭಕ್ತಿಯೋಗೇನ ಸತ್ಸಂಗೇನ ವಿನೋದ್ಧವ ।
ನೋಪಾಯೋ ವಿದ್ಯತೇ ಸಧ್ರ್ಯಙ್ ಪ್ರಾಯಣಂ ಹಿ ಸತಾಮಹಮ್
॥ ೪೮ ॥

ಅಥೈತತ್ ಪರಮಂ ಗುಹ್ಯಂ ಶೃಣ್ವತೋ ಯದುನಂದನ ।
ಸುಗೋಪ್ಯಮಪಿ ವಕ್ಷ್ಯಾಮಿ ತ್ವಂ ಮೇ ಭೃತ್ಯಃ ಸುಹೃತ್ಸಖಾ
॥ ೪೯ ॥

ವಿಷ್ಣುಭಕ್ತನನ್ನು ತನ್ನ ಸೋದರನಂತೆ ತಿಳಿದು ಅವನ ಆದರ-ಸತ್ಕಾರ ಮಾಡಬೇಕು. ನಿರಂತರ ಧ್ಯಾನದಲ್ಲೇ ತೊಡಗಿದ್ದು ಹೃದಯಾಕಾಶದಲ್ಲಿ ನನ್ನನ್ನು ಪೂಜಿಸಬೇಕು. ಮುಖ್ಯಪ್ರಾಣನೆಂದು ತಿಳಿದು ವಾಯುವಿನಲ್ಲಿ ಮತ್ತು ಪುಷ್ಪಾದಿ ಸಾಮಗ್ರಿಗಳಿಂದ ನೀರಿನಲ್ಲಿ ನಾರಾಯಣನಾದ ನನ್ನನ್ನು ಆರಾಧಿಸಬೇಕು. ॥ ೪೪ ॥ ರಹಸ್ಯಮಯ ಮಂತ್ರಗಳಿಂದ ವೇದೀ (ಸ್ಥಂಡಿಲ)ಯಲ್ಲಿ ಪೂಜಿಸಬೇಕು. ಭೋಗಪದಾರ್ಥಗಳನ್ನು ತನ್ನೊಳಗೇ ವಿರಾಜಮಾನನಾದ ಸರ್ವಭೂತಾತ್ಮಾ ಪ್ರಭುವೇ ಭೋಜನ ಮಾಡುತ್ತಿದ್ದಾನೆ. (**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ**) ಎಂದು ಭಾವಿಸಿ ಊಟಮಾಡಬೇಕು. ಎಲ್ಲ ಪ್ರಾಣಿಗಳಲ್ಲಿಯೂ ಓರ್ವನೇ ಕ್ಷೇತ್ರಜ್ಞ ಆತ್ಮನು ಸಮಭಾವದಿಂದ ವ್ಯಾಪ್ತನಾಗಿದ್ದಾನೆ ಹೀಗೆ ತಿಳಿದು ಎಲ್ಲ ಪ್ರಾಣಿಗಳನ್ನು ನನ್ನ ಸ್ವರೂಪವೆಂದೇ ಅರಿತು ಅವರೊಂದಿಗೆ ತುಂಬು ಪ್ರೇಮಪೂರ್ಣವಾಗಿ ವ್ಯವಹರಿಸುತ್ತಾ ಪೂಜಿಸಬೇಕು. ॥ ೪೫ ॥ ಇವೆಲ್ಲ ಸ್ಥಳಗಳಲ್ಲಿ ನನ್ನದೇ ಭಾವನೆಗೈದು ಧ್ಯಾನಮಾಡಬೇಕು. ಶಂಖ, ಚಕ್ರ, ಗದೆ, ಪದ್ಮ ಇವುಗಳನ್ನು ಧರಿಸಿದ ಚತುರ್ಭುಜ ಭಗವಾನ್ ವಿಷ್ಣುವು ನನ್ನ ಮುಂದೆ ವಿರಾಜಮಾನನಾಗಿದ್ದಾನೆ. ಅವನು ಸಂಪೂರ್ಣ ಶಾಂತಮೂರ್ತಿಯಾಗಿದ್ದಾನೆ. ಹೀಗೆ ಎಚ್ಚರಿಕೆಯಿಂದ ಭಗವಂತನನ್ನು ಮಾನಸಿಕ ರೀತಿಯಿಂದ ಪೂಜಿಸಬೇಕು. ॥ ೪೬ ॥ ಈ ಪ್ರಕಾರ ಏಕಾಗ್ರ ಚಿತ್ತದಿಂದ ಯಜ್ಞ-ಯಾಗಾದಿ 'ಇಷ್ಟ'ವೆಂದೂ ಮತ್ತು ಸಮಾಜದ ಉಪಯೋಗಕ್ಕಾಗಿ ಬರುವ ಧರ್ಮಶಾಲೆಗಳನ್ನು ಕಟ್ಟಿಸುವುದು, ಕೆರೆ-ಬಾವಿಗಳನ್ನು ನಿರ್ಮಿಸುವುದು ಮುಂತಾದ 'ಪೂರ್ತ'ವೆಂದೂ ಇದೆಲ್ಲವನ್ನು ನನ್ನ ಪೂಜೆಯೆಂದೇ ತಿಳಿದು ಮಾಡುವ ಮನುಷ್ಯನಿಗೆ ನನ್ನ ಶ್ರೇಷ್ಠ ಭಕ್ತಿಯು ಪ್ರಾಪ್ತವಾಗುತ್ತದೆ. ಸಂತ ಪುರುಷರ ಸೇವೆ ಮಾಡುವುದರಿಂದ ನನ್ನ ಸ್ವರೂಪದ ಜ್ಞಾನವೂ ಉಂಟಾಗುತ್ತದೆ. ॥ ೪೭ ॥ ಪ್ರಿಯ ಉದ್ಧವನೇ! ಸತ್ಸಂಗ ಮತ್ತು ಭಕ್ತಿಯೋಗ – ಇವೆರಡರ ಸಾಧನೆಗಳ ಅನುಷ್ಠಾನ ಮಾಡುತ್ತಾ ಇರಬೇಕೆಂಬುದೇ ನನ್ನ ನಿಶ್ಚಯವಾಗಿದೆ. ಪ್ರಾಯಶಃ ಇವೆರಡಲ್ಲದೆ ಸಂಸಾರ ಸಾಗರದಿಂದ ಪಾರಾಗಲು ಬೇರೆ ಯಾವ ಉಪಾಯವೂ ಇಲ್ಲ. ಏಕೆಂದರೆ ಸಂತ-ಮಹಾತ್ಮರ ಶ್ರೇಷ್ಠ ಆಶ್ರಯಸ್ಥಾನ ನಾನೇ ಆಗಿರುವೆನು. ॥ ೪೮ ॥ ಎಲೈ ಉದ್ಧವನೇ! ಈಗ ನಾನು ನಿನಗೆ ಇನ್ನೊಂದು ಅತ್ಯಂತ ಗೋಪ್ಯವಾದ, ಪರಮ ರಹಸ್ಯವಾದ ಮಾತನ್ನು ಹೇಳುವೆನು. ಏಕೆಂದರೆ ನೀನು ನನ್ನ ಪ್ರಿಯಸೇವಕನೂ, ಹಿತೈಷಿಯೂ, ಸುಹೃದನೂ, ಪ್ರೇಮಿಯೂ, ಸಖನೂ ಆಗಿರುವೆ. ಜೊತೆಗೆ ಕೇಳುವ ಇಚ್ಛುಕನೂ ಆಗಿರುವೆ. ॥ ೪೯ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶಸ್ಕಂಧೇ ಏಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಸತ್ಸಂಗದ ಮಹಿಮೆ ಮತ್ತು ಕರ್ಮ ಹಾಗೂ ಕರ್ಮತ್ಯಾಗದ ವಿಧಾನ

ಶ್ರೀಭಗವಾನುವಾಚ

ನ ರೋಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಏವ ಚ ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ನೇಷ್ಟಾಪೂರ್ತಂ ನ ದಕ್ಷಿಣಾ ॥ ೧ ॥

ವ್ರತಾನಿ ಯಜ್ಞಶ್ಛಂದಾಂಸಿ ತೀರ್ಥಾನಿ ನಿಯಮಾ ಯಮಾಃ ।
ಯಥಾವರುಂಧೇ ಸತ್ಸಂಗಃ ಸರ್ವಸಂಗಾಪಹೋ ಹಿ ಮಾಮ್ ॥ ೨ ॥

ಸತ್ಸಂಗೇನ ಹಿ ದೈತೇಯಾ ಯಾತುಧಾನಾ ಮೃಗಾಃ ಖಗಾಃ ।
ಗಂಧರ್ವಾಪ್ಸರಸೋ ನಾಗಾಃ ಸಿದ್ಧಾಶ್ಚಾರಣಗುಹ್ಯಕಾಃ ॥ ೩ ॥

ವಿದ್ಯಾಧರಾ ಮನುಷ್ಯೇಷು ವೈಶ್ಯಾಃ ಶೂದ್ರಾಃ ಸ್ತ್ರಿಯೋಽಂತ್ಯಜಾಃ ।
ರಜಸ್ತಮಃಪ್ರಕೃತಯಸ್ತಸ್ಮಿಂಸ್ತಸ್ಮಿನ್ ಯುಗೇಽನಘ ॥ ೪ ॥

ಬಹವೋ ಮತ್ಪದಂ ಪ್ರಾಪ್ತಾಸ್ತ್ವಾಷ್ಟ್ರಕಾಯಾಧವಾದಯಃ ।
ವೃಷಪರ್ವಾ ಬಲಿರ್ಬಾಣೋ ಮಯಶ್ಚಾಥ ವಿಭೀಷಣಃ ॥ ೫ ॥

ಸುಗ್ರೀವೋ ಹನುಮಾನೃಕ್ಷೋ ಗಜೋ ಗೃಧ್ರೋ ವಣಿಕ್ಪಥಃ ।
ವ್ಯಾಧಃ ಕುಬ್ಜಾ ವ್ರಜೇ ಗೋಪ್ಯೋ ಯಜ್ಞಪತ್ನ್ಯಸ್ತಥಾಪರೇ ॥ ೬ ॥

ತೇ ನಾಧೀತಶ್ರುತಿಗಣಾ ನೋಪಾಸಿತಮಹತ್ತಮಾಃ ।
ಅವ್ರತಾತಪ್ತತಪಸಃ ಸತ್ಸಂಗಾನ್ಮಾಮುಪಾಗತಾಃ ॥ ೭ ॥

ಕೇವಲೇನ ಹಿ ಭಾವೇನ ಗೋಪ್ಯೋ ಗಾವೋ ನಗಾ ಮೃಗಾಃ ।
ಯೇಽನ್ಯೇ ಮೂಢಧಿಯೋ ನಾಗಾಃ ಸಿದ್ಧಾ ಮಾಮೀಯುರಂಜಸಾ ॥ ೮ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ** – ಪ್ರಿಯ ಉದ್ಧವನೇ! ಸತ್ಸಂಗದ ಮಹಿಮೆಯು ತುಂಬಾ ಅದ್ಭುತವಾಗಿದೆ. ಇದು ಬಹಳ ಶ್ರೇಷ್ಠ ಸಾಧನೆಯಾಗಿದೆ. ನನ್ನ ಭಕ್ತನು ಸತ್ಸಂಗದಿಂದ ನನ್ನನ್ನು ಪಡೆದುಕೊಳ್ಳುವಂತೆ, ಬೇರೆ ಯಾವ ಸಾಧನೆಯಿಂದಲೂ ಇಲ್ಲ. ಸತ್ಸಂಗಸಾಧನೆಯಿಂದ ನನ್ನ ಪ್ರಾಪ್ತಿಯೂ ಸುಲಭವಾಗಿ ಆಗುವಂತೆ-ಯೋಗ, ಸಾಂಖ್ಯ, ಧರ್ಮ, ಸ್ವಾಧ್ಯಾಯ, ತಪಸ್ಸು, ತ್ಯಾಗ, ಇಷ್ಟಾಪೂರ್ತ, ದಕ್ಷಿಣಾ, ವ್ರತ, ಯಜ್ಞ, ವೇದಗಳ ರಹಸ್ಯಮಯ ಮಂತ್ರ, ತೀರ್ಥ, ನಿಯಮ, ಯಮ ಮುಂತಾದ ಸಾಧನೆಗಳಿಂದ ನನ್ನ ಪ್ರಾಪ್ತಿಯು ಬೇಗನೆ ಆಗಲಾರದು. ಏಕೆಂದರೆ, ಸತ್ಸಂಗದಿಂದ ಎಲ್ಲ ರೀತಿಯ ಆಸಕ್ತಿಯೂ ನಾಶವಾಗಿ ಹೋಗುತ್ತದೆ. ಆಸಕ್ತಿಯು ನಾಶವಾಗುವುದರಿಂದ ನನ್ನಲ್ಲಿ ಅವನ ಭಕ್ತಿಯು ಬೆಳೆಯುತ್ತದೆ ಮತ್ತು ಅವನು ಸಹಜವಾಗಿಯೇ ನನ್ನನ್ನು ಪಡೆದುಕೊಳ್ಳುತ್ತಾನೆ. ॥ ೧-೨॥ ಪುಣ್ಯಾತ್ಮನಾದ ಉದ್ಧವನೇ! ಪ್ರತಿಯೊಂದು ಯುಗದಲ್ಲಿಯೂ ಸತ್ಸಂಗದ ಮೂಲಕವೇ ದೈತ್ಯರು-ರಾಕ್ಷಸರು, ಪಶು-ಪಕ್ಷಿಗಳು, ಗಂಧರ್ವ-ಅಪ್ಸರೆಯರು, ನಾಗ-ಸಿದ್ಧರು, ಚಾರಣ-ಗುಹ್ಯಕರು, ವಿದ್ಯಾಧರರು ಮುಂತಾದ ವರೆಲ್ಲರೂ ನನ್ನನ್ನು ಪಡೆದುಕೊಂಡಿರುವರು. ಮನುಷ್ಯರಲ್ಲಿ ವೈಶ್ಯರು, ಶೂದ್ರರು, ಸ್ತ್ರೀಯರು, ಅಂತ್ಯಜರು ಮುಂತಾದ ರಜೋಗುಣೀ, ತಮೋಗುಣೀ, ಪ್ರಕೃತಿಯ ಬಹಳಷ್ಟು ಜೀವರು ನನ್ನ ಪರಮ ಪದವನ್ನು ಪಡೆದುಕೊಂಡಿರುವರು. ವೃತ್ರಾಸುರ, ಪ್ರಹ್ಲಾದ, ವೃಷಪರ್ವಾ, ಬಲಿ, ಬಾಣಾಸುರ, ಮಯದಾನವ, ವಿಭೀಷಣ, ಸುಗ್ರೀವ, ಹನುಮಂತ, ಜಾಂಬವಂತರು, ಗಜೇಂದ್ರ, ಜಟಾಯು, ತುಲಾಧಾರವೈಶ್ಯ, ಧರ್ಮವ್ಯಾಧ, ಕುಬ್ಜೆ, ವ್ರಜದ ಗೋಪಿಯರು, ಯಜ್ಞಪತ್ನಿಯರು, ಹಾಗೂ ಬೇರೆ ಜನರೂ ಕೂಡ ಸತ್ಸಂಗದ ಪ್ರಭಾವದಿಂದಲೇ ನನ್ನನ್ನು ಪಡೆದುಕೊಳ್ಳಲು ಸಾಧ್ಯ ವಾಯಿತು. ॥ ೩-೬ ॥ ಅವರಾದರೋ ವೇದಗಳನ್ನು ಅಧ್ಯಯನ ಮಾಡಿರಲಿಲ್ಲ, ವಿಧಿಪೂರ್ವಕ ಮಹಾಪುರುಷರ ಉಪಾಸನೆ ಮಾಡಿ ರಲಿಲ್ಲ. ಹೀಗೆ ಅವರು ಯಾವುದೇ ವ್ರತ, ತಪಸ್ಸು ಇವುಗಳನ್ನೂ ಮಾಡಿರಲಿಲ್ಲ, ಕೇವಲ ಸತ್ಸಂಗದ ಪ್ರಭಾವದಿಂದಲೇ ಅವರು ನನ್ನನ್ನು ಪಡೆದುಕೊಂಡರು. ॥ ೭ ॥ ಗೋಪಿಯರು, ಹಸುಗಳು, ಯಮಳಾರ್ಜುನ ಮುಂತಾದ ವೃಕ್ಷಗಳು, ವ್ರಜದ ಜಿಂಕೆಗಳು ಮುಂತಾದ ಪಶುಗಳು, ಇವರೆಲ್ಲರು ಭಾವನೆಯ ಮೂಲಕವೇ ನನ್ನನ್ನು ಪಡೆದುಕೊಂಡರು. ಇದಲ್ಲದೆ ಕಾಲಿಯಸರ್ಪದಂತಹ ಮೂಢಬುದ್ಧಿಯೂ ನನ್ನನ್ನು ಹೊಂದಿದನು. ಇಂತಹವರು ಅನೇಕರು ಆಗಿ ಹೋಗಿದ್ದಾರೆ. ಅವರು ಕೇವಲ ಪ್ರೇಮಪೂರ್ಣ ಭಾವದ ಮೂಲಕವೇ ಆಯಾಸವಿಲ್ಲದೆ ನನ್ನನ್ನು ಪಡೆದು ಕೃತಕೃತ್ಯ ರಾದರು. ॥ ೮ ॥ ಉದ್ಧವನೇ! ದೊಡ್ಡ-ದೊಡ್ಡ ಪ್ರಯತ್ನಶೀಲ ಸಾಧಕರು ಯೋಗ, ಸಾಂಖ್ಯ, ದಾನ, ವ್ರತ, ತಪಸ್ಸು, ಯಜ್ಞ,

ಯಂ ನ ಯೋಗೇನ ಸಾಂಖ್ಯೇನ ದಾನವ್ರತತಪೋಽಧ್ವರೈಃ ।
ವ್ಯಾಖ್ಯಾಸ್ವಾಧ್ಯಾಯಸಂನ್ಯಾಸೈಃ ಪ್ರಾಪ್ನುಯಾದ್ಯತ್ನವಾನಪಿ ॥ ೯ ॥

ರಾಮೇಣ ಸಾರ್ಧಂ ಮಥುರಾಂ ಪ್ರಣೀತೇ
ಶ್ವಾಫಲ್ಕಿನಾ ಮಯ್ಯನುರಕ್ತಚಿತ್ತಾಃ ।
ವಿಗಾಢಭಾವೇನ ನ ಮೇ ವಿಯೋಗ-
ತೀವ್ರಾಧಯೋಽನ್ಯಂ ದದೃಶುಃ ಸುಖಾಯ ॥ ೧೦ ॥

ತಾಸ್ತಾಃ ಕ್ಷಪಾಃ ಪ್ರೇಷ್ಠ ತಮೇನ ನೀತಾ
ಮಯೈವ ವೃಂದಾವನಗೋಚರೇಣ ।
ಕ್ಷಣಾರ್ಧವತ್ತಾಃ ಪುನರಂಗ ತಾಸಾಂ
ಹೀನಾ ಮಯಾ ಕಲ್ಪಸಮಾ ಬಭೂವುಃ ॥ ೧೧ ॥

ತಾ ನಾವಿದನ್ಮಯ್ಯನುಷಂಗಬದ್ಧ-
ಧಿಯಃ ಸ್ವಮಾತ್ಮಾನಮದಸ್ತಥೇದಮ್ ।
ಯಥಾ ಸಮಾಧೌ ಮುನಯೋಽಬ್ಧಿತೋಯೇ
ನದ್ಯಃ ಪ್ರವಿಷ್ಟಾ ಇವ ನಾಮರೂಪೇ ॥ ೧೨ ॥

ಮತ್ಕಾಮಾ ರಮಣಂ ಜಾರಮಸ್ವರೂಪವಿದೋಽಬಲಾಃ ।
ಬ್ರಹ್ಮ ಮಾಂ ಪರಮಂ ಪ್ರಾಪುಃ ಸಂಗಾಚ್ಛತಸಹಸ್ರಶಃ ॥ ೧೩ ॥

ತಸ್ಮಾತ್ತ್ವಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಮ್ ।
ಪ್ರವೃತ್ತಂ ಚ ನಿವೃತ್ತಂ ಚ ಶ್ರೋತವ್ಯಂ ಶ್ರುತಮೇವ ಚ ॥ ೧೪ ॥

ಮಾಮೇಕಮೇವ ಶರಣಮಾತ್ಮಾನಂ ಸರ್ವದೇಹಿನಾಮ್ ।
ಯಾಹಿ ಸರ್ವಾತ್ಮಭಾವೇನ ಮಯಾ ಸ್ಯಾ ಹ್ಯಕುತೋಭಯಃ ॥ ೧೫ ॥

ಉದ್ಧವ ಉವಾಚ

ಸಂಶಯಃ ಶೃಣ್ವತೋ ವಾಚಂ ತವ ಯೋಗೇಶ್ವರೇಶ್ವರ ।
ನ ನಿವರ್ತತ ಆತ್ಮಸ್ಥೋ ಯೇನ ಭ್ರಾಮ್ಯತಿ ಮೇ ಮನಃ ॥ ೧೬ ॥

ಶ್ರುತಿಗಳ ವ್ಯಾಖ್ಯೆ, ಸ್ವಾಧ್ಯಾಯ, ಸಂನ್ಯಾಸ ಮುಂತಾದ ಸಾಧನೆಗಳಿಂದ ನನ್ನನ್ನು ಪಡೆಯಲಾಗಲಿಲ್ಲ. ಆದರೆ ಸತ್ಸಂಗದಿಂದ ಲಾದರೋ ನಾನು ಅತ್ಯಂತ ಸುಲಭನಾಗುತ್ತೇನೆ. ಉದ್ಧವಾ! ಅಕ್ರೂರನು ಅಣ್ಣ ಬಲರಾಮನೊಂದಿಗೆ ನನ್ನನ್ನು ವ್ರಜದಿಂದ ಮಥುರೆಗೆ ಯಾವಾಗ ಕರೆತಂದನೋ, ಆಗ ಗೋಪಿಯರ ಹೃದಯ ಗಾಢವಾದ ಪ್ರೇಮದ ಕಾರಣ ನನ್ನಲ್ಲಿಯೇ ಅನುರಕ್ತ ವಾಗಿತ್ತು. ನನ್ನ ವಿಯೋಗದ ತೀವ್ರ ವ್ಯಾಧಿಯಿಂದ ನಾನಲ್ಲದೆ ಅವರಿಗೆ ಬೇರೆ ಯಾವ ವಸ್ತುವು ಸುಖಕಾರಕವಾಗದಷ್ಟು ವ್ಯಾಕುಲ ರಾಗಿದ್ದರು. ॥ ೯-೧೦ ॥ ನಾನೊಬ್ಬನೇ ಅವರ ಏಕಮಾತ್ರ ಪ್ರಿಯತಮನಾಗಿರುವೆನು ಎಂಬುದನ್ನು ನೀನು ತಿಳಿದಿರುವೆ. ನಾನು ವೃಂದಾವನದಲ್ಲಿದ್ದಾಗ ಅವರು ಅನೇಕ ರಾತ್ರಿಗಳು, ಮಹಾರಾಸದ ರಾತ್ರಿಗಳು ನನ್ನೊಡನೆ ಕ್ಷಣಾರ್ಧದಂತೆ ಕಳೆದಿದ್ದರು. ಆದರೆ ಪ್ರಿಯ ಉದ್ಧವಾ! ನನ್ನ ಹೊರತು ಅದೇ ರಾತ್ರಿಗಳು ಅವರಿಗೆ ಒಂದೊಂದು ಕಲ್ಪಕ್ಕೆ ಸಮಾನವಾಗುತ್ತಿತ್ತು. ॥ ೧೧ ॥ ಆ ಗೋಪಿಯರಿಗೆ ನನ್ನಲ್ಲಿ ಎಂತಹ ನಿಶ್ಚಲವಾದ ಪ್ರೇಮವಿತ್ತೆಂದರೆ, ಅವರ ಬುದ್ಧಿ ನನ್ನಲ್ಲಿ ಸ್ಥಿರವಾಗಿ ಹೋಗಿತ್ತು. ಅವರಿಗೆ ನಾನಲ್ಲದೆ ಬೇರೆ ಏನೂ ಸ್ಮೃತಿಯಲ್ಲಿ ಇರುತ್ತಿರಲಿಲ್ಲ. ಅವರ ಭಾವನೆ ನನ್ನಲ್ಲಿ ಗಾಢವಾಗಿ ಆವಿಷ್ಟವಾಗಿ ಹೋಗಿತ್ತು. ಅವರಿಗೆ 'ಇದು ನನ್ನ ಶರೀರವೋ ಅಥವಾ ಅದೋ' ಇದೂ ಕೂಡ ತಿಳಿಯದಷ್ಟು ಪ್ರಗಾಢ ಭಕ್ತಿ ಅವರದಾಗಿತ್ತು. ಮುನಿಗಳು ಸಮಾಧಿಯಲ್ಲಿ ಎಲ್ಲವನ್ನು ಮರೆತು ಭಗವಂತ ನೊಂದಿಗೇ ಒಂದಾಗುವಂತೆ, ನದಿಗಳು ಸಮುದ್ರವನ್ನು ಸೇರಿ ತಮ್ಮ ನಾಮ-ರೂಪಗಳನ್ನು ಕಳೆದುಕೊಳ್ಳುವಂತೆ ಆ ಗೋಪಿಯರೂ ಕೂಡ ನನ್ನಲ್ಲಿ ಏಕೀಭಾವದಿಂದ ಸ್ಥಿತರಾಗಿದ್ದರು. ॥ ೧೨ ॥ ಉದ್ಧವನೇ! ಆ ಗೋಪಿಯರಲ್ಲಿ ಅನೇಕರು ನನ್ನ ವಾಸ್ತವಿಕ ಸ್ವರೂಪವನ್ನು ತಿಳಿಯದವರೂ ಇದ್ದರು. ಅವರು ಕೇವಲ ನನ್ನನ್ನು ಪ್ರಿಯತಮ ನೆಂದೇ ತಿಳಿಯುತ್ತಿದ್ದರು. ಜಾರಭಾವದಿಂದ ನನ್ನೊಡನೆ ಸೇರುವ ಆಕಾಂಕ್ಷೆ ಹೊಂದಿದ್ದರು. ಆ ಸಾಧನಹೀನ ಸಾವಿರಾರು ಅಬಲೆ ಯರು ಕೇವಲ ಸಂಗದ ಪ್ರಭಾವದಿಂದಲೇ ಪರಬ್ರಹ್ಮ ಪರಮಾತ್ಮ ನಾದ ನನ್ನನ್ನು ಪಡೆದುಕೊಂಡರು. ॥ ೧೩ ॥ ಆದ್ದರಿಂದ ಎಲೈ ಉದ್ಧವಾ! ನೀನು ನಿವೃತ್ತಿ ಅಥವಾ ಪ್ರವೃತ್ತಿ ಹಾಗೂ ಇಹ-ಪರ ಸಂಬಂಧೀ ಎಲ್ಲ ಕರ್ಮಗಳನ್ನು ತ್ಯಜಿಸಿ, ಸಮಸ್ತ ಪ್ರಾಣಿಗಳ ಆತ್ಮ ಸ್ವರೂಪೀ ಏಕಮಾತ್ರ ಪರಮಾತ್ಮನಾದ ನನ್ನನ್ನೇ ಅನನ್ಯ ಭಾವದಿಂದ ಶರಣಾಗು. ಮತ್ತೆ ನಿನಗೆ ಯಾವುದೇ ಭಯ ಇರಲಾ ರದು. ॥ ೧೪-೧೫ ॥

**ಉದ್ಧವನೆಂದನು –** ಓ ಯೋಗೇಶ್ವರರಿಗೂ ಈಶ್ವರನೇ! ನಿನ್ನ ಅಮೃತಪೂರ್ಣ ವಾಣಿಯನ್ನು ಕೇಳುತ್ತಿದ್ದರೂ ನನಗೆ ತೃಪ್ತಿಯಾಗು ತ್ತಿಲ್ಲ. ಆದರೆ ಇನ್ನೂ ನನ್ನೊಳಗಿನ ಸಂಶಯ ನಿವೃತ್ತವಾಗಲಿಲ್ಲ. ಕರ್ಮಮಾಡಬೇಕೇ ಅಥವಾ ಬೇಡವೇ ಈ ವಿಷಯದಲ್ಲಿ ನನ್ನ ಬುದ್ಧಿಯು ಭ್ರಮಿತವಾಗಿದೆ. ಆದ್ದರಿಂದ ನನಗೆ ದಯಾಮಾಡಿ ಚೆನ್ನಾಗಿ ತಿಳಿಸಿಹೇಳು. ॥ ೧೬ ॥

ಶ್ರೀಭಗವಾನುವಾಚ

ಸ ಏಷ ಜೀವೋ ವಿವರಪ್ರಸೂತಿಃ
ಪ್ರಾಣೇನ ಘೋಷೇಣ ಗುಹಾಂ ಪ್ರವಿಷ್ಟಃ ।
ಮನೋಮಯಂ ಸೂಕ್ಷ್ಮಮುಪೇತ್ಯ ರೂಪಂ
ಮಾತ್ರಾ ಸ್ವರೋ ವರ್ಣ ಇತಿ ಸ್ಥವಿಷ್ಠಃ ॥ ೧೭ ॥

ಯಥಾನಲಃ ಖೇಽನಿಲಬಂಧುರೂಷ್ಮಾ
ಬಲೇನ ದಾರುಣ್ಯಧಿಮಥ್ಯಮಾನಃ ।
ಅಣುಃ ಪ್ರಜಾತೋ ಹವಿಷಾ ಸಮಿಧ್ಯತೇ
ತಥೈವ ಮೇ ವ್ಯಕ್ತಿರಿಯಂ ಹಿ ವಾಣೀ ॥ ೧೮ ॥

ಏವಂ ಗದಿಃ ಕರ್ಮ ಗತಿರ್ವಿಸರ್ಗೋ
ಘ್ರಾಣೋ ರಸೋ ದೃಕ್ ಸ್ಪರ್ಶಃ ಶ್ರುತಿಶ್ಚ ।
ಸಂಕಲ್ಪವಿಜ್ಞಾನಮಥಾಭಿಮಾನಃ
ಸೂತ್ರಂ ರಜಃಸತ್ತ್ವತಮೋವಿಕಾರಃ ॥ ೧೯ ॥

ಅಯಂ ಹಿ ಜೀವಸ್ತ್ರಿವೃದಬ್ಜಯೋನಿ-
ರವ್ಯಕ್ತ ಏಕೋ ವಯಸಾ ಸ ಆದ್ಯಃ ।
ವಿಶ್ಲಿಷ್ಟಶಕ್ತಿರ್ಬಹುಧೇವ ಭಾತಿ
ಬೀಜಾನಿ ಯೋನಿಂ ಪ್ರತಿಪದ್ಯ ಯದ್ವತ್ ॥ ೨೦ ॥

ಶ್ರೀಭಗವಂತನು ಹೇಳುತ್ತಾನೆ – ಪ್ರಿಯ ಉದ್ಧವಾ! ಏಕಮಾತ್ರ ಪರಮೇಶ್ವರನೇ ವಿಶ್ವದ ರೂಪದಲ್ಲಿದ್ದಾನೆ. "ಜೀವಯತಿ ಇತಿ ಜೀವಃ" ಅರ್ಥಾತ್ – ಪರಮಾತ್ಮನೇ ಎಲ್ಲರಿಗೆ ಚೇತನಾ ಶಕ್ತಿಯನ್ನು ಮತ್ತು ಜೀವನಶಕ್ತಿಯನ್ನು ಕರುಣಿಸುತ್ತಾನೆ. ಆದ್ದರಿಂದ ಜೀವರೂಪದಿಂದ ಪರಮಾತ್ಮನೇ ಇದ್ದಾನೆ. ಆ ಪರಮೇಶ್ವರನೇ ಮೊದಲಿಗೆ ಅನಾಹತ ನಾದಸ್ವರೂಪ ಪರಾವಾಣೀ ಹೆಸರಿನ ಪ್ರಾಣದೊಂದಿಗೆ ಮೂಲಾಧಾರ ಚಕ್ರದಲ್ಲಿ ಪ್ರವೇಶಿಸುತ್ತಾನೆ. ಮತ್ತೆ ಮನೋಮಯ ರೂಪವನ್ನು ಮನಸ್ಸಿನಿಂದ ಗ್ರಹಿಸಿ ಮಣಿಪೂರಕ ಚಕ್ರದಲ್ಲಿ ಪಶ್ಯಂತಿ ಹೆಸರಿನ ವಾಣಿಯ ಸೂಕ್ಷ್ಮರೂಪವನ್ನು ಧರಿಸುತ್ತಾನೆ. ಹಾಗೆಯೇ ಕಂಠದೇಶದಲ್ಲಿ ಸ್ಥಿತ ವಿಶುದ್ಧ ಹೆಸರಿನ ಚಕ್ರದಲ್ಲಿ ಬಂದು ಮಧ್ಯಮಾ ಹೆಸರಿನ ರೂಪವನ್ನು ಧರಿಸುತ್ತಾನೆ. ಅನಂತರ ಬಾಯಿಗೆ ಬಂದು ಅಕಾರಾದಿ ಮಾತ್ರಾ, ಸ್ವರ, ವರ್ಣ ಮುಂತಾದ ರೂಪಗಳಲ್ಲಿ ವೈಖರೀ ಹೆಸರಿನಿಂದ ವಾಣಿಯ ಸ್ಥೂಲ ರೂಪವನ್ನು ಧರಿಸುತ್ತಾನೆ. ಈ ಪ್ರಕಾರ ಶಬ್ದಬ್ರಹ್ಮನ ರೂಪದಲ್ಲಿ ಪರಮಾತ್ಮನದೇ ಅಭಿವ್ಯಕ್ತಿ ಎಂದು ತಿಳಿಯಬೇಕು. ॥ ೧೭ ॥ ಆಕಾಶದಲ್ಲಿ ಅಗ್ನಿಯು ಊಷ್ಮಾ ಅಥವಾ ವಿದ್ಯುತ್ತಿನ ರೂಪದಲ್ಲಿ ಸ್ಥಿತವಾಗಿರುತ್ತದೆ. ಅದೇ ಅಗ್ನಿಯು ಬಲಪೂರ್ವಕ ಕಡೆಗೋಲಿನಿಂದ ಅರಣಿಯನ್ನು ಕಡೆದಾಗ ಸಣ್ಣ-ಸಣ್ಣ ಕಿಡಿಗಳಾಗಿ ಪ್ರಕಟವಾಗುತ್ತದೆ. ಆದರೆ ಆ ಅಗ್ನಿಯು ಹವಿರ್ದ್ರವ್ಯವನ್ನು ಪಡೆದಾಗ ಪ್ರಜ್ವಲಿತವಾಗಿ ಪ್ರಚಂಡರೂಪವನ್ನು ಪಡೆಯುತ್ತದೆ. ಹೀಗೆಯೇ ಈ ವಾಣಿಯೂ ಕೂಡ ಸೂಕ್ಷ್ಮರೂಪದಿಂದ ಸ್ಥೂಲರೂಪದಲ್ಲಿ ಪ್ರಕಟವಾಗುತ್ತದೆ. ಈ ಪ್ರಕಾರ ಶಬ್ದಬ್ರಹ್ಮನ ರೂಪದಲ್ಲಿ ನನ್ನದೇ ಅಭಿವ್ಯಕ್ತಿಯಾಗಿದೆ. ॥ ೧೮ ॥ ಇದೇ ರೀತಿ ಬೇರೆ ಕ್ರಿಯೆಗಳ ಕುರಿತು ತಿಳಿದುಕೋ. ಅವೆಲ್ಲ ನನ್ನದೇ ಅಭಿವ್ಯಕ್ತಿಯಾಗಿವೆ. ಮಾತಾಡುವುದು, ಕರ್ಮಮಾಡುವುದು, ನಡೆಯುವುದು, ಮಲ-ಮೂತ್ರ ವಿಸರ್ಜಿಸುವುದು, ಮೂಸುವುದು, ರುಚಿ ತೆಗೆದುಕೊಳ್ಳುವುದು, ನೋಡುವುದು, ಸ್ಪರ್ಶಿಸುವುದು, ಕೇಳುವುದು ಮನಸಿನ ಮೂಲಕ ಸಂಕಲ್ಪ-ವಿಕಲ್ಪಗೈಯ್ಯುವುದು, ಬುದ್ಧಿಯಿಂದ ಅರಿಯುವುದು, ಅಭಿಮಾನಪಡುವುದು, ಮುಂತಾದ ಎಲ್ಲ ಕ್ರಿಯೆಗಳೂ, ಮಹತ್ತತ್ತ್ವ ಹಾಗೂ ಸತ್ತ್ವ, ರಜ, ತಮ ಮೊದಲಾದ ಮೂರೂ ಗುಣಗಳ ವಿಕಾರಗಳೂ, ಇದಲ್ಲದೆ ಇರುವ ಈ ದೃಶ್ಯಪ್ರಪಂಚ ಎಲ್ಲವೂ ನನ್ನದೇ ಅಭಿವ್ಯಕ್ತಿ ಎಂದು ತಿಳಿ. ಇವೆಲ್ಲ ರೂಪಗಳಲ್ಲಿ ಪರಮಾತ್ಮನಾದ ನಾನೇ ಪ್ರಕಾಶಿತನಾಗುತ್ತಿದ್ದೇನೆ. ॥ ೧೯ ॥ ಪರಮಾತ್ಮನೇ ತ್ರಿಗುಣಮಯ ಬ್ರಹ್ಮಾಂಡರೂಪೀ, ಕಮಲವನ್ನು ಉಂಟುಮಾಡುವವನು. ಆ ನಾರಾಯಣನು ಅವ್ಯಕ್ತನೂ ಆಗಿದ್ದಾನೆ ಮತ್ತು ಎಲ್ಲ ರೂಪಗಳಲ್ಲಿ ವಿಭಕ್ತನಾಗಿಯೂ ಏಕಮಾತ್ರ ಅವನೇ ಆಗಿದ್ದಾನೆ. ಪುರಾಣಪುರುಷನೂ, ಎಲ್ಲರ ಆದಿಯೂ ಆಗಿದ್ದಾನೆ. ಅವನೇ ಅನೇಕ ಶಕ್ತಿಗಳಲ್ಲಿ ತನ್ನನ್ನು ವಿಭಜಿಸಿಕೊಂಡು ಅನೇಕ ರೂಪಗಳನ್ನು ಧರಿಸಿರುವನು. ಅವನು ಆಯಾಯಾ ರೂಪಗಳಲ್ಲಿ ಪ್ರಕಾಶಿತನಾಗುತ್ತಿದ್ದಾನೆ. ಬೀಜವನ್ನು ನೆಲದಲ್ಲಿ ನೆಟ್ಟರೆ ಅದು ಅನೇಕ ರೂಪವಾಗಿ ಅಭಿವ್ಯಕ್ತವಾಗುವಂತೆ, ಪರಮಾತ್ಮನ ಉಜ್ಜೀವನೀ ಶಕ್ತಿಯನ್ನು ಪಡೆದು ಈ ಸಮಸ್ತ ವಿಶ್ವವು ಅನೇಕ ರೂಪಗಳಲ್ಲಿ

ಯಸ್ಮಿನ್ನಿದಂ ಪ್ರೋತಮಶೇಷಮೋತಂ
ಪಟೋ ಯಥಾ ತಂತುವಿತಾನಸಂಸ್ಥಃ ।
ಯ ಏಷ ಸಂಸಾರತರುಃ ಪುರಾಣಃ
ಕರ್ಮಾತ್ಮಕಃ ಪುಷ್ಪಫಲೇ ಪ್ರಸೂತೇ ॥ ೨೧ ॥

ಪ್ರಕಟವಾಗಿದೆ. ಇದೆಲ್ಲವೂ ಆ ಪರಮಾತ್ಮನದೇ ಅಭಿವ್ಯಕ್ತಿಯಾಗಿದೆ. ಬಟ್ಟೆಯಲ್ಲಿ ನೂಲು ಓತಪ್ರೋತವಾಗಿರುವಂತೆ ಈ ವಿಶ್ವದಲ್ಲಿ ಏಕಮಾತ್ರ ಪರಮಾತ್ಮನೇ ಓತಪ್ರೋತನಾಗಿದ್ದಾನೆ. ಅವನೇ ತುಂಬಿರುವನು. ಈ ಪ್ರಪಂಚರೂಪೀ ವೃಕ್ಷವು ಪುರಾತನವಾಗಿದೆ. ಕರ್ಮದ ಪರಂಪರೆ ಎಂದಿನಿಂದಲೋ ನಡೆದುಕೊಂಡು ಬಂದಿದೆ. ಆದ್ದರಿಂದ ಕರ್ಮರೂಪವು ಅವನೇ ಆಗಿದ್ದಾನೆ. ಆಗಿದೆ, ಆ ಕರ್ಮವೇ ಪುಷ್ಪ ಮತ್ತು ಫಲವನ್ನು ಉತ್ಪನ್ನ ಮಾಡುತ್ತದೆ. ॥ ೨೦-೨೧ ॥

ದ್ವೇ ಅಸ್ಯ ಬೀಜೇ ಶತಮೂಲಸ್ತ್ರಿನಾಲಃ
ಪಂಚಸ್ಕಂಧಃ ಪಂಚರಸಪ್ರಸೂತಿಃ ।
ದಶೈಕಶಾಖೋ ದ್ವಿಸುಪರ್ಣನೀಡ-
ಸ್ತ್ರಿ ವಲ್ಕಲೋ ದ್ವಿಫಲೋಽರ್ಕಂ ಪ್ರವಿಷ್ಟಃ ॥ ೨೨ ॥

ಈ ಪ್ರಪಂಚ ವೃಕ್ಷಕ್ಕೆ ಪಾಪ ಮತ್ತು ಪುಣ್ಯರೂಪೀ ಎರಡು ಬೀಜಗಳಿವೆ. ನೂರಾರು ವಾಸನೆಗಳೇ ಇದರ ಬೇರು ಆಗಿದೆ. ಮೂರು ಗುಣಗಳೇ ಇದರ ಕಾಂಡವಾಗಿದೆ. ಪಂಚಮಹಾಭೂತಗಳೇ ದಪ್ಪವಾದ ಐದು ಶಾಖೆಗಳಿವೆ. ಅದರಲ್ಲಿ ಐದು ಪ್ರಕಾರದ (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ರಸಗಳು ಹೊರಡುತ್ತವೆ. ಹತ್ತು ಇಂದ್ರಿಯಗಳು ಮತ್ತು ಒಂದು ಮನಸ್ಸೇ ಟೊಂಗೆಗಳು. ಒಂದು ಜೀವ ಮತ್ತೊಂದು ಈಶ್ವರ ಈ ವೃಕ್ಷದಲ್ಲಿ ಗೂಡುಕಟ್ಟಿಕೊಂಡು ವಾಸಿಸುತ್ತಾರೆ. ವಾತ, ಪಿತ್ತ , ಕಫ ಇವು ಮೂರು ಇದರ ಸಿಪ್ಪೆಗಳಾಗಿವೆ. ಸುಖ-ದುಃಖ ಇವೆರಡು ಫಲಗಳಾಗಿವೆ. ಇಂತಹ ಈ ಪ್ರಪಂಚವೃಕ್ಷವು ಸೂರ್ಯಮಂಡಲದವರೆಗೆ ಹಬ್ಬಿದೆ. ಅವಿದ್ಯೆಗೆ ಮಹತ್ತ್ವವನ್ನಿತ್ತು ವಿಷಯಲೋಲುಪರಾದರೋ ಇದರ ದುಃಖರೂಪೀ ಫಲವನ್ನು ಉಣ್ಣುವರು. ಆದರೆ ವಿದ್ಯೆಗೆ ಮಹತ್ತ್ವವನ್ನೀಯುವವರು ಪವಿತ್ರಾತ್ಮರು ಇದರ ಸುಖರೂಪೀ ಫಲವನ್ನು ಮೆಲ್ಲುವರು. ಇಂತಹ ಪರಮಹಂಸ ಶ್ರೇಷ್ಠ ಮಹಾತ್ಮರು ಆ ಅದ್ವಿತೀಯ ಬ್ರಹ್ಮನನ್ನೇ ಅನೇಕ ರೂಪಗಳಲ್ಲಿ ನೋಡುತ್ತಾರೆ. ವಾಸ್ತವವಾಗಿ ವೇದದ ಈ ತಾತ್ಪರ್ಯವನ್ನು ತಿಳಿದವರೇ ಸರಿಯಾಗಿ ಅರಿತವರಾಗಿದ್ದಾರೆ. ॥ ೨೨-೨೩ ॥ ಎಲೈ ಉದ್ಧವನೇ ! ಈ ಪ್ರಕಾರ ಸದ್ಗುರುವಿನ ಉಪಾಸನೆಯಿಂದ ಹಾಗೂ ಅನನ್ಯ ಭಕ್ತಿಯಿಂದ ನೀನು ಜ್ಞಾನ ಸಂಪನ್ನನಾದಾಗ ಮತ್ತೆ ಎಚ್ಚರಿಕೆಯಿಂದ ಜ್ಞಾನರೂಪೀ ಹರಿತವಾದ ಖಡ್ಗದಿಂದ ನಿನ್ನ ಜೀವಭಾವವನ್ನು ತ್ಯಾಗ ಮಾಡುವೆ ಮತ್ತು ಆತ್ಮಸ್ವರೂಪವನ್ನು ಅರಿತುಕೊಂಡು ಆ ಅಸ್ತ್ರವನ್ನೂ ತ್ಯಾಗಗೈದು ಶಾಶ್ವತವಾಗಿ ನಿನ್ನ ಅಖಂಡಸ್ವರೂಪದಲ್ಲಿ ಸ್ಥಿತನಾಗುವೆ. ॥ ೨೪ ॥

ಅದಂತಿ ಚೈಕಂ ಫಲಮಸ್ಯ ಗೃಧ್ರಾ
ಗ್ರಾಮೇಚರಾ ಏಕಮರಣ್ಯವಾಸಾಃ ।
ಹಂಸಾ ಯ ಏಕಂ ಬಹುರೂಪಮಿಜ್ಯೈ-
ರ್ಮಾಯಾಮಯಂ ವೇದ ಸ ವೇದ ವೇದಮ್ ॥ ೨೩ ॥

ಏವಂ ಗುರೂಪಾಸನಯೈಕಭಕ್ತ್ಯಾ
ವಿದ್ಯಾಕುಠಾರೇಣ ಶಿತೇನ ಧೀರಃ ।
ವಿವೃಶ್ಚ್ಯ ಜೀವಾಶಯಮಪ್ರಮತ್ತಃ
ಸಂಪದ್ಯ ಚಾತ್ಮಾನಮಥ ತ್ಯಜಾಸ್ತ್ರಮ್ ॥ ೨೪ ॥

ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ದ್ವಾದಶೋಽಧ್ಯಾಯಃ ॥ ೧೨ ॥

# ಹದಿಮೂರನೆಯ ಅಧ್ಯಾಯ

## ಹಂಸರೂಪದಿಂದ ಸನಕಾದಿಗಳಿಗೆ ಮಾಡಿದ ಉಪದೇಶದ ವರ್ಣನೆ

*ಶ್ರೀಭಗವಾನುವಾಚ*

ಸತ್ತ್ವಂ ರಜಸ್ತಮ ಇತಿ ಗುಣಾ ಬುದ್ಧೇರ್ನ ಚಾತ್ಮನಃ।
ಸತ್ತ್ವೇನಾನ್ಯತಮೌ ಹನ್ಯಾತ್ಸತ್ತ್ವಂ ಸತ್ತ್ವೇನ ಚೈವ ಹಿ ॥ ೧ ॥

ಸತ್ತ್ವಾದ್ಧರ್ಮೋ ಭವೇದ್ವೃದ್ಧಾತ್ಪುಂಸೋ ಮದ್ಭಕ್ತಿಲಕ್ಷಣಃ।
ಸಾತ್ತ್ವಿಕೋಪಾಸಯಾ ಸತ್ತ್ವಂ ತತೋ ಧರ್ಮಃ ಪ್ರವರ್ತತೇ ॥ ೨ ॥

ಧರ್ಮೋ ರಜಸ್ತಮೋ ಹನ್ಯಾತ್ಸತ್ತ್ವವೃದ್ಧಿರನುತ್ತಮಃ।
ಆಶು ನಶ್ಯತಿ ತನ್ಮೂಲೋ ಹ್ಯಧರ್ಮ ಉಭಯೇ ಹತೇ ॥ ೩ ॥

ಆಗಮೋಽಪಃ ಪ್ರಜಾ ದೇಶಃ ಕಾಲಃ ಕರ್ಮ ಚ ಜನ್ಮ ಚ।
ಧ್ಯಾನಂ ಮಂತ್ರೋಽಥ ಸಂಸ್ಕಾರೋ ದಶೈತೇ ಗುಣಹೇತವಃ ॥ ೪ ॥

ತತ್ತತ್ ಸಾತ್ತ್ವಿಕಮೇವೈಷಾಂ ಯದ್ಯದ್ವೃದ್ಧಾಃ ಪ್ರಚಕ್ಷತೇ।
ನಿಂದಂತಿ ತಾಮಸಂ ತತ್ತದ್ರಾಜಸಂ ತದುಪೇಕ್ಷಿತಮ್ ॥ ೫ ॥

ಸಾತ್ತ್ವಿಕಾನ್ಯೇವ ಸೇವೇತ ಪುಮಾನ್ ಸತ್ತ್ವವಿವೃದ್ಧಯೇ।
ತತೋ ಧರ್ಮಸ್ತತೋ ಜ್ಞಾನಂ ಯಾವತ್ ಸ್ಮೃತಿರಪೋಹನಮ್ ॥ ೬ ॥

ವೇಣುಸಂಘರ್ಷಜೋ ವಹ್ನಿರ್ದಗ್ಧ್ವಾ ಶಾಮ್ಯತಿ ತದ್ವನಮ್।
ಏವಂ ಗುಣವ್ಯತ್ಯಯಜೋ ದೇಹಃ ಶಾಮ್ಯತಿ ತತ್ಕ್ರಿಯಃ ॥ ೭ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ** – ಪ್ರಿಯ ಉದ್ಧವಾ! ಸತ್ತ್ವ, ರಜ, ತಮ, ಈ ಮೂರೂ ಗುಣಗಳು ಬುದ್ಧಿಯದಾಗಿವೆ, ಆತ್ಮನದಲ್ಲ. ಸತ್ತ್ವಗುಣದ ಮೂಲಕ ರಜ ಮತ್ತು ತಮೋಗುಣಗಳನ್ನು ನಾಶಮಾಡಿ, ಮತ್ತೆ ಅಂತಃಕರಣದ ಶುದ್ಧಿಯಾದ ಬಳಿಕ ಸತ್ತ್ವಗುಣವನ್ನು ತ್ಯಜಿಸಿ, ಗುಣಾತೀತನಾಗಬೇಕು. ॥ ೧॥ ಪುರುಷನು ಸತ್ತ್ವಗುಣ ಸಂಪನ್ನನಾದಾಗ ಭಗವತ್ಪ್ರಾಪ್ತಿಯನ್ನು ಮಾಡಿಸುವ ಧರ್ಮದ ವೃದ್ಧಿಯಾಗುತ್ತದೆ. ಸಾತ್ತ್ವಿಕ ಪದಾರ್ಥಗಳನ್ನೇ ಸೇವಿಸುವುದರಿಂದ ಕ್ರಮಶಃ ಸತ್ತ್ವಗುಣವು ಬೆಳೆಯುತ್ತದೆ. ತತ್ಫಲವಾಗಿ ಧರ್ಮದಲ್ಲಿ ಪ್ರವೃತ್ತಿ ಬೆಳೆಯುತ್ತದೆ. ॥ ೨॥ ಸತ್ತ್ವಗುಣವು ಚೆನ್ನಾಗಿ ಬೆಳೆದಾಗ ರಜ ಮತ್ತು ತಮ ಇವೆರಡನ್ನು ಅದು ಪೂರ್ಣವಾಗಿ ನಾಶಮಾಡಿಬಿಡುತ್ತದೆ. ಅಧರ್ಮವು ರಜ ಹಾಗೂ ತಮದ ಮೂಲವಾಗಿದೆ, ಮತ್ತೆ ಆ ಅಧರ್ಮವೂ ಕೂಡಲೇ ನಾಶವಾಗಿಬಿಡುತ್ತದೆ. ಈ ಪ್ರಕಾರ ಪುರುಷನು ಪೂರ್ಣರೂಪದಿಂದ ಶುದ್ಧನಾಗುತ್ತಾನೆ. ॥ ೩ ॥ ಗುಣಗಳ ವೃದ್ಧಿಗಾಗಿ ಈ ಹತ್ತು ಕಾರಣಗಳನ್ನು ಹೇಳಲಾಗಿವೆ. (೧) ಶಾಸ್ತ್ರ, (೨) ಜಲ, (೩) ಪ್ರಜೆ 'ಸಂತತಿ', (೪) ದೇಶ, (೫) ಕಾಲ, (೬) ಕರ್ಮ, (೭) ಜನ್ಮ, (೮) ಧ್ಯಾನ, (೯) ಮಂತ್ರ, (೧೦) ಸಂಸ್ಕಾರ. ಈ ಹತ್ತು ವಸ್ತುಗಳು ಸಾತ್ತ್ವಿಕವಾಗಿದ್ದರೆ ಸತ್ತ್ವಗುಣವನ್ನು, ರಾಜಸವಾಗಿದ್ದರೆ ರಜೋಗುಣವನ್ನು, ತಾಮಸವಾಗಿದ್ದರೆ ತಮೋಗುಣವನ್ನು ವೃದ್ಧಿ ಪಡಿಸುವುದಾಗಿದೆ. ॥ ೪ ॥ ಈಗ ಗುಣಗಳನ್ನು ಹೇಗೆ ಗುರುತಿಸಬೇಕು ; ಅದಕ್ಕಾಗಿ ಹೇಳುತ್ತಾರೆ – ಯಾರ ಕುರಿತು ಶ್ರೇಷ್ಠ ಜನರು ಪ್ರಶಂಸಿಸುತ್ತಾರೋ ಅವರನ್ನು ಸಾತ್ತ್ವಿಕರೆಂದೂ, ಯಾರನ್ನು ಉಪೇಕ್ಷಿಸುತ್ತಾರೋ ಅವರನ್ನು ರಾಜಸರೆಂದೂ, ಯಾರನ್ನು ನಿಂದಿಸುವರೋ ಅವರನ್ನು ತಾಮಸರೆಂದೂ ತಿಳಿಯಬೇಕು. ॥ ೫ ॥

ಸತ್ತ್ವಗುಣದ ವೃದ್ಧಿಗಾಗಿ ಸಾತ್ತ್ವಿಕ ವಸ್ತುಗಳನ್ನೇ ಸೇವಿಸಬೇಕು. ಅದರಿಂದ ಧರ್ಮ, ಜ್ಞಾನದ ವೃದ್ಧಿಯಾದೀತು. ತನ್ನ ಸ್ವರೂಪದ ಸ್ಮೃತಿ ಉಂಟಾದೀತು, ಎಲ್ಲ ರೀತಿಯ ಸಂಶಯಗಳು ನಾಶವಾಗುವವು. ಭಗವತ್ತತ್ತ್ವದ ಜ್ಞಾನ ಉಂಟಾಗುವವರೆಗೆ ಹೀಗೆ ಮಾಡುತ್ತಾ ಇರಬೇಕು. ॥ ೬ ॥ ಬಿದಿರುಗಳ ಘರ್ಷಣೆಯಿಂದ ಉಂಟಾದ ಬೆಂಕಿಯು ಬಿದಿರಿನ ವನವನ್ನೇ ಸುಟ್ಟು ಸ್ವಯಂ ಶಾಂತವಾಗುತ್ತದೆಯೋ ಹಾಗೆಯೇ ಮನುಷ್ಯನಲ್ಲಿ ಶಾಸ್ತ್ರವಿಚಾರದಿಂದ ಉತ್ಪನ್ನವಾದ ಜ್ಞಾನಾಗ್ನಿಯು ಶರೀರವು ಉಂಟಾಗುವ ಕಾರಣಗಳಾದ ತ್ರಿಗುಣಗಳನ್ನು ನಾಶಮಾಡಿ ಬಿಡುತ್ತದೆ. ಬಳಿಕ ಅದೂ ಸ್ವತಃ ಶಾಂತವಾಗುತ್ತದೆ. ॥ ೭ ॥

ಉದ್ಧವ ಉವಾಚ

ವಿದಂತಿ ಮರ್ತ್ಯಾಃ ಪ್ರಾಯೇಣ ವಿಷಯಾನ್ ಪದಮಾಪದಾಮ್ ।
ತಥಾಪಿ ಭುಂಜತೇ ಕೃಷ್ಣ ತತ್ಕಥಂ ಶ್ವಖರಾಜವತ್ ॥ ೮ ॥

ಉದ್ಧವನು ಕೇಳಿದನು – ಭಗವಂತಾ! ವಿಷಯಗಳು ವಿಪತ್ತುಗಳ ಮನೆಯಾಗಿದೆ ಎಂದು ಪ್ರಾಯಶಃ ಎಲ್ಲ ಮನುಷ್ಯರು ಇದನ್ನು ತಿಳಿಯುತ್ತಾರೆ. ಆದರೂ ಕೂಡ ಅವರು ನಾಯಿ, ಕತ್ತೆ, ಕುರಿಗಳಂತೆ ದುಃಖವನ್ನು ಸಹಿಸುತ್ತಲೂ ಅವನ್ನು ಭೋಗಿಸುತ್ತಾರೆ. ಇದರ ಕಾರಣವೇನು? ॥ ೮ ॥

ಶ್ರೀಭಗವಾನುವಾಚ

ಅಹಮಿತ್ಯನ್ಯಥಾಬುದ್ಧಿಃ ಪ್ರಮತ್ತಸ್ಯ ಯಥಾ ಹೃದಿ ।
ಉತ್ಸರ್ಪತಿ ರಜೋ ಘೋರಂ ತತೋ ವೈಕಾರಿಕಂ ಮನಃ ॥ ೯ ॥

ರಜೋಯುಕ್ತಸ್ಯ ಮನಸಃ ಸಂಕಲ್ಪಃ ಸವಿಕಲ್ಪಕಃ ।
ತತಃ ಕಾಮೋ ಗುಣಧ್ಯಾನಾದ್ದುಸ್ಸಹಃ ಸ್ಯಾದ್ಧಿ ದುರ್ಮತೇಃ ॥ ೧೦ ॥

ಕರೋತಿ ಕಾಮವಶಗಃ ಕರ್ಮಾಣ್ಯವಿಜಿತೇಂದ್ರಿಯಃ ।
ದುಃಖೋದರ್ಕಾಣಿ ಸಂಪಶ್ಯನ್ ರಜೋವೇಗವಿಮೋಹಿತಃ ॥ ೧೧ ॥

ರಜಸ್ತಮೋಭ್ಯಾಂ ಯದಪಿ ವಿದ್ವಾನ್ ವಿಕ್ಷಿಪ್ತಧೀಃ ಪುನಃ ।
ಅತಂದ್ರಿತೋ ಮನೋ ಯುಂಜನ್ ದೋಷದೃಷ್ಟಿರ್ನ ಸಜ್ಜತೇ ॥ ೧೨ ॥

ಅಪ್ರಮತ್ತೋಽನುಯುಂಜೀತ ಮನೋ ಮಯ್ಯರ್ಪಯನ್ ಶನೈಃ ।
ಅನಿರ್ವಿಣ್ಣೋ ಯಥಾಕಾಲಂ ಜಿತಶ್ವಾಸೋ ಜಿತಾಸನಃ ॥ ೧೩ ॥

ಏತಾವಾನ್ ಯೋಗ ಆದಿಷ್ಟೋ ಮಚ್ಛಿಷ್ಯೈಃ ಸನಕಾದಿಭಿಃ ।
ಸರ್ವತೋ ಮನ ಆಕೃಷ್ಯ ಮಯ್ಯದ್ಧಾಽಽವೇಶ್ಯತೇ ಯಥಾ ॥ ೧೪ ॥

ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ – ಪ್ರಿಯ ಉದ್ಧವನೇ! ಅಜ್ಞಾನಿಗಳು ತಮ್ಮ ಹೃದಯದಲ್ಲಿ 'ನಾನು-ನನ್ನದು' ಈ ಮಿಥ್ಯಾ ಅಭಿನಿವೇಶ (ಅಭಿಮಾನ) ತಳೆದಿರುತ್ತಾರೆ, ಇದೇ ಇವರ ದುಃಖದ ಕಾರಣವಾಗಿದೆ. ವಾಸ್ತವವಾಗಿ ಮನಸ್ಸು ಸ್ವರೂಪತಃ ಸತ್ತ್ವಗುಣ ವಿಶಿಷ್ಟವಾಗಿದೆ. ಆದ್ದರಿಂದ ಸ್ವರೂಪತಃ ಶುದ್ಧವಾಗಿದ್ದರೂ ಅಹಂತೆ, ಮಮತೆಯ ಕಾರಣ ಅದನ್ನು ಘೋರ ರಜೋಗುಣವು ಆವರಿಸಿಬಿಡುತ್ತದೆ. ॥ ೯ ॥ ಮತ್ತೆ ರಜೋಗುಣದ ಮೂಲಕ ಆವೃತವಾದ ಮನಸ್ಸು ಅನೇಕ ರೀತಿಯ ಸಂಕಲ್ಪ-ವಿಕಲ್ಪಗಳನ್ನು ಮಾಡತೊಡಗುತ್ತದೆ. ನಿರಂತರ ಆ ಗುಣಗಳದ್ದೇ ಚಿಂತನೆ ಆಗುತ್ತದೆ. ಈ ಪ್ರಕಾರ ದೂಷಿತ ಬುದ್ಧಿಯುಳ್ಳವನು ತನ್ನ ಇಂದ್ರಿಯಗಳ ಮೇಲಿನ ಹತೋಟಿಯನ್ನು ಕಳೆದುಕೊಳ್ಳುತ್ತಾನೆ. ಕಾಮನೆಗಳಿಗೆ ವಶೀಭೂತನಾಗಿ, ರಜೋಗುಣದ ವೇಗದಿಂದ ಮೋಹಿತನಾದವನು ಪರಿಣಾಮದಲ್ಲಿ ದುಃಖವೇ-ದುಃಖವಿರುವ ಕರ್ಮಗಳಲ್ಲಿ ಸಿಕ್ಕಿಕೊಳ್ಳುತ್ತಾನೆ. ॥ ೧೦-೧೧ ॥ ವಿದ್ವಾಂಸರ ಬುದ್ಧಿಯೂ ರಜೋಗುಣ, ತಮೋಗುಣಗಳಿಂದ ವಿಕ್ಷಿಪ್ತವಾಗುತ್ತದೆ. ಆದರೆ ಅವನು ಎಚ್ಚರಿಕೆಯಿಂದ ಮನಸ್ಸನ್ನು ಪರಮಾತ್ಮನಲ್ಲಿ ತೊಡಗಿಸಿ, ಆ ಕರ್ಮಗಳ ಕುರಿತು ದೋಷದೃಷ್ಟಿಯನ್ನಿಟ್ಟು ಅವುಗಳಲ್ಲಿ ಆಸಕ್ತನಾಗುವುದಿಲ್ಲ. ॥ ೧೨ ॥ ಆದ್ದರಿಂದ ಎಲೈ ಉದ್ಧವಾ! ಶ್ರೇಯಸ್ಸನ್ನು ಬಯಸುವವನು ಎಚ್ಚರವಾಗಿರಬೇಕು, ಕ್ರಮಾನುಸಾರ ಅಭ್ಯಾಸದ ಮೂಲಕ ಮನಸ್ಸನ್ನು ನನ್ನಲ್ಲಿ ತೊಡಗಿಸಬೇಕು. ಸಾಧನೆಯಲ್ಲಿ ಬೇಸರಿಸಬಾರದು. ಸಾಧ್ಯವಾದಷ್ಟು ಪ್ರಯತ್ನ ಮಾಡುತ್ತಾ ಇರಬೇಕು. ಪ್ರಾಣ ಮತ್ತು ಆಸನಗಳ ಮೇಲೆ ಹತೋಟಿ ಸಾಧಿಸಬೇಕು. ಎಲ್ಲ ವಿಷಯಗಳಿಂದ ಮನಸ್ಸನ್ನು ಚೆನ್ನಾಗಿ ಸೆಳೆದುಕೊಂಡಾಗ ಆ ನಿರ್ವಿಷಯವಾದ ಮನಸ್ಸು ನನ್ನಲ್ಲಿ ದೃಢವಾಗಿ ಸ್ಥಿರವಾಗಿ ಹೋಗುತ್ತದೆ. ಈ ಯೋಗವನ್ನು ನಾನೇ ಬ್ರಹ್ಮದೇವನ ಸಾನ್ನಿಧ್ಯದಲ್ಲಿ ಸನಕಾದಿಗಳಿಗೆ ಹೇಳಿದ್ದೆ. ॥ ೧೩-೧೪ ॥

ಉದ್ಧವ ಉವಾಚ

ಯದಾ ತ್ವಂ ಸನಕಾದಿಭ್ಯೋ ಯೇನ ರೂಪೇಣ ಕೇಶವ ।
ಯೋಗಮಾದಿಷ್ಟವಾನೇತದ್ ರೂಪಮಿಚ್ಛಾಮಿ ವೇದಿತುಮ್ ॥ ೧೫ ॥

ಉದ್ಧವನು ಕೇಳಿದನು – ಕೇಶವಾ! ನೀನು ಈ ಯೋಗವನ್ನು ಸನಕಾದಿಗಳಿಗೆ ಎಂದು, ಯಾವ ವಿಧದಿಂದ ಉಪದೇಶಿಸಿದ್ದೆ. ಅದನ್ನು ವಿವರವಾಗಿ ಕೇಳಲು ನಾನು ಬಯಸುತ್ತೇನೆ. ॥ ೧೫ ॥

ಶ್ರೀಭಗವಾನುವಾಚ

ಪುತ್ರಾ ಹಿರಣ್ಯಗರ್ಭಸ್ಯ ಮಾನಸಾಃ ಸನಕಾದಯಃ ।
ಪಪ್ರಚ್ಛುಃ ಪಿತರಂ ಸೂಕ್ಷ್ಮಾಂ ಯೋಗಸ್ಯೈಕಾಂತಿಕೀಂ ಗತಿಮ್ ॥ ೧೬ ॥

ಭಗವಾನ್ ಶ್ರೀಕೃಷ್ಣನು ಹೇಳಿದನು – ಪ್ರಿಯ ಉದ್ಧವಾ! ಸನಕಾದಿಗಳು ಬ್ರಹ್ಮನ ಮಾನಸಪುತ್ರರಾಗಿದ್ದಾರೆ. ಅವರು ಒಮ್ಮೆ ತಮ್ಮ ತಂದೆಯ ಬಳಿ ಯೋಗದ ಸೂಕ್ಷ್ಮ ಮತ್ತು ಅಂತಿಮ ಸೀಮೆಯ ಕುರಿತು ಪ್ರಶ್ನಿಸಿದರು. ಆ ಪ್ರಶ್ನೆ ಹೀಗಿತ್ತು – ॥ ೧೬ ॥

*ಸನಕಾದಯ ಊಚುಃ*

**ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಭೋ ।**
**ಕಥಮನ್ಯೋನ್ಯಸಂತ್ಯಾಗೋ ಮುಮುಕ್ಷೋರತಿತಿತೀರ್ಷೋಃ**
**॥ ೧೭ ॥**

*ಶ್ರೀಭಗವಾನುವಾಚ*

**ಏವಂ ಪೃಷ್ಟೋ ಮಹಾದೇವಃ ಸ್ವಯಂಭೂರ್ಭೂತಭಾವನಃ ।**
**ಧ್ಯಾಯಮಾನಃ ಪ್ರಶ್ನಬೀಜಂ ನಾಭ್ಯಪದ್ಯತ ಕರ್ಮಧೀಃ**
**॥ ೧೮ ॥**

**ಸ ಮಾಮಚಿಂತಯದ್ದೇವಃ ಪ್ರಶ್ನಪಾರತಿತೀರ್ಷಯಾ ।**
**ತಸ್ಯಾಹಂ ಹಂಸರೂಪೇಣ ಸಕಾಶಮಗಮಂ ತದಾ**
**॥ ೧೯ ॥**

**ದೃಷ್ಟ್ವಾ ಮಾಂ ತ ಉಪವ್ರಜ್ಯ ಕೃತ್ವಾ ಪಾದಾಭಿವಂದನಮ್ ।**
**ಬ್ರಹ್ಮಾಣಮಗ್ರತಃ ಕೃತ್ವಾ ಪಪ್ರಚ್ಛುಃ ಕೋ ಭವಾನಿತಿ**
**॥ ೨೦ ॥**

**ಇತ್ಯಹಂ ಮುನಿಭಿಃ ಪೃಷ್ಟಸ್ತತ್ತ್ವಜಿಜ್ಞಾಸುಭಿಸ್ತದಾ ।**
**ಯದವೋಚಮಹಂ ತೇಭ್ಯಸ್ತದುದ್ಧವ ನಿಬೋಧ ಮೇ**
**॥ ೨೧ ॥**

**ವಸ್ತುನೋ ಯದ್ಯನಾನಾತ್ವಮಾತ್ಮನಃ ಪ್ರಶ್ನ ಈದೃಶಃ ।**
**ಕಥಂ ಘಟೇತ ವೋ ವಿಪ್ರಾ ವಕ್ತುರ್ವಾ ಮೇ ಕ ಆಶ್ರಯಃ**
**॥ ೨೨ ॥**

**ಪಂಚಾತ್ಮಕೇಷು ಭೂತೇಷು ಸಮಾನೇಷು ಚ ವಸ್ತುತಃ ।**
**ಕೋ ಭವಾನಿತಿ ವಃ ಪ್ರಶ್ನೋ ವಾಚಾರಂಭೋ ಹ್ಯನರ್ಥಕಃ**
**॥ ೨೩ ॥**

**ಮನಸಾ ವಚಸಾ ದೃಷ್ಟ್ಯಾ ಗೃಹ್ಯತೇಽನ್ಯೈರಪೀಂದ್ರಿಯೈಃ ।**
**ಅಹಮೇವ ನ ಮತ್ತೋಽನ್ಯದಿತಿ ಬುಧ್ಯಧ್ವಮಂಜಸಾ**
**॥ ೨೪ ॥**

**ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಜಾಃ ।**
**ಜೀವಸ್ಯ ದೇಹ ಉಭಯಂ ಗುಣಾಶ್ಚೇತೋ ಮದಾತ್ಮನಃ**
**॥ ೨೫ ॥**

**ಸನಕಾದಿಗಳು ಬ್ರಹ್ಮದೇವರಲ್ಲಿ ಕೇಳಿದರು –** ಅಪ್ಪಾ! ಸ್ವಭಾವತಃ ಚಿತ್ತವು ವಿಷಯಗಳಲ್ಲಿ ಆಸಕ್ತವಾಗಿ ಅವುಗಳಲ್ಲಿ ಸೇರಿ ಕೊಳ್ಳುತ್ತದೆ ಮತ್ತು ಚಿಂತನದಿಂದ ಗುಣಗಳು ಚಿತ್ತದಲ್ಲಿ ಸೇರಿ ಕೊಂಡು ಬಿಡುತ್ತವೆ. ಹೀಗೆ ಗುಣಗಳು ಮತ್ತು ವಿಷಯಗಳು ಪರಸ್ಪರ ಒಂದರೊಳಗೊಂದು ಬೇರ್ಪಡಿಸುವುದು ಹೇಗೆ? ॥ ೧೭ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು –** ಪ್ರಿಯ ಉದ್ಧವನೇ! ಸನಕಾದಿಗಳು ಲೋಕಪಿತಾಮಹ ದೇವಶಿರೋಮಣಿ ಭೂತಭಾವನ ಸ್ವಯಂಭೂ ಬ್ರಹ್ಮದೇವರ ಬಳಿ ಈ ರೀತಿಯಾಗಿ ಪ್ರಶ್ನಿಸಿದರು. ಆದರೆ ಬ್ರಹ್ಮದೇವರ ಬುದ್ಧಿಯು ಕರ್ಮಗಳಲ್ಲೇ ತೊಡಗಿದ್ದರಿಂದ ಅವರು ಆ ಪ್ರಶ್ನೆಯ ಬೀಜವನ್ನು ತಿಳಿಯದೆ ಹೋದರು ಮತ್ತು ಯಾವ ಉತ್ತರವನ್ನು ಕೊಡದಾದರು. ॥ ೧೮ ॥ ಪ್ರಶ್ನೆಯ ಅಭಿ ಪ್ರಾಯವನ್ನು ಅರಿಯಲು ಬ್ರಹ್ಮದೇವರು ನನ್ನನ್ನು ಸ್ಮರಿಸಿದರು. ಆಗ ನಾನು ಹಂಸರೂಪದಿಂದ ಅವರ ಮುಂದೆ ಪ್ರಕಟನಾದೆ. ॥ ೧೯ ॥ ಆಗ ಆ ಸನಕಾದಿಗಳು ನನ್ನನ್ನು ನೋಡಿ ಬ್ರಹ್ಮನನ್ನು ಮುಂದೆ ಮಾಡಿಕೊಂಡು ನನ್ನ ಬಳಿಗೆ ಬಂದು ನಮಸ್ಕರಿಸಿ "ನೀವು ಯಾರು?" ಎಂದು ಕೇಳತೊಡಗಿದರು – ಎಲೈ ಉದ್ಧವನೇ! ಆ ಸನಕಾದಿ ಮುನಿಗಳು ತತ್ತ್ವದ ವಿಷಯದಲ್ಲಿ ತಿಳಿಯಲೆಂದೇ ಬಂದಿದ್ದರು. ಆದ್ದರಿಂದ ನಾನು ಅವರಿಗೆ ಏನು ಹೇಳಿದೆನೋ ಅದನ್ನು ಕೇಳು – ॥ ೨೦-೨೧ ॥ ವಿಪ್ರೋತ್ತಮರೇ! ಆತ್ಮನ ವಿಷಯ ದಲ್ಲಿ ನಿಮ್ಮಗಳ ಈ ಪ್ರಶ್ನೆ ಇದ್ದರೆ, ಆತ್ಮನಾದರೋ ಒಂದೇ ಆಗಿದೆ. ನಿಮ್ಮಲ್ಲಿರುವ ಆತ್ಮನೇ ನನ್ನಲ್ಲಿಯೂ ಇದ್ದಾನೆ. ಆತ್ಮನಲ್ಲದೆ ಬೇರೆ ವಸ್ತುವು ಇಲ್ಲವೇ ಇಲ್ಲ. ಹೀಗಿರುವಾಗ ನಾನು ಉತ್ತರ ಕೊಡಲಿಕ್ಕಾಗಿ ಮಾತಾಡಿದರೆ ಯಾವುದರ ಆಧಾರವನ್ನು ಪಡೆದು ಮಾತಾ ಡಲೀ? ॥ ೨೨ ॥

ಪಂಚಭೂತಾತ್ಮಕ ತತ್ತ್ವವು ಎಲ್ಲ ಪ್ರಾಣಿಗಳಲ್ಲಿ ಸಮಾನ ವಾಗಿದೆ, ಆದ್ದರಿಂದ ನೀವು "ಕೋ ಭವಾನ್" ಎಂದು ಪ್ರಶ್ನಿಸಿ ದುದು ಕೇವಲ ವಾಣಿಯ ವ್ಯವಹಾರವಾಗಿದೆ. ತಾತ್ತ್ವಿಕ ಅರ್ಥ ದಿಂದ ರಹಿತವಾಗಿದೆ. ॥ ೨೩ ॥ ಮನಸ್ಸಿನಿಂದ, ವಾಣಿಯಿಂದ, ದೃಷ್ಟಿಯಿಂದ ಅಥವಾ ಬೇರೆ ಇಂದ್ರಿಯಗಳಿಂದ ಏನೆಲ್ಲ ನೋಡಲು ಕೇಳಲು, ಚಿಂತಿಸಲು ಬರುತ್ತದೋ, ಅದೆಲ್ಲ "ನಾನೇ ಆಗಿದ್ದೇನೆ, ನಾನಲ್ಲದೆ ಬೇರೆ ಏನೂ ಇಲ್ಲ" ಎಂದು ನೀವು ನಿಶ್ಚಯವಾಗಿ ಅರಿತುಕೊಳ್ಳಿರಿ. ॥ ೨೪ ॥ ಮಕ್ಕಳಿರಾ! ವಾಸ್ತವಿಕ ರೂಪದಿಂದ ಜೀವಿಯು ನನ್ನದೇ ಸ್ವರೂಪವಾಗಿದ್ದಾನೆ, ಆದರೆ ಅತೀವ ಆಸಕ್ತಿಯ ಕಾರಣ ಚಿತ್ತವು ಗುಣಗಳಲ್ಲಿ ಪ್ರವೇಶಿಸಿ, ಅವುಗಳ ಸತತ ಚಿಂತನೆ ಯಿಂದ ಆ ಗುಣಗಳು ಚಿತ್ತದಲ್ಲಿ ಆಳವಾಗಿ ಹೊಕ್ಕವು. ಹೀಗೆ ಈ ಗುಣಮಯ ಮತ್ತು ಚಿತ್ತಮಯ ಎರಡೂ ದೇಹಗಳು ಜೀವಿಯ ಉಪಾಧಿಯಾಗಿದೆ. (ಗುಣಗಳಿಂದ ಉಂಟಾದ ಸ್ಥೂಲಶರೀರ ಹಾಗೂ ಚಿತ್ತದಿಂದ ಉಂಟಾದ ಸೂಕ್ಷ್ಮಶರೀರವಾಗಿದೆ.) ಅನಾತ್ಮ ಪದಾರ್ಥಗಳಲ್ಲಿ ಆಸಕ್ತಿಯನ್ನಿರಿಸಿ ಜೀವಿಯು ಕರ್ಮಗಳಲ್ಲಿ ಸಿಕ್ಕಿ ಕೊಳ್ಳುವನು. ವಾಸನಾಮಯ ಕಾರಣಶರೀರವನ್ನು ನಿರ್ಮಿಸಿ ಕೊಳ್ಳುವನು. ಇದೆಲ್ಲವೂ ಅಜ್ಞಾನದ ಕಾರಣವೇ ಆಗಿದೆ. ॥ ೨೫ ॥

ಗುಣೇಷು ಚಾವಿಶಚ್ಚಿತ್ತಮಭೀಕ್ಷ್ಣಂ ಗುಣಸೇವಯಾ ।
ಗುಣಾಶ್ಚ ಚಿತ್ತಪ್ರಭವಾ ಮದ್ರೂಪ ಉಭಯಂ ತ್ಯಜೇತ್ ॥ ೨೬ ॥

ಜಾಗ್ರತ್ಸ್ವಪ್ನಃ ಸುಷುಪ್ತಂ ಚ ಗುಣತೋ ಬುದ್ಧಿವೃತ್ತಯಃ ।
ತಾಸಾಂ ವಿಲಕ್ಷಣೋ ಜೀವಃ ಸಾಕ್ಷಿತ್ವೇನ ವಿನಿಶ್ಚಿತಃ ॥ ೨೭ ॥

ಯರ್ಹಿ ಸಂಸೃತಿಬಂಧೋಽಯಮಾತ್ಮನೋ ಗುಣವೃತ್ತಿದಃ ।
ಮಯಿ ತುರ್ಯೇ ಸ್ಥಿತೋ ಜಹ್ಯಾತ್ತ್ಯಾಗಸ್ತದ್ಗುಣಚೇತಸಾಮ್ ॥ ೨೮ ॥

ಅಹಂಕಾರಕೃತಂ ಬಂಧಮಾತ್ಮನೋಽರ್ಥವಿಪರ್ಯಯಮ್ ।
ವಿದ್ವಾನ್ ನಿರ್ವಿದ್ಯ ಸಂಸಾರಚಿಂತಾಂ ತುರ್ಯೇ ಸ್ಥಿತಸ್ತ್ಯಜೇತ್ ॥ ೨೯ ॥

ಯಾವನ್ನಾನಾರ್ಥಧೀಃ ಪುಂಸೋ ನ ನಿವರ್ತೇತ ಯುಕ್ತಿಭಿಃ ।
ಜಾಗರ್ತ್ಯಪಿ ಸ್ವಪನ್ನಜ್ಞಃ ಸ್ವಪ್ನೇ ಜಾಗರಣಂ ಯಥಾ ॥ ೩೦ ॥

ಅಸತ್ತ್ವಾದಾತ್ಮನೋಽನ್ಯೇಷಾಂ ಭಾವಾನಾಂ ತತ್ಕೃತಾ ಭಿದಾ ।
ಗತಯೋ ಹೇತವಶ್ಚಾಸ್ಯ ಮೃಷಾ ಸ್ವಪ್ನದೃಶೋ ಯಥಾ ॥ ೩೧ ॥

ಯೋ ಜಾಗರೇ ಬಹಿರನುಕ್ಷಣಧರ್ಮಿಣೋಽರ್ಥಾನ್
ಭುಂಕ್ತೇ ಸಮಸ್ತಕರಣೈರ್ಹೃದಿ ತತ್ಸದೃಕ್ಷಾನ್ ।
ಸ್ವಪ್ನೇ ಸುಷುಪ್ತ ಉಪಸಂಹರತೇ ಸ ಏಕಃ
ಸ್ಮೃತ್ಯನ್ವಯಾತ್ತ್ರಿಗುಣವೃತ್ತಿದೃಗಿಂದ್ರಿಯೇಶಃ ॥ ೩೨ ॥

ಮೇಲಿಂದ-ಮೇಲೆ ವಿಷಯಗಳನ್ನು ಸೇವಿಸುತ್ತಾ ಇರುವುದರಿಂದ ಚಿತ್ತವು ಆ ವಿಷಯಗಳಲ್ಲಿ ಸೇರಿಕೊಳ್ಳುವುದು. ಈ ವಿಷಯಗಳು ಚಿತ್ತವು ಸಂಕಲ್ಪ-ವಿಕಲ್ಪ ಮಾಡುವುದರಿಂದಲೇ ಉತ್ಪನ್ನವಾಗುತ್ತವೆ. ಸಾಧಕನು ಮದ್ರೂಪನಾಗಿ ಚಿತ್ತವು ಅಲೆಯುವುದನ್ನು ಹಾಗೂ ವಿಷಯಗಳ ಚಿಂತನೆಯನ್ನು ಬಿಟ್ಟುಬಿಡಬೇಕು. ॥ ೨೬ ॥ ಜಾಗ್ರತ್, ಸ್ವಪ್ನ, ಸುಷುಪ್ತಿ ಇವು ಮೂರು ಕ್ರಮಶಃ ಸಾತ್ತ್ವಿಕ, ರಾಜಸ, ತಾಮಸ ಮೂರೂ ಗುಣಗಳ ಕಾರಣ ಬುದ್ಧಿಯದೇ ವೃತ್ತಿಗಳಾಗಿವೆ. ಜೀವಿಯು ಇವೆಲ್ಲವುಗಳ ಸಾಕ್ಷಿಯಾಗಿದ್ದಾನೆ. ಅವನು ಮೂರೂ ಅವಸ್ಥೆಗಳಿಂದ ಅತೀತನಾಗಿದ್ದಾನೆ. ಹೀಗೆ ಸಿದ್ಧಾಂತರೂಪದಿಂದ ತಿಳಿಯಲಾಗಿದೆ. ॥ ೨೭ ॥ ಈ ಚಿತ್ತವೇ ಸಂಕಲ್ಪ-ವಿಕಲ್ಪಗಳ ಮೂಲಕ ಅನೇಕ ವೃತ್ತಿಗಳನ್ನು ಉಂಟುಮಾಡಿ ಆತ್ಮನನ್ನು ಮೂರೂ ಗುಣಗಳಲ್ಲಿ ಅಲೆಯುವಂತೆ ಮಾಡುತ್ತದೆ. ಇದೇ ಆತ್ಮನ ಬಂಧನವಾಗಿದೆ. ಆದ್ದರಿಂದ ಸಾಧಕನು ತುರೀಯ ಅವಸ್ಥೆಯಲ್ಲಿ ಸ್ಥಿತನಾಗಿ ಗುಣ ಮತ್ತು ಚಿತ್ತ ಎರಡನ್ನೂ ತ್ಯಜಿಸಬೇಕು. ॥ ೨೮ ॥ ''ನಾನು-ನನ್ನದು'' ಹೀಗೆ ಅಹಂಕಾರ ಪಡುವುದರಿಂದಲೇ ಬಂಧನವಾಗುತ್ತದೆ. ಅದು ಆತ್ಮನನ್ನು ತಾತ್ತ್ವಿಕ ಅರ್ಥದಿಂದ ವಿಪರೀತವಾಗಿಸುತ್ತದೆ. ವಿದ್ವಾಂಸನು ಇವುಗಳಿಂದ ವಿರಕ್ತನಾಗಿ ಪ್ರಾಪಂಚಿಕ ಚಿಂತೆಯನ್ನು ಬಿಟ್ಟುಬಿಡಬೇಕು. ತನ್ನ ತುರೀಯ ಸ್ವರೂಪದಲ್ಲಿ ಸ್ಥಿತನಾಗಿರಬೇಕು. ॥ ೨೯ ॥ ಈ ನಾನಾತ್ವದ ಭ್ರಮೆಯನ್ನು ಯುಕ್ತಿಗಳ ಮೂಲಕ ಮನುಷ್ಯನು ನಾಶಮಾಡುವ ತನಕ ಅವನು ಎಚ್ಚರವಾಗಿದ್ದರೂ ಅಜ್ಞಾನ ನಿದ್ದೆಯಲ್ಲಿ ಮಲಗಿಯೇ ಇರುತ್ತಾನೆ. ಸ್ವಪ್ನಪ್ರಪಂಚದಲ್ಲಿ ಅಜ್ಞಾನಿಯು ಸುಖೀ-ದುಃಖಿಯಾಗುವಂತೆ, ಅವನು ಜಾಗ್ರತ್‌ನಲ್ಲಿಯೂ ಪ್ರಪಂಚದ ಅಸ್ತಿತ್ವವನ್ನು ಸ್ವೀಕರಿಸಿ ಸುಖೀ-ದುಃಖಿಯಾಗುತ್ತಾ ಇರುತ್ತಾನೆ. ॥ ೩೦ ॥ ನಿಜವಾಗಿ ಆತ್ಮನ ಹೊರತು ಬೇರೆ ಯಾವುದಕ್ಕೂ ಅಸ್ತಿತ್ವವಿಲ್ಲ. ಸ್ವಪ್ನನೋಡುವವನ ಎಲ್ಲ ಕ್ರಿಯೆಗಳು ಮಿಥ್ಯೆಯಾಗಿರುವಂತೆ, ಅಜ್ಞಾನಿಯ ಎಲ್ಲ ಕ್ರಿಯೆಗಳು – ಅವುಗಳ ಕಾರಣ ಮತ್ತು ಅವುಗಳಲ್ಲಿ ಭೇದಬುದ್ಧಿ – ಇವೆಲ್ಲವೂ ಮಿಥ್ಯೆಯೇ ಆಗಿದೆ. (ಜ್ಞಾನ ಉಂಟಾದಾಗಲೇ ಈ ನಾನಾತ್ವದ ಭ್ರಮೆಯು ಹೊರಟುಹೋಗುತ್ತದೆ.) ॥ ೩೧ ॥

ಬಾಹ್ಯವಿಷಯಗಳೆಲ್ಲ ಪ್ರತಿಕ್ಷಣ ಪರಿವರ್ತನಶೀಲವಾಗಿವೆ. ಇಂತಹ ನಾಶವುಳ್ಳ, ಕ್ಷಣಭಂಗುರವಾದ ವಿಷಯಗಳನ್ನು ಇಂದ್ರಿಯಗಳ ಮೂಲಕ ಜಾಗ್ರದವಸ್ಥೆಯಲ್ಲಿ ಉಪಭೋಗಿಸುವವನೇ ಸ್ವಪ್ನಾವಸ್ಥೆಯಲ್ಲಿಯೂ ಅವನ್ನು ಭೋಗಿಸುತ್ತಿರುತ್ತಾನೆ, ಆದರೆ ಗಾಢವಾದ ನಿದ್ದೆಯಲ್ಲಿ ಇವೆಲ್ಲವೂ ಅಳಿದುಹೋಗುತ್ತವೆ. ಹೀಗೆ ಈ ಮೂರೂ ಅವಸ್ಥೆಗಳನ್ನು ಅನುಭವಿಸುವ ಸಾಕ್ಷಿ ಚೇತನ ಆತ್ಮನು ಒಂದೇ ಆಗಿದ್ದಾನೆ. ಅವನು ಮೂರೂ ಅವಸ್ಥೆಗಳನ್ನು ಅರಿಯುವವನಾಗಿದ್ದಾನೆ. ಮೂರು ಗುಣಗಳ ವೃತ್ತಿಗಳನ್ನು ನೋಡುವವನಾಗಿದ್ದಾನೆ. ॥ ೩೨ ॥ ಈ ಮನಸ್ಸಿನ ಮೂರು ಅವಸ್ಥೆಗಳು ಗುಣಗಳ ಕಾರಣದಿಂದಲೇ ಉಂಟಾಗಿವೆ. ಅದು ನನ್ನ ಮಾಯೆಯ ಮೂಲಕ ನನ್ನಲ್ಲೇ ಕಲ್ಪಿತವಾಗಿವೆ. ಈ ಅವಸ್ಥೆಗಳು 'ನಾನು-ನನ್ನದು' ಎಂಬ ಭಾವನೆಯಿಂದಲೇ ಉಂಟಾಗಿವೆ ಹೀಗೆ ವಿಚಾರಗೈದು ಈ ಎಲ್ಲ

ಏವಂ ವಿಮೃಶ್ಯ ಗುಣತೋ ಮನಸಸ್ತ್ರ್ಯವಸ್ಥಾ
ಮನ್ಮಾಯಯಾ ಮಯಿ ಕೃತಾ ಇತಿ ನಿಶ್ಚಿತಾರ್ಥಾಃ ।
ಸಂಛಿದ್ಯ ಹಾರ್ದಮನುಮಾನಸದುಕ್ತಿತೀಕ್ಷ್ಣ-
ಜ್ಞಾನಾಸಿನಾ ಭಜತ ಮಾಖಿಲಸಂಶಯಾಧಿಮ್ ॥ ೩೩ ॥

ಈಕ್ಷೇತ ವಿಭ್ರಮಮಿದಂ ಮನಸೋ ವಿಲಾಸಂ
ದೃಷ್ಟಂ ವಿನಷ್ಟಮತಿಲೋಲಮಲಾತಚಕ್ರಮ್ ।
ವಿಜ್ಞಾನಮೇಕಮುರುಧೇವ ವಿಭಾತಿ ಮಾಯಾ
ಸ್ವಪ್ನಸ್ತ್ರಿಧಾ ಗುಣವಿಸರ್ಗಕೃತೋ ವಿಕಲ್ಪಃ ॥ ೩೪ ॥

ದೃಷ್ಟಿಂ ತತಃ ಪ್ರತಿನಿವರ್ತ್ಯ ನಿವೃತ್ತತೃಷ್ಣ-
ಸ್ತೂಷ್ಣೀಂ ಭವೇನ್ನಿಜಸುಖಾನುಭವೋ ನಿರೀಹಃ ।
ಸಂದೃಶ್ಯತೇ ಕ್ವ ಚ ಯದೀದಮವಸ್ತುಬುದ್ಧ್ಯಾ
ತ್ಯಕ್ತಂ ಭ್ರಮಾಯ ನ ಭವೇತ್ ಸ್ಮೃತಿರಾನಿಪಾತಾತ್ ॥ ೩೫ ॥

ದೇಹಂ ಚ ನಶ್ವರಮವಸ್ಥಿತಮುತ್ಥಿತಂ ವಾ
ಸಿದ್ಧೋ ನ ಪಶ್ಯತಿ ಯತೋಽಧ್ಯಗಮತ್ ಸ್ವರೂಪಮ್ ।
ದೈವಾದಪೇತಮುತ ದೈವವಶಾದುಪೇತಂ
ವಾಸೋ ಯಥಾ ಪರಿಕೃತಂ ಮದಿರಾಮದಾಂಧಃ ॥ ೩೬ ॥

ದೇಹೋಽಪಿ ದೈವವಶಗಃ ಖಲು ಕರ್ಮ ಯಾವತ್
ಸ್ವಾರಂಭಕಂ ಪ್ರತಿಸಮೀಕ್ಷತ ಏವ ಸಾಸುಃ ।
ತಂ ಸಪ್ರಪಂಚಮಧಿರೂಢಸಮಾಧಿಯೋಗಃ
ಸ್ವಾಪ್ನಂ ಪುನರ್ನ ಭಜತೇ ಪ್ರತಿಬುದ್ಧವಸ್ತುಃ ॥ ೩೭ ॥

ಸಂಶಯಗಳ ಆಧಾರಸ್ವರೂಪ ಅಹಂಭಾವವನ್ನು ಅನುಮಾನ ಪ್ರಮಾಣದ ಮೂಲಕ, ಸಂತರವಾಣಿಗಳ ಮೂಲಕ, ಹರಿತವಾದ ಜ್ಞಾನರೂಪೀ ಖಡ್ಗದಿಂದ ಚೆನ್ನಾಗಿ ಕತ್ತರಿಸಿ, ತನ್ನ ಹೃದಯದಲ್ಲೇ ಸ್ಥಿತನಾದ ಪರಮಾತ್ಮನಾದ ನನ್ನನ್ನು ಭಜಿಸಬೇಕು. ॥ ೩೩ ॥ ಕಂಡುಬರುವ ಈ ಪ್ರಪಂಚವೆಲ್ಲವೂ ಮನಸ್ಸಿನ ವಿಲಾಸಮಾತ್ರವಾಗಿದೆ, ಭ್ರಮೆಯಾಗಿದೆ, ಅತಿ ಚಂಚಲವಾಗಿದೆ. ಇದರ ಗತಿಯನ್ನು ಯಾರೂ ತಿಳಿಯಲಾರದಷ್ಟು ವೇಗವಾಗಿ ಇದು ಚಕ್ರದಂತೆ ಸುತ್ತುತ್ತಾ ಇದೆ. ಇದು ನಾಶವುಳ್ಳದ್ದು, ಕ್ಷಣಭಂಗುರವಾಗಿದೆ. ವಿಜ್ಞಾನ ಅರ್ಥಾತ್ ಏಕಮಾತ್ರ ಪರಮಾತ್ಮನೇ ಸಗುಣ- ನಿರಾಕಾರರೂಪದಿಂದ ಅನೇಕ ರೂಪಗಳಾಗಿ ಪ್ರಕಾಶಿಸುತ್ತಿರುವನು, ಆದರೆ ಅವನು ಕಂಡು ಬರುವುದಿಲ್ಲ, ಅವನ ಮಾಯೆಯೇ ಅನೇಕ ರೂಪಗಳನ್ನು ಧರಿಸಿ ಕೊಂಡು ಕಾಣುತ್ತಿದ್ದಾಳೆ. ಆ ಮಾಯೆಯು ಸ್ವಪ್ನದಂತೆ ಮಿಥ್ಯೆಯೇ ಆಗಿದೆ. ಮೂರೂ ಗುಣಗಳ ಸೃಷ್ಟಿಯ ಕಾರಣದಿಂದಲೇ ಈ ಭೇದ-ಭ್ರಮೆ ಉಂಟಾಗುತ್ತದೆ. ಅದು ಅಜ್ಞಾನದಿಂದಲೇ ಕಲ್ಪಿತ ವಾಗಿದೆ. ॥ ೩೪ ॥ ಸಾಧಕನು ತೃಷ್ಣಾರಹಿತನಾಗಿ ವಿಷಯಗಳಿಂದ ದೃಷ್ಟಿಯನ್ನು ತೊಡೆದು ಅಂತರ್ಮುಖಿ ಯಾಗಬೇಕು. ಪೂರ್ಣವಾಗಿ ಉಪರಮನಾಗಬೇಕು. ತನ್ನ ಆತ್ಮಾನಂದದಲ್ಲೇ ಮಗ್ನನಾಗಿದ್ದು ಯಾವುದೇ ಕಾಮನೆಯನ್ನು ಮಾಡಬಾರದು. ಏನಾದರೂ ಕಂಡುಬಂದರೆ ಇದು ನಿಜವಲ್ಲ, ಮಾಯೆಯಾಗಿದೆ, ಇದರಿಂದ ನನಗೇನು ಮಾಡುವುದಿದೆ ? ಎಂದು ಅರಿತುಕೊಂಡು, ಅದರ ಕಡೆಯಿಂದ ಮುಖ ತಿರುಗಿಸಿಕೊಂಡರೆ ಭ್ರಮೆ ಆಗಲಾರದು. ಶಾರೀರಿಕ ವ್ಯವಹಾರದ ಸಂಸ್ಕಾರವಾದರೋ ಅವನ ಶರೀರವಿರುವ ತನಕ ಇದ್ದೀತು. ॥ ೩೫ ॥ ಸ್ವಸ್ವರೂಪವನ್ನು ಪಡೆದುಕೊಂಡ ಇಂತಹ ಸಿದ್ಧನಿಗೆ ಈ ನಶ್ವರದೇಹ ಕುಳಿತಿದೆ, ಅಥವಾ ನಿಂತಿದೆ ಎಂಬುದು ಅರಿವಿರುವುದಿಲ್ಲ, ಶರೀರದ ಮೇಲೆ ವಸ್ತ್ರವಿದೆ ಅಥವಾ ಇಲ್ಲ ಎಂಬುದೂ ತಿಳಿಯುವುದಿಲ್ಲ, ಮದಿರೆಯಿಂದ ಮದಮತ್ತನಾದ ವನಿಗೆ ತಮೋಗುಣದ ಪ್ರಭಾವದಿಂದ ಏನೂ ತಿಳಿಯುವುದಿಲ್ಲ ಆದರೆ ಜ್ಞಾನಿಗಾದರೋ ತನ್ನ ತುರೀಯ ಶುದ್ಧಸ್ವರೂಪದಲ್ಲೇ ಸ್ಥಿತಿ ಇರುತ್ತದೆ. ಇದರಿಂದ ಅವನಿಗೆ ಜಗತ್ತಿನ ಯಾವ ಎಚ್ಚರವೂ ಇರುವುದಿಲ್ಲ. ॥ ೩೬ ॥

ದೇಹವು ಪ್ರಾರಬ್ಧಕ್ಕಧೀನವಾದ ಕಾರಣ ಶರೀರವನ್ನು ದೊರಕಿ ಸುವ ಕರ್ಮವು ಶೇಷವಾಗಿರುವ ತನಕ ಇವನು ಪ್ರಾಣಗಳ ಸಹಿತ ಬಿದ್ದುಹೋಗಲು ನಿರೀಕ್ಷಿಸುತ್ತಾನೆ. ಸಮಾಧಿಯಲ್ಲಿ ಅವನ ಸ್ಥಿತಿ ದೃಢವಾಗಿ ಇರುತ್ತದೆ, ಮತ್ತೆ ಅವನು ಪ್ರಪಂಚದಿಂದ ಅರ್ಥಾತ್ ಗುಣಗಳ ಕಾರ್ಯರೂಪೀ ದೇಹವನ್ನು ಸ್ವೀಕರಿಸುವುದಿಲ್ಲ, ಏಕೆಂದರೆ, ಅವನು ವಾಸ್ತವಿಕ ಪರಮಾತ್ಮತತ್ತ್ವವನ್ನು ತಿಳಿದುಕೊಂಡಿ ರುವನು. ಸ್ವಪ್ನದಿಂದ ಎಚ್ಚತ್ತವನು ಸ್ವಪ್ನದ ಮಾತನ್ನು ಸ್ವೀಕರಿಸ ದಂತೆ ಮತ್ತೆ ಅವನು ಈ ಅಜ್ಞಾನವನ್ನು ಸ್ವೀಕರಿಸುವುದಿಲ್ಲ, ಅವನ ಸ್ಥಿತಿ ಪರಮಾತ್ಮನಲ್ಲಿ ದೃಢವಾಗಿ ಆಗಿರುತ್ತದೆ. ॥ ೩೭ ॥

ಮಯ್ಯೈತದುಕ್ತಂ ವೋ ವಿಪ್ರಾ ಗುಹ್ಯಂ ಯತ್ಸಾಂಖ್ಯಯೋಗಯೋಃ।
ಜಾನೀತ ಮಾಽಽಗತಂ ಯಜ್ಞಂ ಯುಷ್ಮದ್ಧರ್ಮವಿವಕ್ಷಯಾ
॥ ೩೮ ॥

ಎಲೈ ಬ್ರಾಹ್ಮಣರೇ! ನಾನು ಸಾಂಖ್ಯ ಮತ್ತು ಯೋಗದ ವಿಷಯದಲ್ಲಿ ಶಾಸ್ತ್ರಗಳಲ್ಲಿ ತಿಳಿಸಿದ ಮಾತನ್ನು ನಿಮ್ಮಗಳಿಗೆ ಹೇಳಿರುವೆನು. ನೀವುಗಳು ಮೋಕ್ಷಧರ್ಮದ ವಿಷಯದಲ್ಲಿ ಅರಿಯಲು ಬಯಸಿದ್ದೀರಿ. ಅದನ್ನು ನಾನು ನಿಮಗೆ ಹೇಳಿದೆ. ಯಜ್ಞಸ್ವರೂಪೀ ಭಗವಂತನಾದ ಸ್ವಯಂ ನಾನೇ ಹಂಸರೂಪದಿಂದ ನಿಮ್ಮಗಳಿಗೆ ಉಪದೇಶಿಸಲು ಬಂದಿರುವೆನು. ಹೀಗೆ ನೀವೆಲ್ಲ ತಿಳಿಯಿರಿ. ॥ ೩೮॥

ಅಹಂ ಯೋಗಸ್ಯ ಸಾಂಖ್ಯಸ್ಯ ಸತ್ಯಸ್ಯರ್ತಸ್ಯ ತೇಜಸಃ।
ಪರಾಯಣಂ ದ್ವಿಜಶ್ರೇಷ್ಠಾಃ ಶ್ರಿಯಃ ಕೀರ್ತೇರ್ದಮಸ್ಯ ಚ
॥ ೩೯ ॥

ಎಲೈ ಶ್ರೇಷ್ಠ ಬ್ರಾಹ್ಮಣರಿರಾ! ಯೋಗ, ಸಾಂಖ್ಯ, ಸತ್ಯ, ಋತ, ತೇಜ, ಶ್ರೀ, ಕೀರ್ತಿ, ದಮ – ಇವೆಲ್ಲದರ ಆಶ್ರಯಸ್ಥಾನ ನಾನೇ ಆಗಿದ್ದೇನೆ. ॥ ೩೯ ॥ ಸಮತೆ ಹಾಗೂ ಅನಾಸಕ್ತಿ ಮುಂತಾದ ಇರುವ ಶ್ರೇಷ್ಠ ಗುಣಗಳೆಲ್ಲವೂ ನಿರ್ಗುಣನೂ, ನಿರಪೇಕ್ಷನೂ, ಎಲ್ಲರ ಹೇತುರಹಿತ ಸುಹೃದನೂ, ಎಲ್ಲರ ಪ್ರಿಯನೂ, ಪರಮಾತ್ಮನಾದ ನನ್ನನ್ನು ಭಜಿಸುತ್ತವೆ. ಇವೆಲ್ಲ ಗುಣಗಳು ನನ್ನಲ್ಲೇ ನಿತ್ಯವಾಸವಾಗಿರುವುವು. ॥ ೪೦ ॥ ಈ ರೀತಿ ಸನಕಾದಿ ಮುನಿಗಳ ಸಂದೇಹವನ್ನು ದೂರಗೊಳಿಸಿ ಅವರಿಗೆ ನಾನು ಉಪದೇಶ ಮಾಡಿದೆ. ಅವರು ಬಹಳ ಸಂತೋಷಗೊಂಡು ಪ್ರೇಮಮಗ್ನರಾಗಿ ಸ್ತುತಿಸತೊಡಗಿದರು. ॥ ೪೧ ॥

ಮಾಂ ಭಜಂತಿ ಗುಣಾಃ ಸರ್ವೇ ನಿರ್ಗುಣಂ ನಿರಪೇಕ್ಷಕಮ್ ।
ಸುಹೃದಂ ಪ್ರಿಯಮಾತ್ಮಾನಂ ಸಾಮ್ಯಾಸಂಗಾದಯೋಽಗುಣಾಃ
॥ ೪೦ ॥

ಇತಿ ಮೇ ಛಿನ್ನಸಂದೇಹಾ ಮುನಯಃ ಸನಕಾದಯಃ।
ಸಭಾಜಯಿತ್ವಾ ಪರಯಾ ಭಕ್ತ್ಯಾಗೃಣತ ಸಂಸ್ತವೈಃ
॥ ೪೧ ॥

ಈ ಪ್ರಕಾರ ಆ ಸನಕಾದಿ ಋಷಿಗಳು ಮಾಡಿದ ಸ್ತುತಿಯಿಂದ, ಪೂಜೆಯಿಂದ ನಾನು ಬಹಳ ಸಮ್ಮಾನಿತನಾಗಿ, ಬ್ರಹ್ಮದೇವರು, ಋಷಿಗಳು ನೋಡು-ನೋಡುತ್ತಿರುವಂತೆ ನಾನು ನನ್ನ ಧಾಮಕ್ಕೆ ಹೊರಟುಹೋದೆನು. ॥ ೪೨ ॥

ತೈರಹಂ ಪೂಜಿತಃ ಸಮ್ಯಕ್ ಸಂಸ್ತುತಃ ಪರಮರ್ಷಿಭಿಃ।
ಪ್ರತ್ಯೇಯಾಯ ಸ್ವಕಂ ಧಾಮ ಪಶ್ಯತಃ ಪರಮೇಷ್ಠಿನಃ
॥ ೪೨ ॥

ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ಭಕ್ತಿಯೋಗದ ಮಹಿಮೆ ಹಾಗೂ ಧ್ಯಾನವಿಧಿಯ ವರ್ಣನೆ

ಉದ್ಧವ ಉವಾಚ

ವದಂತಿ ಕೃಷ್ಣ ಶ್ರೇಯಾಂಸಿ ಬಹೂನಿ ಬ್ರಹ್ಮವಾದಿನಃ।
ತೇಷಾಂ ವಿಕಲ್ಪಪ್ರಾಧಾನ್ಯಮುತಾಹೋ ಏಕಮುಖ್ಯತಾ
॥ ೧ ॥

ಭವತೋದಾಹೃತಃ ಸ್ವಾಮಿನ್ ಭಕ್ತಿಯೋಗೋಽನಪೇಕ್ಷಿತಃ।
ನಿರಸ್ಯ ಸರ್ವತಃ ಸಂಗಂ ಯೇನ ತ್ವಯ್ಯಾವಿಶೇನ್ಮನಃ
॥ ೨ ॥

ಉದ್ಧವನು ಕೇಳಿದನು – ಶ್ರೀಕೃಷ್ಣಾ! ಬ್ರಹ್ಮವಾದಿ ಮಹಾತ್ಮರು ಆತ್ಮಕಲ್ಯಾಣಕ್ಕಾಗಿ ಧ್ಯಾನ, ಯೋಗ, ಭಕ್ತಿ, ಕರ್ಮ, ಸಾಂಖ್ಯ ಮುಂತಾದ ಅನೇಕ ಸಾಧನೆಗಳನ್ನು ಹೇಳಿರುವರು. ಇವೆಲ್ಲವೂ ಮುಖ್ಯವಾಗಿವೆಯೋ? ಅಥವಾ ಇವುಗಳಲ್ಲಿ ಯಾವುದಾದರೊಂದು ಮುಖ್ಯವಾಗಿದೆಯೇ? ॥ ೧ ॥ ಸ್ವಾಮೀ! ನೀನು ಈಗ ಭಕ್ತಿಯೋಗವನ್ನು ನಿರಪೇಕ್ಷ ಮತ್ತು ಸ್ವತಂತ್ರ ಸಾಧನೆಯೆಂದು ತಿಳಿಸಿರುವಿ. ಭಕ್ತಿಯ ಮೂಲಕ ಎಲ್ಲ ರೀತಿಯ ಆಸಕ್ತಿ ಅಳಿದು ಹೋಗಿ, ಮನಸ್ಸು ನಿನ್ನಲ್ಲಿ ತೊಡಗಿ ತದ್ರೂಪವಾಗುತ್ತದೆ ಎಂದು ಹೇಳಿದ್ದೀಯೇ. ॥ ೨ ॥

ಶ್ರೀಭಗವಾನುವಾಚ

ಕಾಲೇನ ನಷ್ಟಾ ಪ್ರಲಯೇ
ವಾಣೀಯಂ ವೇದಸಂಜ್ಞಿತಾ ।
ಮಯಾಽಽದೌ ಬ್ರಹ್ಮಣೇ ಪ್ರೋಕ್ತಾ
ಧರ್ಮೋ ಯಸ್ಯಾಂ ಮದಾತ್ಮಕಃ ॥ ೩ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವಾ! ಈ ವೇದವಾಣಿಯು ಕಾಲದ ಮೂಲಕ ಪ್ರಳಯದ ಸಮಯದಲ್ಲಿ ಲುಪ್ತವಾಗಿ ಹೋಗಿತ್ತು. ಮತ್ತೆ ಸೃಷ್ಟಿಯ ಸಮಯ ಬಂದಾಗ ನಾನೇ ನನ್ನ ಸಂಕಲ್ಪದಿಂದಲೇ ವೇದದ ಜ್ಞಾನವನ್ನು ಬ್ರಹ್ಮನಿಗೆ ಕರುಣಿಸಿದೆ. ವೇದದಲ್ಲಿ ನನ್ನ ಭಾಗವತ ಧರ್ಮದ್ದೇ ನಿರೂಪಣೆ ಮಾಡಲಾಗಿದೆ. ॥ ೩ ॥

ತೇನ ಪ್ರೋಕ್ತಾ ಚ ಪುತ್ರಾಯ ಮನವೇ ಪೂರ್ವಜಾಯ ಸಾ ।
ತತೋ ಭೃಗ್ವಾದಯೋಽಗೃಹ್ಣನ್ಸಪ್ತ ಬ್ರಹ್ಮಮಹರ್ಷಯಃ
॥ ೪ ॥

ತೇಭ್ಯಃ ಪಿತೃಭ್ಯಸ್ತತ್ಪುತ್ರಾ ದೇವದಾನವಗುಹ್ಯಕಾಃ ।
ಮನುಷ್ಯಾಃ ಸಿದ್ಧಗಂಧರ್ವಾಃ ಸವಿದ್ಯಾಧರಚಾರಣಾಃ
॥ ೫ ॥

ಕಿಂದೇವಾಃ ಕಿಂನರಾ ನಾಗಾ ರಕ್ಷಃಕಿಂಪುರುಷಾದಯಃ ।
ಬಹ್ವ್ಯಸ್ತೇಷಾಂ ಪ್ರಕೃತಯೋ ರಜಃಸತ್ತ್ವತಮೋಭುವಃ
॥ ೬ ॥

ಯಾಭಿರ್ಭೂತಾನಿ ಭಿದ್ಯಂತೇ ಭೂತಾನಾಂ ಮತಯಸ್ತಥಾ ।
ಯಥಾಪ್ರಕೃತಿ ಸರ್ವೇಷಾಂ ಚಿತ್ರಾ ವಾಚಃ ಸ್ರವಂತಿ ಹಿ
॥ ೭ ॥

ಏವಂ ಪ್ರಕೃತಿವೈಚಿತ್ರ್ಯಾದ್ಭಿದ್ಯಂತೇ ಮತಯೋ ನೃಣಾಮ್ ।
ಪಾರಂಪರ್ಯೇಣ ಕೇಷಾಂಚಿತ್ಪಾಖಂಡಮತಯೋಽಪರೇ
॥ ೮ ॥

ಮನ್ಮಾಯಾಮೋಹಿತಧಿಯಃ ಪುರುಷಾಃ ಪುರುಷರ್ಷಭ ।
ಶ್ರೇಯೋ ವದಂತ್ಯನೇಕಾಂತಂ ಯಥಾಕರ್ಮ ಯಥಾರುಚಿ
॥ ೯ ॥

ಧರ್ಮಮೇಕೇ ಯಶಶ್ಚಾನ್ಯೇ ಕಾಮಂ ಸತ್ಯಂ ದಮಂ ಶಮಮ್ ।
ಅನ್ಯೇ ವದಂತಿ ಸ್ವಾರ್ಥಂ ವಾ ಐಶ್ವರ್ಯಂ ತ್ಯಾಗಭೋಜನಮ್
॥ ೧೦ ॥

ಕೇಚಿದ್ಯಜ್ಞಂ ತಪೋದಾನಂ ವ್ರತಾನಿ ನಿಯಮಾನ್ಯಮಾನ್ ।
ಆದ್ಯಂತವಂತ ಏವೈಷಾಂ ಲೋಕಾಃ ಕರ್ಮವಿನಿರ್ಮಿತಾಃ ।
ದುಃಖೋದರ್ಕಾಸ್ತಮೋನಿಷ್ಠಾಃ ಕ್ಷುದ್ರಾನಂದಾಃ ಶುಚಾರ್ಪಿತಾಃ
॥ ೧೧ ॥

ಮಯ್ಯರ್ಪಿತಾತ್ಮನಃ ಸಭ್ಯ ನಿರಪೇಕ್ಷಸ್ಯ ಸರ್ವತಃ ।
ಮಯಾಽಽತ್ಮನಾ ಸುಖಂ ಯತ್ತತ್ಕುತಃ ಸ್ಯಾದ್ವಿಷಯಾತ್ಮನಾಮ್
॥ ೧೨ ॥

ಬ್ರಹ್ಮನು ತನ್ನ ಜೇಷ್ಠಪುತ್ರನಾದ ಸ್ವಾಯಂಭುವ ಮನುವಿಗೆ ಈ ವೇದದ ಜ್ಞಾನವನ್ನು ಕೊಟ್ಟನು. ಅವನಿಂದ ಮತ್ತೆ ಭೃಗುವೇ ಮುಂತಾದ ಸಪ್ತಬ್ರಹ್ಮರ್ಷಿಗಳು ಗ್ರಹಣಮಾಡಿದರು. ॥ ೪ ॥ ಆ ಸಪ್ತ ಮಹರ್ಷಿಗಳಿಂದ ಅವರ ಪುತ್ರರೂ ಹಾಗೂ ಬೇರೆ ದೇವತೆಗಳು, ದಾನವರು, ಗುಹ್ಯಕ, ಮನುಷ್ಯ, ಸಿದ್ಧ ಗಂಧರ್ವ, ವಿದ್ಯಾಧರ, ಚಾರಣ, ಕಿಂದೇವ[೧], ಕಿನ್ನರ[೨], ನಾಗ, ರಾಕ್ಷಸ, ಕಿಂಪುರುಷ[೩] ಮುಂತಾದ ಅನೇಕರು ವೇದದ ಜ್ಞಾನವನ್ನು ಪಡೆದರು. ಅವರೆಲ್ಲರೂ ಸಾತ್ತ್ವಿಕ, ರಾಜಸ, ತಾಮಸ ಹೀಗೆ ಬೇರೆ-ಬೇರೆ ಪ್ರಕೃತಿಯಿಂದ ಉತ್ಪನ್ನರಾದವರು. ॥ ೫-೬ ॥ ಅವರವರ ಪ್ರಕೃತಿ ಹಾಗೂ ಬುದ್ಧಿಯ ಭೇದದಿಂದ ಪರಸ್ಪರ ಕೆಲವು ರೀತಿಯ ಭೇದಗಳು ತಲೆದೋರಿದವು. ಅವೇ ಭೇದಗಳು ಪರಂಪರೆಯಿಂದ ನಡೆಯುತ್ತಾ ಬಂದವು. ಕೆಲವು ಪಾಖಂಡಿಗಳು ತಮ್ಮದೇ ಬೇರೆಯಾದ ಮತವನ್ನು ಕಲ್ಪಿಸಿಕೊಂಡರು. ॥ ೭ ॥ ಎಲೈ ಪುರುಷಶ್ರೇಷ್ಠ ಉದ್ಧವನೇ! ಅವರೆಲ್ಲರ ಬುದ್ಧಿಯು ನನ್ನ ಮಾಯೆಯ ಕಾರಣ ಮೋಹಗ್ರಸ್ತವಾದ್ದರಿಂದ ಎಂತಹ ಕರ್ಮದಲ್ಲಿ ಹೇಗೆ ರುಚಿ ಉಂಟಾಯಿತೋ ಅದನ್ನೇ ಶ್ರೇಯದ ಸಾಧನೆ ಎಂದು ಹೇಳತೊಡಗಿದರು. ಅವರಲ್ಲಿ ಕೆಲವರಾದರೋ ಕರ್ಮವನ್ನು ಹಾಗೂ ಕೆಲವರು ಕೀರ್ತಿಯನ್ನು ಶ್ರೇಯದ ಸಾಧನೆಯೆಂದು ಹೇಳಿದರೆ, ಬೇರೆಯವರು ಕಾಮ, ಸತ್ಯ, ದಮ, ಶಮ ಮುಂತಾದವುಗಳನ್ನು, ಹಾಗೆಯೇ ಕೆಲವರು ಸ್ವಾರ್ಥ ಹಾಗೂ ಐಶ್ವರ್ಯವನ್ನೇ ಶ್ರೇಯದ ಸಾಧನೆ ಎಂದು ಹೇಳುತ್ತಾರೆ. ಕೆಲವರು ಭೋಗಗಳ ತ್ಯಾಗವನ್ನೇ ಶ್ರೇಯದ ಸಾಧನೆ ಎಂದು ಹೇಳುತ್ತಾರೆ. ॥ ೮-೧೦ ॥ ಕೆಲವರು ಯಜ್ಞ, ದಾನ, ತಪಸ್ಸು ವ್ರತ, ನಿಯಮ, ಯಮ ಮುಂತಾದವುಗಳನ್ನು ಶ್ರೇಯದ ಸಾಧನೆಯೆಂದು ಹೇಳುತ್ತಾರೆ. ಪ್ರಿಯ ಉದ್ಧವನೇ! ಈ ಜನರು ಹೇಳಿದ ಕರ್ಮಗಳನುಸಾರ ಅವರಿಗೆ ದೊರೆಯುವ ಲೋಕಗಳೆಲ್ಲವೂ ಅವರ ಕರ್ಮಗಳ ಆಧಾರದಿಂದಲೇ ಇವೆ. ಅವುಗಳ ಸುಖವು ಬಹಳ ಅಲ್ಪವಾದುದು. ಸುಖದ ಸಮಯ ಮುಗಿಯುತ್ತಲೇ ಅವರು ಆ ಲೋಕದಿಂದ ತಳ್ಳಲ್ಪಡುತ್ತಾರೆ ಇದರಿಂದ ಶೋಕಗ್ರಸ್ತರಾಗಿ, ತಮೋಗುಣದಿಂದ ಮುಚ್ಚಿಹೋಗುತ್ತಾರೆ. ಪರಿಣಾಮವಾಗಿ ದುಃಖವೇ ಭೋಗಿಸಬೇಕಾಗುತ್ತದೆ. ॥ ೧೧ ॥

ಸಾಧು ಉದ್ಧವನೇ! ಪೂರ್ಣರೂಪದಿಂದ ತನ್ನನ್ನು ನನಗೆ ಅರ್ಪಿಸಿಕೊಂಡವನಿಗೆ, ಎಲ್ಲ ರೀತಿಯಿಂದ ನಿರಪೇಕ್ಷನಾದವನಿಗೆ, ನನ್ನಲ್ಲೇ ರಮಮಾಣನಾದವನಿಗೆ ಪ್ರಾಪ್ತವಾಗುವ ಸುಖವು ವಿಷಯೀ ಜೀವರಿಗೆ ಹೇಗೆ ದೊರೆಯಬಲ್ಲದು? ॥ ೧೨ ॥

೧ ಶ್ರಮ ಮತ್ತು ಬೆವರೇ ಮುಂತಾದ ದುರ್ಗಂಧದಿಂದ ರಹಿತರಾದ ಕಾರಣ, ಅವರ ವಿಷಯದಲ್ಲಿ 'ಇವರು ದೇವತೆಗಳೋ, ಮನುಷ್ಯರೋ' ಹೀಗೆ ಸಂದೇಹ ಉಂಟಾಗುತ್ತದೆ. ಇವರು ದ್ವೀಪಾಂತರನಿವಾಸಿ ಮನುಷ್ಯರು.

೨ ಮುಖ ಮತ್ತು ಶರೀರದ ಆಕೃತಿಯಿಂದ ಕೆಲ-ಕೆಲವರು ಮನುಷ್ಯರಂತಿರುವ ಪ್ರಾಣಿಗಳು.

೩ ಕೆಲ-ಕೆಲವು ಪುರುಷರಂತೆ ಕಂಡುಬರುವ ವಾನರಾದಿಗಳು.

ಅಕಿಂಚನಸ್ಯ ದಾಂತಸ್ಯ ಶಾಂತಸ್ಯ ಸಮಚೇತಸಃ ।
ಮಯಾ ಸಂತುಷ್ಟಮನಸಃ ಸರ್ವಾಃ ಸುಖಮಯಾ ದಿಶಃ ॥ ೧೩ ॥

ನ ಪಾರಮೇಷ್ಠ್ಯಂ ನ ಮಹೇಂದ್ರಧಿಷ್ಣ್ಯಂ
ನ ಸಾರ್ವಭೌಮಂ ನ ರಸಾಧಿಪತ್ಯಮ್ ।
ನ ಯೋಗಸಿದ್ಧೀರಪುನರ್ಭವಂ ವಾ
ಮಯ್ಯರ್ಪಿತಾತ್ಮೇಚ್ಛತಿ ಮದ್ ವಿನಾನ್ಯತ್ ॥ ೧೪ ॥

ನ ತಥಾ ಮೇ ಪ್ರಿಯತಮ ಆತ್ಮಯೋನಿರ್ನ ಶಂಕರಃ ।
ನ ಚ ಸಂಕರ್ಷಣೋ ನ ಶ್ರೀರ್ನೈವಾತ್ಮಾ ಚ ಯಥಾ ಭವಾನ್ ॥ ೧೫ ॥

ನಿರಪೇಕ್ಷಂ ಮುನಿಂ ಶಾಂತಂ ನಿರ್ವೈರಂ ಸಮದರ್ಶನಮ್ ।
ಅನುವ್ರಜಾಮ್ಯಹಂ ನಿತ್ಯಂ ಪೂಯೇಯೇತ್ಯಂಘ್ರಿರೇಣುಭಿಃ ॥ ೧೬ ॥

ನಿಷ್ಕಿಂಚನಾ ಮಯ್ಯನುರಕ್ತಚೇತಸಃ
ಶಾಂತಾ ಮಹಾಂತೋಽಖಿಲಜೀವವತ್ಸಲಾಃ ।
ಕಾಮೈರನಾಲಬ್ಧಧಿಯೋ ಜುಷಂತಿ ಯತ್
ತನ್ನೈರಪೇಕ್ಷ್ಯಂ ನ ವಿದುಃ ಸುಖಂ ಮಮ ॥ ೧೭ ॥

ಬಾಧ್ಯಮಾನೋಽಪಿ ಮದ್ಭಕ್ತೋ ವಿಷಯೈರಜಿತೇಂದ್ರಿಯಃ ।
ಪ್ರಾಯಃ ಪ್ರಗಲ್ಭಯಾ ಭಕ್ತ್ಯಾ ವಿಷಯೈರ್ನಾಭಿಭೂಯತೇ ॥ ೧೮ ॥

ಯಥಾಗ್ನಿಃ ಸುಸಮೃದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ ।
ತಥಾ ಮದ್ವಿಷಯಾ ಭಕ್ತಿರುದ್ಧವೈನಾಂಸಿ ಕೃತ್ಸ್ನಶಃ ॥ ೧೯ ॥

ನ ಸಾಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಉದ್ಧವ ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ ॥ ೨೦ ॥

ಅಕಿಂಚನನೂ, ಇಂದ್ರಿಯ ವಿಜಯಿಯೂ, ಶಾಂತನೂ, ಸಮಚಿತ್ತನೂ, ನನ್ನಲ್ಲೇ ಸದಾಕಾಲ ಸಂತುಷ್ಟಿಯಿರುವವನೂ ಆದ ನನ್ನ ಭಕ್ತನಿಗಾಗಿ ಎಲ್ಲ ದಿಕ್ಕುಗಳು ಆನಂದದಿಂದ ತುಂಬಿರುತ್ತವೆ. ॥ ೧೩ ॥ ಇಂತಹ ನನ್ನ ಸಂತೋಷೀ ಭಕ್ತನು ಬ್ರಹ್ಮನ ಪದವಿಯನ್ನಾಗಲೀ, ಇಂದ್ರನ ಸ್ವರ್ಗದ ಆಧಿಪತ್ಯವನ್ನಾಗಲೀ, ಸಮಸ್ತ ಭೂಮಂಡಲದ ರಾಜ್ಯವೇ ದೊರಕಲೀ, ರಸಾತಲದ ಒಡೆತನವೇ ಇರಲಿ, ಇವಾವುದನ್ನೂ ಬಯಸುವುದಿಲ್ಲ. ಅವನಿಗೆ ಯೋಗ ಸಿದ್ಧಿಯ ಇಚ್ಛೆಯಾಗಲೀ, ಮೋಕ್ಷದ ಬಯಕೆಯಾಗಲಿ ಇರುವುದಿಲ್ಲ. ಅವನಾದರೋ ಪೂರ್ಣವಾಗಿ ನನ್ನಲ್ಲಿ ಸಮರ್ಪಿತನಾಗಿ ಹೋಗಿದ್ದಾನೆ. ಆದ್ದರಿಂದ ಅವನಿಗೆ ನಾನಲ್ಲದೆ ಬೇರೆ ಏನೂ ಬೇಕಾಗುವುದಿಲ್ಲ. ॥ ೧೪ ॥ ಉದ್ಧವಾ ! ನನಗೆ ನಿನ್ನಂತಹ ಪ್ರೇಮೀ ಭಕ್ತರು ಪ್ರಿಯತಮವಾದಷ್ಟು, ನನ್ನ ಪುತ್ರ ಬ್ರಹ್ಮಾ, ಆತ್ಮಾ ಶಂಕರ, ಸ್ವಂತ ಸಹೋದರ ಬಲರಾಮದೇವರು, ಅರ್ಧಾಂಗಿನಿಯಾದ ಲಕ್ಷ್ಮೀದೇವಿ ಮತ್ತು ನನ್ನ ಆತ್ಮವೂ ಕೂಡ ಪ್ರಿಯವಾಗಿಲ್ಲ. ॥ ೧೫॥ ಯಾರಿಗೆ ಯಾವುದರ ಅಪೇಕ್ಷೆಯೂ ಇಲ್ಲವೋ, ಜಗತ್ತಿನ ಚಿಂತನೆಯಿಂದ ಉಪರತನಾಗಿ ನನ್ನ ಮನನ-ಚಿಂತನೆಯಲ್ಲಿ ತಲ್ಲೀನನಾಗಿರುವನೋ ಮತ್ತು ರಾಗ- ದ್ವೇಷವಿರಿಸದೇ ಎಲ್ಲರ ಕುರಿತು ಸಮದೃಷ್ಟಿಯನ್ನಿರಿಸುವನೋ, ಅಂತಹ ಮಹಾತ್ಮನ ಹಿಂದೆ-ಹಿಂದೆ ನಾನು ಅವನ ಚರಣಗಳ ಧೂಳಿಯು ಹಾರಿ ನನ್ನ ಮೇಲೆ ಬೀಳಲಿ, ಇದರಿಂದ ನನ್ನೊಳಗೆ ಸ್ಥಿತವಿರುವ ಎಲ್ಲ ಲೋಕಗಳ ಸಹಿತ ನಾನು ಪವಿತ್ರನಾಗುವೆನು ಎಂದು ಯೋಚಿಸುತ್ತಾ ನಿರಂತರ ತಿರುಗಾಡುತ್ತಿರುತ್ತೇನೆ. ॥ ೧೬ ॥ ನನ್ನ ನಿಷ್ಕಿಂಚನ ಭಕ್ತನ ಚಿತ್ತವು ಸದಾಕಾಲ ನನ್ನಲ್ಲೇ ಅನುರಕ್ತವಾಗಿರುತ್ತದೆ. ಇಂತಹ ಆ ಮಹಾಪುರುಷರು ಬಹಳ ಶಾಂತಪ್ರಕೃತಿಯವರಾಗಿರುತ್ತಾರೆ. ಎಲ್ಲ ಜೀವಿಗಳ ಕುರಿತು ಅವರಲ್ಲಿ ಹೇತುರಹಿತ ಸೌಹಾರ್ದ್ರವಿರುತ್ತದೆ. ಕಾಮನೆಗಳಿಂದ ಅವರ ಬುದ್ಧಿಯು ದೂಷಿತವಾಗುವುದಿಲ್ಲ. ಈ ರೀತಿಯ ಸಂತರು ಅನುಭವಿಸುವ ಏಕಾಂತಿಕ ಸುಖವನ್ನು ಬೇರೆ ಯಾರೂ ತಿಳಿಯಲಾರರು. ॥ ೧೭ ॥

ಉದ್ಧವನೇ ! ನನ್ನ ಭಕ್ತನು ಜಿತೇಂದ್ರಿಯನಾಗದಿದ್ದರೂ ನನ್ನ ಪ್ರೀತಿಯು ಬೆಳೆಯುತ್ತಾ ಭಕ್ತಿಯ ಪ್ರಭಾವದಿಂದ ಅವನ ವಿಷಯ ವಾಸನೆ ದೂರವಾಗುತ್ತಾ ಹೋಗುತ್ತದೆ. ಎಂದಾದರೂ ಅವನನ್ನು ವಿಷಯಗಳು ಆದುಮಿದರೂ ಅವನು ಅವುಗಳಿಂದ ಬಾಧಿತನಾಗುವುದಿಲ್ಲ. (ಏಕೆಂದರೆ, ನಾನು ಅವನನ್ನು ರಕ್ಷಿಸುತ್ತೇನೆ.) ॥ ೧೮ ॥ ಪ್ರಚಂಡ ಅಗ್ನಿಯು ಎಲ್ಲ ಉರುವಲನ್ನು ಭಸ್ಮಮಾಡಿ ಬಿಡುವಂತೆಯೇ ನನ್ನ ಭಕ್ತನೂ ಕೂಡ ಸಮಸ್ತ ಪಾಪರಾಶಿಗಳನ್ನು ಪೂರ್ಣವಾಗಿ ಸುಟ್ಟುಬಿಡುತ್ತಾನೆ. ॥ ೧೯ ॥ ಎಲೈ ಉದ್ಧವನೇ ! ಸರಳತೆಯಿಂದ ಬೆಳೆದಿರುವ ಭಕ್ತಿಯಮೂಲಕ ನಾನು ಸುಲಭವಾಗಿ ಪ್ರಾಪ್ತನಾಗುವಂತೆ, ಯೋಗ-ಸಾಧನೆ, ಸಾಂಖ್ಯ, ಧರ್ಮಾಚರಣೆ, ಸ್ವಾಧ್ಯಾಯ, ತಪಸ್ಸು, ತ್ಯಾಗ, ಇವುಗಳೆಲ್ಲವೂ ನನ್ನ ಪ್ರಾಪ್ತಿಯ ಸರಳ ಸಾಧನೆಗಳಲ್ಲ. ॥ ೨೦ ॥

ಭಕ್ತ್ಯಾಹಮೇಕಯಾ ಗ್ರಾಹ್ಯಃ ಶ್ರದ್ಧಯಾಽಽತ್ಮಾ ಪ್ರಿಯಃ ಸತಾಮ್ ।
ಭಕ್ತಿಃ ಪುನಾತಿ ಮನ್ನಿಷ್ಠಾ ಶ್ವಪಾಕಾನಪಿ ಸಂಭವಾತ್
॥ ೨೧ ॥

ಧರ್ಮಃ ಸತ್ಯದಯೋಪೇತೋ ವಿದ್ಯಾ ವಾ ತಪಸಾನ್ವಿತಾ ।
ಮದ್ಭಕ್ತ್ಯಾಪೇತಮಾತ್ಮಾನಂ ನ ಸಮ್ಯಕ್ ಪ್ರಪುನಾತಿ ಹಿ
॥ ೨೨ ॥

ಕಥಂ ವಿನಾ ರೋಮಹರ್ಷಂ ದ್ರವತಾ ಚೇತಸಾ ವಿನಾ ।
ವಿನಾಽಽನಂದಾಶ್ರುಕಲಯಾ ಶುಧ್ಯೇದ್ಭಕ್ತ್ಯಾ ವಿನಾಽಽಶಯಃ
॥ ೨೩ ॥

ವಾಗ್ಗದ್ಗದಾ ದ್ರವತೇ ಯಸ್ಯ ಚಿತ್ತಂ
ರುದತ್ಯಭೀಕ್ಷ್ಣಂ ಹಸತಿ ಕ್ವಚಿಚ್ಚ ।
ವಿಲಜ್ಜ ಉದ್ಗಾಯತಿ ನೃತ್ಯತೇ ಚ
ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥ ೨೪ ॥

ಯಥಾಗ್ನಿನಾ ಹೇಮಮಲಂ ಜಹಾತಿ
ಧ್ಮಾತಂ ಪುನಃ ಸ್ವಂ ಭಜತೇ ಚ ರೂಪಮ್ ।
ಆತ್ಮಾ ಚ ಕರ್ಮಾನುಶಯಂ ವಿಧೂಯ
ಮದ್ಭಕ್ತಿಯೋಗೇನ ಭಜತ್ಯಥೋ ಮಾಮ್ ॥ ೨೫ ॥

ಯಥಾ ಯಥಾಽಽತ್ಮಾ ಪರಿಮೃಜ್ಯತೇಽಸೌ
ಮತ್ಪುಣ್ಯಗಾಥಾಶ್ರವಣಾಭಿಧಾನೈಃ ।
ತಥಾ ತಥಾ ಪಶ್ಯತಿ ವಸ್ತು ಸೂಕ್ಷ್ಮಂ
ಚಕ್ಷುರ್ಯಥೈವಾಂಜನಸಂಪ್ರಯುಕ್ತಮ್ ॥ ೨೬ ॥

ವಿಷಯಾನ್ ಧ್ಯಾಯತಶ್ಚಿತ್ತಂ ವಿಷಯೇಷು ವಿಷಜ್ಜತೇ ।
ಮಾಮನುಸ್ಮರತಶ್ಚಿತ್ತಂ ಮಯ್ಯೇವ ಪ್ರವಿಲೀಯತೇ
॥ ೨೭ ॥

ತಸ್ಮಾದಸದಭಿಧ್ಯಾನಂ ಯಥಾ ಸ್ವಪ್ನಮನೋರಥಮ್ ।
ಹಿತ್ವಾ ಮಯಿ ಸಮಾಧತ್ಸ್ವ ಮನೋ ಮದ್ಭಾವಭಾವಿತಮ್
॥ ೨೮ ॥

ಸ್ತ್ರೀಣಾಂ ಸ್ತ್ರೀಸಂಗಿನಾಂ ಸಂಗಂ ತ್ಯಕ್ತ್ವಾ ದೂರತ ಆತ್ಮವಾನ್ ।
ಕ್ಷೇಮೇ ವಿವಿಕ್ತ ಆಸೀನಶ್ಚಿಂತಯೇನ್ಮಾಮತಂದ್ರಿತಃ
॥ ೨೯ ॥

ನ ತಥಾಸ್ಯ ಭವೇತ್ ಕ್ಲೇಶೋ ಬಂಧಶ್ಚಾನ್ಯಪ್ರಸಂಗತಃ ।
ಯೋಷಿತ್ಸಂಗಾದ್ಯಥಾ ಪುಂಸೋ ಯಥಾ ತತ್ಸಂಗಿಸಂಗತಃ
॥ ೩೦ ॥

ನಾನು ಸಂತರಿಗೆ ಪ್ರಿಯನಾಗಿರುವೆನು, ಅವರ ಆತ್ಮನೇ ಆಗಿದ್ದೇನೆ. ಏಕಮಾತ್ರ ಶ್ರದ್ಧಾ-ಭಕ್ತಿಯಿಂದಲೇ ನಾನು ಅವರಿಗೆ ದೊರೆಯುತ್ತೇನೆ. ಒಂದು ವೇಳೆ ಜನ್ಮತಃ ಚಾಂಡಾಲನೇ ಆಗಿದ್ದರೂ ನನ್ನ ಕುರಿತು ಮಾಡಿದ ಭಕ್ತಿಯಿಂದ ಅವನು ಶುದ್ಧ ಪವಿತ್ರನಾಗಿ ಹೋಗುತ್ತಾನೆ. ॥ ೨೧ ॥ ಯಾರಾದರೂ ಸತ್ಯ, ದಯೆಯಿಂದ ಕೂಡಿ ಧರ್ಮವನ್ನು ಪಾಲಿಸಿದ್ದರೂ, ಅಥವಾ ಯಾರಾದರೂ ತಪಸ್ಸಿನಿಂದೊಡಗೂಡಿ ವಿದ್ಯಾಭ್ಯಾಸ ಮಾಡಿದ್ದರೂ ಅವರು ನನ್ನ ಭಕ್ತಿಯಿಂದ ರಹಿತರಾಗಿದ್ದರೆ, ಇಂತಹ ಧರ್ಮ, ಸ್ವಾಧ್ಯಾಯಗಳು ಆ ವ್ಯಕ್ತಿಯನ್ನು ಪವಿತ್ರವಾಗಿಸಲಾರವು. ॥ ೨೨ ॥ ಭಕ್ತಿಯನ್ನು ಮಾಡುತ್ತಾ ಇರುವಾಗ ಶರೀರ ಪುಳಕಿತವಾಗುವುದಿಲ್ಲವೋ, ಚಿತ್ತವು ದ್ರವಿಸುವುದಿಲ್ಲವೋ, ಆನಂದದ ಕಣ್ಣೀರು ಒಸರುವುದಿಲ್ಲವೋ ಅಲ್ಲಿಯವರೆಗೆ ಅವನ ಅಂತಃಕರಣ ಪೂರ್ಣವಾಗಿ ಶುದ್ಧವಾಗ ಲಾರದು. ॥ ೨೩ ॥ ಆದರೆ ಭಕ್ತಿಯ ಪ್ರವಾಹ ಬೆಳೆದಾಗ ಅವನ ವಾಣಿಯು ಗದ್ಗದವಾಗುತ್ತದೆ, ಚಿತ್ತದ್ರವಿತವಾಗುತ್ತದೆ. ಕೆಲವೊಮ್ಮೆ (ಓ ಪ್ರಭುವೇ ನೀನೆಲ್ಲಿ ಹೋದೆ) ಎಂಬ ಉದ್ಗಾರವೆತ್ತುತ್ತಾ ಅಳುತ್ತಿದ್ದರೆ, ಕೆಲವೊಮ್ಮೆ ನಗುತ್ತಾನೆ. ನಾಚಿಕೆಬಿಟ್ಟು ಕೆಲವೊಮ್ಮೆ ಗಟ್ಟಿಯಾಗಿ ಹಾಡಿದರೆ, ಕೆಲವೊಮ್ಮೆ ನರ್ತಿಸುತ್ತಾನೆ. ಇಂತಹ ನನ್ನ ಭಕ್ತನು ಇಡೀ ಜಗತ್ತನ್ನೇ ಪವಿತ್ರವಾಗಿಸುತ್ತಾನೆ. ॥ ೨೪ ॥ ಚಿನ್ನವು ಬೆಂಕಿಯಲ್ಲಿ ಕಾಯಿಸಿದಾಗ ತನ್ನ ಎಲ್ಲ ಕೊಳೆಯನ್ನು ಬಿಟ್ಟು ಶುದ್ಧವಾಗಿ, ತನ್ನ ನಿಜರೂಪದಿಂದ ಹೊಳೆಯತೊಡಗುತ್ತದೆ. ಹಾಗೆಯೇ ಮನುಷ್ಯನು ನನ್ನ ಭಕ್ತಿಯನ್ನು ಮಾಡಿದಾಗ, ಆ ಭಕ್ತಿಯೋಗದ ಮೂಲಕ ತನ್ನ ಕರ್ಮವಾಸನೆಗಳನ್ನು ನಾಶಮಾಡಿ, ತನ್ನ ನಿಜಸ್ವರೂಪ ಪರಮಾತ್ಮನಾದ ನನ್ನನ್ನು ಪಡೆದು ಕೊಳ್ಳು ತ್ತಾನೆ. ॥ ೨೫ ॥ ಉದ್ಧವನೇ! ನನ್ನ ಪರಮಪಾವನ ಲೀಲಾ-ಕಥೆಗಳ ಶ್ರವಣ-ಕೀರ್ತನೆಯಿಂದ ಚಿತ್ತದ ಕೊಳೆಯು ತೊಳೆದು ಹೋಗು ತ್ತಿರುವಂತೆ, ಕಣ್ಣಿಗೆ ಅಂಜನವನ್ನು ಹಾಕಿದಾಗ ಅದೃಶ್ಯವಸ್ತುವೂ ಕಾಣುವಂತೆ ಅವನಿಗೆ ಸೂಕ್ಷ್ಮವಸ್ತುವಿನ ವಾಸ್ತವಿಕ ತತ್ತ್ವದ ದರ್ಶನವು ಆಗತೊಡಗುತ್ತದೆ. ॥ ೨೬ ॥

ನಿರಂತರ ವಿಷಯಗಳ ಚಿಂತನೆ ಮಾಡುವ ಮನುಷ್ಯನ ಚಿತ್ತವು ವಿಷಯಗಳಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ ಮತ್ತು ನನ್ನನ್ನೇ ಸ್ಮರಿಸುವವನ ಚಿತ್ತವು ನನ್ನಲ್ಲೇ ತಲ್ಲೀನವಾಗುತ್ತದೆ. ॥ ೨೭ ॥ ಅಸತ್ ವಸ್ತುಗಳ ಚಿಂತನೆಯು ಸ್ವಪ್ನಮನೋರಥದಂತೆ ಮಿಥ್ಯೆಯೇ ಆಗಿದೆ. ಆದ್ದರಿಂದ ಅವುಗಳ ಚಿಂತನೆಯನ್ನು ಬಿಟ್ಟು ನನ್ನನ್ನೇ ಚಿಂತಿಸಬೇಕು. ನನ್ನಲ್ಲೇ ಮನಸ್ಸನ್ನು ತೊಡಗಿಸಬೇಕು. ॥ ೨೮ ॥ ಪ್ರಿಯ ಉದ್ಧವಾ! ಸ್ತ್ರೀಯರ ಸಂಗದಿಂದ ಹಾಗೂ ಸ್ತ್ರೀ-ಸಂಗಿಗಳ ಸಂಗದಿಂದ ಕ್ಲೇಶಗಳ ಪರಂಪರೆಯೇ ಬೆಳೆಯುತ್ತಿರುವಂತೆ ಬೇರೆ ಯಾರ ಸಂಗ ದಿಂದಲೂ ಬೆಳೆಯುವುದಿಲ್ಲ. ಆದ್ದರಿಂದ ಸಾಧಕರು ತನ್ನ ಇಂದ್ರಿಯ ಗಳನ್ನು ವಶಪಡಿಸಿಕೊಂಡು, ಸ್ತ್ರೀಯರ ಮತ್ತು ಲಂಪಟರ ಸಂಗವನ್ನು ದೂರದಿಂದಲೇ ತ್ಯಜಿಸಬೇಕು. ಏಕಾಂತ ಪವಿತ್ರದೇಶದಲ್ಲಿ ಕುಳಿತು ಕೊಂಡು ಎಚ್ಚರಿಕೆಯಿಂದ ನನ್ನನ್ನು ಚಿಂತಿಸಬೇಕು. ॥ ೨೯-೩೦ ॥

ಉದ್ಧವ ಉವಾಚ

**ಯಥಾ ತ್ವಾಮರವಿಂದಾಕ್ಷ ಯಾದೃಶಂ ವಾ ಯದಾತ್ಮಕಮ್ ।**
**ಧ್ಯಾಯೇನ್ಮುಮುಕ್ಷುರೇತನ್ಮೇ ಧ್ಯಾನಂ ತ್ವಂ ವಕ್ತುಮರ್ಹಸಿ ॥ ೩೧ ॥**

ಶ್ರೀಭಗವಾನುವಾಚ

**ಸಮ ಆಸನ ಆಸೀನಃ ಸಮಕಾಯೋ ಯಥಾಸುಖಮ್ ।**
**ಹಸ್ತಾವುತ್ಸಂಗ ಆಧಾಯ ಸ್ವನಾಸಾಗ್ರಕೃತೇಕ್ಷಣಃ ॥ ೩೨ ॥**

**ಪ್ರಾಣಸ್ಯ ಶೋಧಯೇನ್ಮಾರ್ಗಂ ಪೂರಕುಂಭಕರೇಚಕೈಃ ।**
**ವಿಪರ್ಯಯೇಣಾಪಿ ಶನೈರಭ್ಯಸೇನ್ನಿರ್ಜಿತೇಂದ್ರಿಯಃ ॥ ೩೩ ॥**

**ಹೃದ್ಯವಿಚ್ಛಿನ್ನಮೋಂಕಾರಂ ಘಂಟಾನಾದಂ ವಿಸೋರ್ಣವತ್ ।**
**ಪ್ರಾಣೇನೋದೀರ್ಯ ತತ್ರಾಥ ಪುನಃ ಸಂವೇಶಯೇತ್ ಸ್ವರಮ್ ॥ ೩೪ ॥**

**ಏವಂ ಪ್ರಣವಸಂಯುಕ್ತಂ ಪ್ರಾಣಮೇವ ಸಮಭ್ಯಸೇತ್ ।**
**ದಶಕೃತ್ವಸ್ತ್ರಿಷವಣಂ ಮಾಸಾದರ್ವಾಗ್ಜಿತಾನಿಲಃ ॥ ೩೫ ॥**

**ಹೃತ್ಪುಂಡರೀಕಮಂತಃಸ್ಥಮೂರ್ಧ್ವನಾಲಮಧೋಮುಖಮ್ ।**
**ಧ್ಯಾತ್ವೋರ್ಧ್ವಮುಖಮುನ್ನಿದ್ರಮಷ್ಟಪತ್ರಂ ಸಕರ್ಣಿಕಮ್ ॥ ೩೬ ॥**

**ಕರ್ಣಿಕಾಯಾಂ ನ್ಯಸೇತ್ಸೂರ್ಯಸೋಮಾಗ್ನೀನುತ್ತರೋತ್ತರಮ್ ।**
**ವಹ್ನಿ ಮಧ್ಯೇ ಸ್ಮರೇದ್ರೂಪಂ ಮಮೈತದ್ಧ್ಯಾನಮಂಗಲಮ್ ॥ ೩೭ ॥**

**ಸಮಂ ಪ್ರಶಾಂತಂ ಸುಮುಖಂ ದೀರ್ಘಚಾರುಚತುರ್ಭುಜಮ್ ।**
**ಸುಚಾರುಸುಂದರಗ್ರೀವಂ ಸುಕಪೋಲಂ ಶುಚಿಸ್ಮಿತಮ್ ॥ ೩೮ ॥**

**ಸಮಾನಕರ್ಣವಿನ್ಯಸ್ತಸ್ಫುರನ್ಮಕರಕುಂಡಲಮ್ ।**
**ಹೇಮಾಂಬರಂ ಘನಶ್ಯಾಮಂ ಶ್ರೀವತ್ಸಶ್ರೀನಿಕೇತನಮ್ ॥ ೩೯ ॥**

**ಉದ್ಧವನು ಕೇಳಿದನು** – ಕಮಲನಯನ ಶ್ಯಾಮಸುಂದರಾ! ಮುಮುಕ್ಷುವು ನಿನ್ನನ್ನು ಹೇಗೆ ಧ್ಯಾನಿಸಬೇಕು? ಯಾವ ರೂಪದಿಂದ ಹಾಗೂ ನಿನ್ನ ಯಾವ ಸ್ವರೂಪದ ಧ್ಯಾನ ಮಾಡಬೇಕು? ಅದನ್ನು ತಿಳಿಸುವ ಕೃಪೆಮಾಡು. ॥ ೩೧ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವಾ! ತುಂಬಾ ಎತ್ತರವಲ್ಲದ, ತುಂಬಾ ತಗ್ಗಿಲ್ಲದ ಆಸನದಲ್ಲಿ ಶರೀರವನ್ನು ನೆಟ್ಟಗೆ ಇಟ್ಟುಕೊಂಡು ಕುಳಿತುಕೊಳ್ಳಬೇಕು. ಕೈಗಳನ್ನು ತನ್ನ ತೊಡೆಗಳಲ್ಲಿಟ್ಟುಕೊಂಡು, ದೃಷ್ಟಿಯು ನಾಸಿಕಾಗ್ರದಲ್ಲಿರಿಸಬೇಕು. ॥ ೩೨ ॥ ಅನಂತರ ಪೂರಕ, ಕುಂಭಕ, ರೇಚಕ ಮತ್ತು ರೇಚಕ, ಕುಂಭಕ, ಪೂರಕ ಹೀಗೆ ಪ್ರಾಣಾಯಾಮಗಳ ಮೂಲಕ ನಾಡೀ ಶೋಧನ ಮಾಡಬೇಕು. ಪ್ರಾಣಾಯಾಮದ ಅಭ್ಯಾಸವನ್ನು ಮೆಲ್ಲ-ಮೆಲ್ಲನೆ ಬೆಳಸಬೇಕು. ಜೊತೆ-ಜೊತೆಗೆ ಇಂದ್ರಿಯಗಳನ್ನು ಗೆಲ್ಲುವ ಅಭ್ಯಾಸವನ್ನೂ ಮಾಡಬೇಕು. ॥ ೩೩ ॥ ಹೃದಯದಲ್ಲಿ ಕಮಲನಾಳಗತ ತೆಳ್ಳನೆಯ ನೂಲಿನಂತೆ ಅವಿಚ್ಛಿನ್ನವಾಗಿ ಓಂಕಾರದ ಚಿಂತನೆ ಮಾಡಬೇಕು, ಪ್ರಾಣದ ಮೂಲಕ ಅದನ್ನು ಮೇಲಕ್ಕೆ ಒಯ್ದು ಅದರಲ್ಲಿ ಘಂಟಾನಾದದಂತೆ ಸ್ವರವನ್ನು ಸ್ಥಿರಗೊಳಿಸಬೇಕು. ಆ ಸ್ವರವೂ ತೈಲಧಾರೆಯಂತೆ ಅಖಂಡವಾಗಿರಬೇಕು. ಈ ಪ್ರಕಾರ ಪ್ರತಿದಿನ ಮೂರುಬಾರಿ ಹತ್ತತ್ತು ಬಾರಿ ಓಂಕಾರ ಸಹಿತ ಪ್ರಾಣಾಯಾಮವನ್ನು ಅಭ್ಯಸಿಸಬೇಕು. ಹೀಗೆ ಮಾಡುವುದರಿಂದ ಒಂದು ತಿಂಗಳೊಳಗೆ ಪ್ರಾಣವಾಯುವು ವಶವಾಗುತ್ತದೆ. ॥ ೩೪-೩೫ ॥ ಇದಾದ ಬಳಿಕ ಹೃದಯವು ಒಂದು ಕಮಲವಾಗಿದೆ, ಅದು ಶರೀರದ ಒಳಗೆ ಅದರ ತೊಟ್ಟು ಮೆಲಕ್ಕೆದ್ದು ಮುಖವು ಕೆಳಮುಖವಾಗಿರುವಂತೆ ಚಿಂತಿಸಬೇಕು. ಮತ್ತೆ ಅದನ್ನು ಮೇಲ್ಮುಖವಾಗಿಸಬೇಕು. ಅರಳಿದ, ಅದಕ್ಕೆ ಎಂಟು ಎಸಳುಗಳಿದ್ದು, ಅದರ ಮಧ್ಯಭಾಗದಲ್ಲಿ ಹಳದಿಯಾದ ಅತ್ಯಂತ ಕೋಮಲವಾದ ಕರ್ಣಿಕೆ (ಪೀಠ) ಇದೆ. ॥ ೩೬ ॥ ಆ ಕರ್ಣಿಕೆಯಲ್ಲಿ ಕ್ರಮಶಃ ಸೂರ್ಯ, ಚಂದ್ರ ಮತ್ತು ಅಗ್ನಿ ಇವುಗಳನ್ನು ನ್ಯಾಸಮಾಡಬೇಕು. ಅನಂತರ ಅಗ್ನಿಯೊಳಗೆ ಧ್ಯಾನಕ್ಕಾಗಿ ಬಹಳ ಮಂಗಳಮಯವಾದ ನನ್ನ ಸ್ವರೂಪವನ್ನು ಸ್ಮರಿಸಬೇಕು. ॥ ೩೭ ॥

ಆ ಸ್ವರೂಪವು – ಎಲ್ಲ ಅವಯವಗಳು ಸಮಾನರೂಪದಿಂದಿವೆ. ಎಲ್ಲ ಅವಯವಗಳು ಸುಪುಷ್ಟವಾಗಿದ್ದು ಸುಂದರವಾಗಿವೆ. ರೋಮ-ರೋಮಗಳಲ್ಲಿ ಶಾಂತಿಯು ಒಸರುತ್ತಿದೆ. ಮುಖಕಮಲವು ಅತ್ಯಂತ ಪ್ರಫುಲ್ಲಿತವಾಗಿದ್ದು ಅಂದವಾಗಿದೆ. ಮೊಣಕಾಲು ಮುಟ್ಟುವ ದೀರ್ಘವಾದ ನಾಲ್ಕು ಮನೋಹರ ಭುಜಗಳಿವೆ. ತುಂಬಾ ಅಂದವಾದ ಕಂಠವು ಮನೋಹರವಾಗಿದೆ. ಮರಕತಮಣಿಯಂತೆ ಸ್ನಿಗ್ಧವಾದ ಗಲ್ಲಗಳಿವೆ. ಮುಖದಲ್ಲಿ ಮಂದಮಧುರ ಮುಗುಳ್ನಗೆಯು ಶೋಭಿಸುತ್ತಿದೆ. ಎರಡೂ ಕಿವಿಗಳು ಸಮಾನವಾಗಿದ್ದು, ಅವುಗಳಲ್ಲಿ ಮಕರಾಕಾರದ ದಿವ್ಯ ಕುಂಡಲಗಳು ಓಲಾಡುತ್ತಿವೆ. ಮಳೆಗಾಲದ ಮೋಡದಂತೆ ಶ್ಯಾಮಲ ಶರೀರದ ಮೇಲೆ ಪೀತಾಂಬರವು ಕಂಗೊಳಿಸುತ್ತಿದೆ. ವಕ್ಷಸ್ಥಳದಲ್ಲಿ ಒಂದೆಡೆ ಶ್ರೀವತ್ಸಲಾಂಛನವಿದ್ದು ಮತ್ತೊಂದೆಡೆ ಶ್ರೀಲಕ್ಷ್ಮೀದೇವಿಯು ವಿರಾಜಮಾನಳಾಗಿದ್ದಾಳೆ. ಕೈಗಳಲ್ಲಿ ಶಂಖ, ಚಕ್ರ, ಗದೆ, ಪದ್ಮಗಳನ್ನು

ಶಂಖಚಕ್ರಗದಾಪದ್ಮವನಮಾಲಾವಿಭೂಷಿತಮ್ ।
ನೂಪುರೈರ್ವಿಲಸತ್ಪಾದಂ ಕೌಸ್ತುಭಪ್ರಭಯಾ ಯುತಮ್ ॥ ೪೦ ॥

ದ್ಯುಮತ್ಕಿರೀಟಕಟಕಕಟಿಸೂತ್ರಾಂಗದಾಯುತಮ್ ।
ಸರ್ವಾಂಗಸುಂದರಂ ಹೃದ್ಯಂ ಪ್ರಸಾದಸುಮುಖೇಕ್ಷಣಮ್ ।
ಸುಕುಮಾರಮಭಿಧ್ಯಾಯೇತ್ ಸರ್ವಾಂಗೇಷು ಮನೋ ದಧತ್ ॥ ೪೧ ॥

ಇಂದ್ರಿಯಾಣೀಂದ್ರಿಯಾರ್ಥೇಭ್ಯೋ ಮನಸಾಽಽಕೃಷ್ಯ ತನ್ಮನಃ ।
ಬುದ್ಧ್ಯಾ ಸಾರಥಿನಾ ಧೀರಃ ಪ್ರಣಯೇನ್ಮಯಿ ಸರ್ವತಃ ॥ ೪೨ ॥

ತತ್ಸರ್ವವ್ಯಾಪಕಂ ಚಿತ್ತಮಾಕೃಷ್ಯೈಕತ್ರ ಧಾರಯೇತ್ ।
ನಾನ್ಯಾನಿ ಚಿಂತಯೇದ್ಭೂಯಃ ಸುಸ್ಮಿತಂ ಭಾವಯೇನ್ಮುಖಮ್ ॥ ೪೩ ॥

ತತ್ರ ಲಬ್ಧಪದಂ ಚಿತ್ತಮಾಕೃಷ್ಯ ವ್ಯೋಮ್ನಿ ಧಾರಯೇತ್ ।
ತಚ್ಚ ತ್ಯಕ್ತ್ವಾ ಮದಾರೋಹೋ ನ ಕಿಂಚಿದಪಿ ಚಿಂತಯೇತ್ ॥ ೪೪ ॥

ಏವಂ ಸಮಾಹಿತಮತಿರ್ಮಾಮೇವಾತ್ಮಾನಮಾತ್ಮನಿ ।
ವಿಚಷ್ಟೇ ಮಯಿ ಸರ್ವಾತ್ಮನ್ ಜ್ಯೋತಿರ್ಜ್ಯೋತಿಷಿ ಸಂಯುತಮ್ ॥ ೪೫ ॥

ಧ್ಯಾನೇನೇತ್ಥಂ ಸುತೀವ್ರೇಣ ಯುಂಜತೋ ಯೋಗಿನೋ ಮನಃ ।
ಸಂಯಾಸ್ಯತ್ಯಾಶು ನಿರ್ವಾಣಂ ದ್ರವ್ಯಜ್ಞಾನಕ್ರಿಯಾಭ್ರಮಃ ॥ ೪೬ ॥

ಧರಿಸಿಕೊಂಡಿರುವನು. ಕೊರಳಲ್ಲಿ ವನಮಾಲೆ ಶೋಭಿಸುತ್ತಿದೆ. ಚರಣಗಳಲ್ಲಿ ನೂಪುರಗಳಿದ್ದು ಕತ್ತಿನಲ್ಲಿ ಕೌಸ್ತುಭಮಣಿಯು ಹೊಳೆಯುತ್ತಿದೆ. ತಮ್ಮ ಸ್ಥಾನಗಳಲ್ಲಿ ಮಿಂಚುತ್ತಿರುವ ಕಿರೀಟ ಕಂಕಣಗಳು, ಭುಜಕೀರ್ತಿಗಳು, ಒಡ್ಯಾಣಗಳು ಶೋಭಾಯಮಾನವಾಗಿವೆ. ಎಲ್ಲವೂ ಹೃದಯಂಗಮವಾಗಿದೆ. ಅಂದವಾದ ಮುಖವು ಮತ್ತು ಕೃಪಾಪೂರ್ಣ ನೋಟದಿಂದ ನಾಲ್ಕೂಕಡೆ ಕೃಪಾಪ್ರಸಾದವನ್ನು ವರ್ಷಿಸುತ್ತಿದೆ. ಉದ್ಧವನೇ ! ನನ್ನ ಈ ಸುಕುಮಾರರೂಪವನ್ನು ಧ್ಯಾನಿಸಬೇಕು ಹಾಗೂ ತನ್ನ ಮನಸ್ಸನ್ನು ಒಂದೊಂದೇ ಅಂಗದಲ್ಲಿ ಸ್ಥಿರವಾಗಿಸಬೇಕು. ॥ ೩೮-೪೧ ॥

ಬುದ್ಧಿವಂತನಾದ ಮನುಷ್ಯನು ಮನಸ್ಸಿನ ಮೂಲಕ ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ ಸೆಳೆದುಕೊಂಡು, ಆ ಮನಸ್ಸನ್ನು ಬುದ್ಧಿರೂಪೀ ಸಾರಥಿಯ ಸಹಾಯದಿಂದ ನನ್ನಲ್ಲೇ ತೊಡಗಿಸಬೇಕು. ॥ ೪೨ ॥ ಇಡೀ ಶರೀರದ ಧ್ಯಾನ ಉಂಟಾದಾಗ ತನ್ನ ಚಿತ್ತವನ್ನು ಸೆಳೆದುಕೊಂಡು ಒಂದೇ ಸ್ಥಾನದಲ್ಲಿ ಸ್ಥಿರಗೊಳಿಸಬೇಕು. ಬೇರೆ ಅಂಗಗಳ ಚಿಂತನೆಮಾಡದೆ ಕೇವಲ ಮಂದ-ಮಂದ ಮುಗುಳ್ನಗೆಯ ಪ್ರಭೆಯಿಂದ ಕೂಡಿದ ನನ್ನ ಮುಖಾರವಿಂದದಲ್ಲಿ ದೃಷ್ಟಿಯನ್ನು ನೆಲೆಗೊಳಿಸಬೇಕು. ॥ ೪೩ ॥ ಚಿತ್ತವು ಮುಖಾರವಿಂದದಲ್ಲಿ ನೆಲೆಗೊಂಡಾಗ ಅದನ್ನು ಅಲ್ಲಿಂದ ತೊಡೆದು ಆಕಾಶದಲ್ಲಿ ಸ್ಥಿರಗೊಳಿಸಬೇಕು. ಅನಂತರ ಆಕಾಶದ ಚಿಂತನೆಯನ್ನೂ ತ್ಯಜಿಸಿ ನನ್ನ ಸ್ವರೂಪದಲ್ಲೇ ಆರೂಢನಾಗಬೇಕು. ಮತ್ತೆ ನಾನಲ್ಲದೆ ಬೇರೆ ಯಾವ ವಸ್ತುವನ್ನೂ ಚಿಂತಿಸಬಾರದು. ॥ ೪೪ ॥ ಈ ಪ್ರಕಾರ ಚಿತ್ತವು ಒಂದೆಡೆ ಸೇರಿದಾಗ, ಒಂದು ಜ್ಯೋತಿಯು ಇನ್ನೊಂದು ಜ್ಯೋತಿಯನ್ನು ಸೇರಿ ಒಂದಾಗುವಂತೆ ತನ್ನಲ್ಲಿ ನನ್ನನ್ನು ಮತ್ತು ಸರ್ವಾತ್ಮನಾದ ನನ್ನಲ್ಲಿ ತನ್ನನ್ನು ಅನುಭವಿಸತೊಡಗುವನು. ಹೀಗೆ ಅವನು ನನ್ನಲ್ಲಿ ಏಕೀಭಾವದಿಂದ ಸ್ಥಿತನಾಗಿ ಹೋಗುತ್ತಾನೆ. ॥ ೪೫ ॥ ಈ ವಿಧವಾಗಿ ತೀವ್ರವಾದ ಧ್ಯಾನಯೋಗದ ಮೂಲಕ ನನ್ನಲ್ಲಿಯೇ ತನ್ನ ಚಿತ್ತವನ್ನು ತೊಡಗಿಸಿದ ಯೋಗಿಯಲ್ಲಿ ದ್ರವ್ಯ, ಜ್ಞಾನ, ಕ್ರಿಯೆ ಇವುಗಳ ಕುರಿತಾದ ನಾನಾತ್ವದ ಭ್ರಮೆ ಅಳಿದುಹೋಗುತ್ತದೆ. ಅರ್ಥಾತ್ – ಎಲ್ಲ ಪದಾರ್ಥಗಳ ರೂಪದಲ್ಲಿ ಓರ್ವ ಪರಮಾತ್ಮನ ಸತ್ತೆಯೇ ಕಂಡುಬರುತ್ತದೆ. ಅವನ ಜ್ಞಾನದಲ್ಲಿ ಏಕಮಾತ್ರ ಪರಮಾತ್ಮನೇ ಉಳಿದುಬಿಡುತ್ತಾನೆ. ಅವನ ಎಲ್ಲ ಕ್ರಿಯೆಗಳೂ ಪರಮಾತ್ಮನಿಗಾಗಿಯೇ ಆಗುತ್ತವೆ. ಹೀಗೆ ಅವನಿಗೆ ಎಲ್ಲೆಡೆ ಪರಮಾತ್ಮನದೇ ಸ್ವರೂಪ ಕಂಡುಬರಲು ತೊಡಗುತ್ತದೆ. ಬಳಿಕ ಅವನಿಗೆ ಆಗಲೇ ಮೋಕ್ಷದ ಪ್ರಾಪ್ತಿಯಾಗುತ್ತದೆ. ॥ ೪೬ ॥

*ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಚತುರ್ದಶೋಽಧ್ಯಾಯಃ ॥ ೧೪ ॥

# ಹದಿನೈದನೆಯ ಅಧ್ಯಾಯ

## ಬೇರೆ-ಬೇರೆ ಸಿದ್ಧಿಗಳ ಹೆಸರುಗಳು ಮತ್ತು ಅವುಗಳ ಲಕ್ಷಣ

ಶ್ರೀಭಗವಾನುವಾಚ

ಜಿತೇಂದ್ರಿಯಸ್ಯ ಯುಕ್ತಸ್ಯ ಜಿತಶ್ವಾಸಸ್ಯ ಯೋಗಿನಃ ।
ಮಯಿ ಧಾರಯತಶ್ಚೇತ ಉಪತಿಷ್ಠಂತಿ ಸಿದ್ಧಯಃ
॥ ೧ ॥

ಉದ್ಧವ ಉವಾಚ

ಕಯಾ ಧಾರಣಯಾ ಕಾಸ್ವಿತ್ ಕಥಂಸ್ವಿತ್ ಸಿದ್ಧಿರಚ್ಯುತ ।
ಕತಿ ವಾ ಸಿದ್ಧಯೋ ಬ್ರೂಹಿ ಯೋಗಿನಾಂ ಸಿದ್ಧಿದೋ ಭವಾನ್
॥ ೨ ॥

ಶ್ರೀಭಗವಾನುವಾಚ

ಸಿದ್ಧಯೋಽಷ್ಟಾದಶ ಪ್ರೋಕ್ತಾ ಧಾರಣಾಯೋಗಪಾರಗೈಃ ।
ತಾಸಾಮಷ್ಟೌ ಮತ್ಪ್ರಧಾನಾ ದಶೈವ ಗುಣಹೇತವಃ
॥ ೩ ॥

ಅಣಿಮಾ ಮಹಿಮಾ ಮೂರ್ತೇರ್ಲಘಿಮಾ ಪ್ರಾಪ್ತಿರಿಂದ್ರಿಯೈಃ ।
ಪ್ರಾಕಾಮ್ಯಂ ಶ್ರುತದೃಷ್ಟೇಷು ಶಕ್ತಿಪ್ರೇರಣಮೀಶಿತಾ
॥ ೪ ॥

ಗುಣೇಷ್ವಸಂಗೋ ವಶಿತಾ ಯತ್ಕಾಮಸ್ತದವಸ್ಯತಿ ।
ಏತಾ ಮೇ ಸಿದ್ಧಯಃ ಸೌಮ್ಯ ಅಷ್ಟಾವೌತ್ಪತ್ತಿಕಾ ಮತಾಃ
॥ ೫ ॥

ಅನೂರ್ಮಿಮತ್ತ್ವಂ ದೇಹೇಽಸ್ಮಿನ್ ದೂರಶ್ರವಣದರ್ಶನಮ್ ।
ಮನೋಜವಃ ಕಾಮರೂಪಂ ಪರಕಾಯಪ್ರವೇಶನಮ್
॥ ೬ ॥

ಸ್ವಚ್ಛಂದಮೃತ್ಯುರ್ದೇವಾನಾಂ ಸಹಕ್ರೀಡಾನುದರ್ಶನಮ್ ।
ಯಥಾಸಂಕಲ್ಪಸಂಸಿದ್ಧಿರಾಜ್ಞಾಪ್ರತಿಹತಾಗತಿಃ
॥ ೭ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ** – ಪ್ರಿಯ ಉದ್ಧವನೇ! ಸಾಧಕನು ಇಂದ್ರಿಯ, ಪ್ರಾಣ, ಮನಸ್ಸನ್ನು ತನ್ನ ವಶಪಡಿಸಿಕೊಂಡು ತನ್ನ ಚಿತ್ತವನ್ನು ನನ್ನಲ್ಲಿ ತೊಡಗಿಸಿ, ನನ್ನ ಧಾರಣೆಯನ್ನು ಮಾಡತೊಡಗಿದಾಗ ಅವನ ಎದುರಿಗೆ ಅನೇಕ ಸಿದ್ಧಿಗಳು ಉಪಸ್ಥಿತವಾಗುತ್ತವೆ. ॥ ೧ ॥

**ಉದ್ಧವನು ಕೇಳಿದನು** – ಓ ಅಚ್ಯುತಾ! ಯಾವ ಧಾರಣೆಯಿಂದ ಯಾವ ವಿಧವಾದ ಸಿದ್ಧಿಯು ಪ್ರಾಪ್ತವಾಗುತ್ತದೆ ಮತ್ತು ಅವುಗಳ ಸಂಖ್ಯೆ ಎಷ್ಟು? ನೀನೇ ಯೋಗಿಗಳಿಗೆ ಸಿದ್ಧಿಗಳನ್ನು ಕೊಡುವವನು. ಆದ್ದರಿಂದ ಇವುಗಳನ್ನು ವರ್ಣಿಸುವವನಾಗು.॥೨॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವಾ! ಧಾರಣಾಯೋಗದ ಪಾರಂಗತ ಯೋಗಿಗಳು ಹದಿನೆಂಟು ಪ್ರಕಾರದ ಸಿದ್ಧಿಗಳನ್ನು ತಿಳಿಸಿರುತ್ತಾರೆ. ಅವುಗಳಲ್ಲಿ ಎಂಟು ಸಿದ್ಧಿಗಳಾದರೋ ಪ್ರಧಾನವಾಗಿ ನನ್ನಲ್ಲೇ ಇರುತ್ತವೆ ಹಾಗೂ ಹತ್ತು ಸತ್ತ್ವಗುಣದ ವಿಕಾಸದಿಂದಲೂ ದೊರೆಯುತ್ತವೆ. ॥ ೩॥ ಅವುಗಳಲ್ಲಿ 'ಅಣಿಮಾ', 'ಮಹಿಮಾ', 'ಲಘಿಮಾ' ಈ ಮೂರು ಸಿದ್ಧಿಗಳಾದರೋ ಶರೀರದ್ದಾಗಿವೆ. ಬಯಸಿದೆಲ್ಲವೂ ದೊರೆಯುವುದು ಇದು 'ಪ್ರಾಪ್ತಿ' ಎಂಬ ಇಂದ್ರಿಯಗಳ ಒಂದು ಸಿದ್ಧಿಯಾಗಿದೆ. ಲೌಕಿಕ ಮತ್ತು ಪಾರಲೌಕಿಕ ಪದಾರ್ಥಗಳನ್ನು ಇಚ್ಛಾನುಸಾರ ಅನುಭವಿಸುವ ಸಿದ್ಧಿಯು 'ಪ್ರಾಕಾಮ್ಯ'ವಾಗಿದೆ. ಮಾಯೆ ಹಾಗೂ ಅದರ ಕಾರ್ಯಗಳನ್ನು ಇಚ್ಛಾನುಸಾರ ಸಂಚಾಲಿತಗೊಳಿಸುವುದು 'ಈಶಿತಾ' ಹೆಸರಿನ ಸಿದ್ಧಿಯಾಗಿದೆ. ॥ ೪ ॥ ವಿಷಯಗಳಲ್ಲಿದ್ದರೂ ಅವುಗಳಲ್ಲಿ ಆಸಕ್ತನಾಗದಿರುವುದು 'ವಶಿತಾ' ಆಗಿದೆ ಮತ್ತು ಯಾವು-ಯಾವುದನ್ನು ಕಾಮಿಸುವನೋ ಅದರ ಸೀಮೆಯತನಕ ಮುಟ್ಟುವುದೇ 'ಕಾಮಾವಸಾಯಿತಾ' ಎಂಬ ಎಂಟನೆಯ ಸಿದ್ಧಿಯಾಗಿದೆ. ಈ ಎಂಟೂ ಸಿದ್ಧಿಗಳು ನನ್ನಲ್ಲಿ ಸ್ವಭಾವತಃ ಇರುತ್ತವೆ. (ಇವನ್ನು ನಾನು ಯಾರಿಗೆ ಕೊಡುವೆನೋ ಅವನಿಗೆ ಅಂಶತಃ ಪ್ರಾಪ್ತವಾಗುತ್ತವೆ.) ॥ ೫ ॥ ಇವಲ್ಲದೆ ಬೇರೆ ಕೆಲವು ಸಿದ್ಧಿಗಳು ಇವೆ. ಶರೀರದಲ್ಲಿ ಹಸಿವು-ಬಾಯಾರಿಕೆ, ಕಾಮ-ಕ್ರೋಧ ಮುಂತಾದ ವೇಗಗಳು ಉಂಟಾಗದಿರುವುದು, ಬಹಳ ದೂರದ ವಸ್ತುವನ್ನು ನೋಡುವುದು, ತುಂಬಾ ದೂರದ ಮಾತನ್ನು ಕೇಳುವುದು, ಮನಸ್ಸಿನೊಂದಿಗೇ ಶರೀರದಿಂದ ಆ ಜಾಗಕ್ಕೆ ತಲುಪುವುದು, ಇಚ್ಛಿಸಿದ ರೂಪವನ್ನು ಧರಿಸುವುದು, ಬೇರೆಯವರ ಶರೀರದಲ್ಲಿ ಪ್ರವೇಶಿಸುವುದು, ಇಚ್ಛಿಸಿದಾಗ ಶರೀರವನ್ನು ಬಿಡುವುದು, ಅಪ್ಸರೆಯರೊಂದಿಗೆ ನಡೆಯುವ ದೇವತೆಗಳ ಕ್ರೀಡೆಗಳನ್ನು ದರ್ಶಿಸುವುದು, ಎಣಿಸಿದ ಸಂಕಲ್ಪದ ಸಿದ್ಧಿ, ಎಲ್ಲ ಕಡೆಗಳಲ್ಲಿ ಎಲ್ಲರ ಮೂಲಕ ವಿರೋಧವಿಲ್ಲದೆ ಆಜ್ಞಾಪಾಲನೆ – ಈ ಹತ್ತು ಸಿದ್ಧಿಗಳು ಸತ್ತ್ವಗುಣದ ವಿಶೇಷ ವಿಕಾಸದಿಂದ ಉಂಟಾಗುತ್ತವೆ. ॥ ೬-೭ ॥

ತ್ರಿಕಾಲಜ್ಞತ್ವಮದ್ವಂದ್ವಂ ಪರಚಿತ್ತಾದ್ಯಭಿಜ್ಞತಾ ।
ಅಗ್ನ್ಯರ್ಕಾಂಬುವಿಷಾದೀನಾಂ ಪ್ರತಿಷ್ಟಂಭೋಽಪರಾಜಯಃ
॥ ೮ ॥

ಭೂತ, ಭವಿಷ್ಯ, ವರ್ತಮಾನದ ಮಾತನ್ನು ತಿಳಿದುಕೊಳ್ಳುವುದು, ಶೀತ-ಉಷ್ಣ, ಸುಖ-ದುಃಖ, ರಾಗ-ದ್ವೇಷ ಮುಂತಾದ ದ್ವಂದ್ವಗಳಿಗೆ ವಶನಾಗದಿರುವುದು, ಬೇರೆಯವರ ಮನಸ್ಸಿನ ಮಾತನ್ನು ಅರಿತುಕೊಳ್ಳುವುದು, ಅಗ್ನಿ, ಸೂರ್ಯ, ಜಲ, ವಿಷ ಮುಂತಾದವುಗಳ ಶಕ್ತಿಯನ್ನು ಸ್ತಂಭಿತಗೊಳಿಸುವುದು, ಯಾರಿಂದಲೂ ಸೋಲದಿರುವುದು – ಈ ಐದು ಸಿದ್ಧಿಗಳೂ ಕೂಡ ಯೋಗಿಗಳಿಗೆ ದೊರೆಯುತ್ತವೆ. ॥ ೮ ॥

ಏತಾಶ್ಚೋದ್ದೇಶತಃ ಪ್ರೋಕ್ತಾ ಯೋಗಧಾರಣಸಿದ್ಧಯಃ ।
ಯಯಾ ಧಾರಣಯಾ ಯಾ ಸ್ಯಾದ್ಯಥಾ ವಾ ಸ್ಯಾನ್ನಿಬೋಧ ಮೇ
॥ ೯ ॥

ಪ್ರಿಯ ಉದ್ಧವನೇ! ಯೋಗ-ಧಾರಣೆ ಮಾಡುವುದರಿಂದ ಪ್ರಾಪ್ತವಾಗುವ ಸಿದ್ಧಿಗಳನ್ನು ನಾನು ನಾಮ ನಿರ್ದೇಶದೊಂದಿಗೆ ವರ್ಣಿಸಿದೆ. ಈಗ ಯಾವ ಧಾರಣೆಯಿಂದ ಯಾವ ಸಿದ್ಧಿಯು ಪ್ರಾಪ್ತವಾಗುತ್ತದೆ ಎಂಬುದನ್ನು ಹೇಳುತ್ತೇನೆ, ಕೇಳು. ॥ ೯ ॥*

ಭೂತಸೂಕ್ಷ್ಮಾತ್ಮನಿ ಮಯಿ ತನ್ಮಾತ್ರಂ ಧಾರಯೇನ್ಮನಃ ।
ಅಣಿಮಾನಮವಾಪ್ನೋತಿ ತನ್ಮಾತ್ರೋಪಾಸಕೋ ಮಮ
॥ ೧೦ ॥

ಪ್ರಿಯ ಉದ್ಧವಾ! ಪಂಚಮಹಾಭೂತಗಳ ಸೂಕ್ಷ್ಮರೂಪವನ್ನು ತನ್ಮಾತ್ರೆ ಎಂದು ಹೇಳುತ್ತಾರೆ. ಅದು ನನ್ನದೇ ಶರೀರವಾಗಿದೆ. ನನ್ನ ಈ ಪಂಚತನ್ಮಾತ್ರೆಗಳಲ್ಲಿ ತನ್ನ ಮನಸ್ಸನ್ನು ಧಾರಣೆ ಮಾಡಿಕೊಂಡ ಸಾಧಕನಿಗೆ 'ಅಣಿಮಾ' ಎಂಬ ಸಿದ್ಧಿಯು ಪ್ರಾಪ್ತವಾಗುತ್ತದೆ. ॥ ೧೦ ॥

ಮಹತ್ಯಾತ್ಮನ್ಮಯಿ ಪರೇ ಯಥಾಸಂಸ್ಥಂ ಮನೋ ದಧತ್ ।
ಮಹಿಮಾನಮವಾಪ್ನೋತಿ ಭೂತಾನಾಂ ಚ ಪೃಥಕ್ ಪೃಥಕ್
॥ ೧೧ ॥

ಈ ಮಹತ್ತತ್ತ್ವದ ರೂಪದಲ್ಲಿ ನಾನೇ ಪ್ರಕಾಶಿತನಾಗಿದ್ದೇನೆ. ಹೇಗೆ ಸಾಧ್ಯವೋ ಹಾಗೆ ತನ್ನ ಮನಸ್ಸನ್ನು ನನ್ನ ಈ ಮಹತ್ತತ್ತ್ವರೂಪೀ ಪರಮಾತ್ಮನಲ್ಲಿ ಧಾರಣೆ ಮಾಡುವವನಿಗೆ 'ಮಹಿಮಾ' ಎಂಬ ಸಿದ್ಧಿಯು ಪ್ರಾಪ್ತವಾಗುತ್ತದೆ. ಹಾಗೆಯೇ ಒಂದೊಂದು ಮಹಾಭೂತದ ತನ್ಮಾತ್ರೆಯಲ್ಲಿ ಮನಸ್ಸನ್ನು ಧಾರಣೆಗೈದರೂ ಕೂಡ ಅವನಿಗೆ ಮಹಿಮೆ ಎಂಬ ಸಿದ್ಧಿಯು ಪ್ರಾಪ್ತವಾಗುತ್ತದೆ. ॥ ೧೧ ॥

ಪರಮಾಣುಮಯೇ ಚಿತ್ತಂ ಭೂತಾನಾಂ ಮಯಿ ರಂಜಯನ್ ।
ಕಾಲಸೂಕ್ಷ್ಮಾರ್ಥತಾಂ ಯೋಗೀ ಲಘಿಮಾನಮವಾಪ್ನುಯಾತ್
॥ ೧೨ ॥

ವಾಯುವೇ ಮುಂತಾದ ನಾಲ್ಕೂ ಭೂತಗಳೊಳಗೆ ಪರಮಾಣುರೂಪದಿಂದ ಆಕಾಶವು ಎಲ್ಲೆಡೆ ತುಂಬಿದೆ. ಹಾಗೆಯೇ ನಾನು ಸರ್ವತ್ರ ಪರಿಪೂರ್ಣನಾಗಿದ್ದೇನೆ. ಯೋಗಿಯು ತನ್ನ ಚಿತ್ತವನ್ನು ನನ್ನಲ್ಲಿ ತೊಡಗಿಸುತ್ತಾ ನನ್ನಲ್ಲಿ ಏಕತೆಯನ್ನು ಪಡೆದುಕೊಳ್ಳುವವನಿಗೆ 'ಲಘಿಮಾ' ಎಂಬ ಸಿದ್ಧಿಯು ಪ್ರಾಪ್ತವಾಗುತ್ತದೆ. ಕಾಲದ ಸೂಕ್ಷ್ಮಕ್ಕಿಂತ ಸೂಕ್ಷ್ಮಪರಮಾಣು ಆಗುವ ಸಾಮರ್ಥ್ಯವು ದೊರೆಯುತ್ತದೆ. ॥ ೧೨ ॥

ಧಾರಯನ್ ಮಯ್ಯಹಂತತ್ತ್ವೇ ಮನೋ ವೈಕಾರಿಕೇಽಖಿಲಮ್ ।
ಸರ್ವೇಂದ್ರಿಯಾಣಾಮಾತ್ಮತ್ವಂ ಪ್ರಾಪ್ತಿಂ ಪ್ರಾಪ್ನೋತಿ ಮನ್ಮನಾಃ
॥ ೧೩ ॥

ಮನಸ್ಸು ಎಲ್ಲ ಇಂದ್ರಿಯಗಳ ಒಡೆಯವಾಗಿದೆ. ಇದು ಅಹಂತತ್ತ್ವದ ಸತ್ತ್ವಗುಣರೂಪೀ ವಿಕಾರದಿಂದ ಉಂಟಾಗಿದೆ. ಯೋಗಿಯು ನನ್ನ ಸ್ವರೂಪಭೂತ ಸಾತ್ತ್ವಿಕ ಅಹಂಕಾರದಲ್ಲಿ ತನ್ನ ಮನಸ್ಸನ್ನು ಏಕಾಗ್ರಗೊಳಿಸಿದರೆ, ಅವನು ಎಲ್ಲ ಇಂದ್ರಿಯಗಳ ಒಡೆತನವನ್ನು ಪಡೆಯುತ್ತಾನೆ. ಹೀಗೆ ಮನಸ್ಸನ್ನು ನನ್ನಲ್ಲಿ ತೊಡಗಿಸುವ ಭಕ್ತನು 'ಪ್ರಾಪ್ತಿ' ಎಂಬ ಸಿದ್ಧಿಯನ್ನು ಪಡೆಯುತ್ತಾನೆ. ॥ ೧೩ ॥

ಮಹತ್ಯಾತ್ಮನಿ ಯಃ ಸೂತ್ರೇ ಧಾರಯೇನ್ಮಯಿ ಮಾನಸಮ್ ।
ಪ್ರಾಕಾಮ್ಯಂ ಪಾರಮೇಷ್ಠ್ಯಂ ಮೇ ವಿಂದತೇಽವ್ಯಕ್ತಜನ್ಮನಃ
॥ ೧೪ ॥

ಅವ್ಯಕ್ತಜನ್ಮಾ ನನ್ನಿಂದಲೇ ಬ್ರಹ್ಮಾಂಡದ ನಿರ್ಮಾಣವಾಗಿದೆ. ಮಹತತ್ತ್ವದ ಅಭಿಮಾನಿಯಾದ ಸೂತ್ರಾತ್ಮಾ ಹಿರಣ್ಯಗರ್ಭದಲ್ಲಿ ಮನಸ್ಸನ್ನು ಧಾರಣೆಗೈದರೆ ಅವನಿಗೆ 'ಪ್ರಾಕಾಮ್ಯ' ಸಿದ್ಧಿಯು ಪ್ರಾಪ್ತವಾಗುತ್ತದೆ. ಅವನು ಇಡೀ ಬ್ರಹ್ಮಾಂಡದ ಒಡೆಯನಾಗುತ್ತಾನೆ. ಪಾರಮೇಷ್ಠ್ಯತ್ವವನ್ನು ಪಡೆದುಕೊಳ್ಳುತ್ತಾನೆ. ॥ ೧೪ ॥

* ಈ ಸಮಸ್ತ ವಿಶ್ವದಲ್ಲಿರುವುದೆಲ್ಲವೂ ಪರಮಾತ್ಮನ ಯಾವುದೋ ಒಂದು ಅಂಶದ ಅಭಿವ್ಯಕ್ತಿಯೇ ಆಗಿದೆ. ಇದರ ಹೊರಗೆ-ಒಳಗೆ ಎಲ್ಲೆಡೆ ಅವನೇ ವ್ಯಾಪ್ತನಾಗಿದ್ದಾನೆ. ಅವನು ಯಾವ ತತ್ತ್ವದ ಮೂಲಕ ಈ ವಿಶ್ವವನ್ನು ನಿರ್ಮಿಸಿರುವನೋ, ಆಯಾಯಾ ಸಮಷ್ಟಿತತ್ತ್ವದಲ್ಲಿ ಸಾಧಕನು ತನ್ನನ್ನು ಏಕಾಕಾರ ಮಾಡಿಕೊಂಡಾಗ, ಅದಕ್ಕನುಸಾರ ಆ ಶಕ್ತಿಯನ್ನು ಪಡೆದುಕೊಳ್ಳುವನು. ಇದಕ್ಕೆ ಸಿದ್ಧಿಗಳು ಎಂದು ಹೇಳುತ್ತಾರೆ. ಪರಮಾತ್ಮತತ್ತ್ವವನ್ನು ಪಡೆದ ಮಹಾಪುರುಷನಿಗಾಗಿ ಈ ಸಿದ್ಧಿಗಳ ಯಾವ ಮಹತ್ವವೂ ಇರುವುದಿಲ್ಲ.

ವಿಷ್ಣೌ ತ್ರ್ಯಧೀಶ್ವರೇ ಚಿತ್ತಂ ಧಾರಯೇತ್ಕಾಲವಿಗ್ರಹೇ ।
ಸ ಈಶಿತ್ವಮವಾಪ್ನೋತಿ ಕ್ಷೇತ್ರಕ್ಷೇತ್ರಜ್ಞಚೋದನಾಮ್
॥ ೧೫ ॥

ನಾರಾಯಣೇ ತುರೀಯಾಖ್ಯೇ ಭಗವಚ್ಛಬ್ದಶಬ್ದಿತೇ ।
ಮನೋ ಮಯ್ಯಾದಧದ್ಯೋಗೀ ಮದ್ಧರ್ಮಾ ವಶಿತಾಮಿಯಾತ್
॥ ೧೬ ॥

ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ ವಿಶದಂ ಮನಃ ।
ಪರಮಾನಂದಮಾಪ್ನೋತಿ ಯತ್ರ ಕಾಮೋಽವಸೀಯತೇ
॥ ೧೭ ॥

ಶ್ವೇತದ್ವೀಪಪತೌ ಚಿತ್ತಂ ಶುದ್ಧೇ ಧರ್ಮಮಯೇ ಮಯಿ ।
ಧಾರಯನ್ಶ್ವೇತತಾಂ ಯಾತಿ ಷಡೂರ್ಮಿರಹಿತೋ ನರಃ
॥ ೧೮ ॥

ಮಯ್ಯಾಕಾಶಾತ್ಮನಿ ಪ್ರಾಣೇ ಮನಸಾ ಘೋಷಮುದ್ವಹನ್ ।
ತತ್ರೋಪಲಬ್ಧಾಭೂತಾನಾಂ ಹಂಸೋ ವಾಚಃ ಶೃಣೋತ್ಯಸೌ
॥ ೧೯ ॥

ಚಕ್ಷುಸ್ತ್ವಷ್ಟರಿ ಸಂಯೋಜ್ಯ ತ್ವಷ್ಟಾರಮಪಿ ಚಕ್ಷುಷಿ ।
ಮಾಂ ತತ್ರ ಮನಸಾ ಧ್ಯಾಯನ್ವಿಶ್ವಂ ಪಶ್ಯತಿ ಸೂಕ್ಷ್ಮದೃಕ್
॥ ೨೦ ॥

ಮನೋ ಮಯಿ ಸುಸಂಯೋಜ್ಯ ದೇಹಂ ತದನು ವಾಯುನಾ ।
ಮದ್ಧಾರಣಾನುಭಾವೇನ ತತ್ರಾತ್ಮಾ ಯತ್ರ ವೈ ಮನಃ
॥ ೨೧ ॥

ತ್ರಿಲೋಕಗಳ ಆಧಾರನು ನಾನೇ ಆಗಿರುವೆನು. ತ್ರಿಗುಣಮಯ ಮಾಯೆಯ ಒಡೆಯ ನಾನೇ ಆಗಿದ್ದೇನೆ. ಸಮಸ್ತ ಬ್ರಹ್ಮಾಂಡವನ್ನು ನಾಶಗೊಳಿಸುವ ಸಮರ್ಥಕಾಲವೂ ನನ್ನದೇ ವಿಗ್ರಹವಾಗಿದೆ. ಕ್ಷೇತ್ರ (ಶರೀರ) ಮತ್ತು ಕ್ಷೇತ್ರಜ್ಞ (ಜೀವಾತ್ಮಾ) ಇವೆರಡರ ಪ್ರೇರಕ ಪುರುಷೋತ್ತಮನು ನಾನೇ ಆಗಿದ್ದೇನೆ. ನನ್ನ ಈ ವಿಷ್ಣುಸ್ವರೂಪದಲ್ಲಿ ಚಿತ್ತವನ್ನು ಧಾರಣೆಮಾಡಿದರೆ ಅವನಿಗೆ 'ಈಶಿತ್ವ' ಎಂಬ ಸಿದ್ಧಿಯು ಪ್ರಾಪ್ತವಾಗಿ ಹೋಗುತ್ತದೆ. ಅವನಿಗೂ ಕೂಡ ಮತ್ತೆ ನನ್ನಂತೆಯೇ ಜೀವಿಗಳನ್ನು ಇಚ್ಛಾನುಸಾರ ಪ್ರೇರಿತಗೊಳಿಸುವ ಸಾಮರ್ಥ್ಯ ದೊರೆಯುತ್ತದೆ. ॥ ೧೫ ॥ "ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥" ಈ ಆರು ಐಶ್ವರ್ಯಗಳಿಂದ ಭಗವಂತನು ಕೂಡಿರುವನು. ಈ ಭಗವಂತನೇ ನಾರಾಯಣನಾಗಿರುವನು. ತುರೀಯ ಸ್ಥಿತಿಯಲ್ಲಿರುವ ನನ್ನ ಈ ನಾರಾಯಣ ಸ್ವರೂಪದಲ್ಲಿ ಮನಸ್ಸನ್ನು ಧಾರಣೆಗೈದು ಸ್ಥಿತನಾದ ಯೋಗಿಯು ಮದ್ಧರ್ಮಾ ಆಗಿಬಿಡುತ್ತಾನೆ. ಅರ್ಥಾತ್ – ನನ್ನ ಗುಣಗಳು ಅವನಲ್ಲಿ ಬಂದುಬಿಡುತ್ತವೆ. ಇಂತಹ ಯೋಗಿಯು 'ವಶಿತಾ' ಎಂಬ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ. ॥ ೧೬ ॥ ಸ್ವಚ್ಛವಾದ ಮನಸ್ಸಿನಿಂದ ನಿರ್ಗುಣ ಬ್ರಹ್ಮವಾದ ನನ್ನಲ್ಲಿ ತೊಡಗಿರುವ ಯೋಗಿಯು ನನ್ನ ಆ ನಿರ್ಗುಣ ನಿರಾಕಾರ ರೂಪವನ್ನು ಉಪಾಸನೆಗೈದು ಪರಮಾನಂದವನ್ನು ಪಡೆಯುತ್ತಾನೆ. ಅವನಿಗೆ ಯಾವ ರೀತಿಯ ಕಾಮನೆಯೂ ಇರುವುದಿಲ್ಲ. ಇದನ್ನು 'ಕಾಮಾವಸಾಯಿತಾ' ಸಿದ್ಧಿ ಎಂದು ಹೇಳುತ್ತಾರೆ. ॥ ೧೭ ॥ ಶ್ವೇತದ್ವೀಪದ ಸ್ವಾಮಿ ನಾನೇ ಆಗಿದ್ದೇನೆ. ಧರ್ಮವು ನನ್ನದೇ ಸ್ವರೂಪವಾಗಿದೆ. ಇಂತಹ ನನ್ನ ವಿಶುದ್ಧ ಸ್ವರೂಪದಲ್ಲಿ ತನ್ನ ಮನಸ್ಸನ್ನು ಸ್ಥಿರಗೊಳಿಸುವವನು ಹಸಿವು, ತೃಷೆ, ಕಾಮ, ಕ್ರೋಧ, ಶೋಕ, ಮೋಹ ಇವುಗಳಿಂದ ಪೀಡಿತನಾಗುವುದಿಲ್ಲ. ಅವನಿಗೆ ಶುದ್ಧಸ್ವರೂಪ ಪರಮಾತ್ಮನಾದ ನನ್ನ ಪ್ರಾಪ್ತಿಯು ಉಂಟಾಗುತ್ತದೆ. ॥ ೧೮ ॥ ನಾನೇ ಸಮಷ್ಟಿ-ಪ್ರಾಣಸ್ವರೂಪೀ ಆಕಾಶಾತ್ಮಾ ಆಗಿದ್ದೇನೆ. ನನ್ನ ಈ ಸ್ವರೂಪದಲ್ಲಿ ಮನಸ್ಸಿನ ಮೂಲಕ ಅನಾಹತನಾದವನ್ನು ಚಿಂತಿಸುವವನು 'ದೂರಶ್ರವಣ' ಎಂಬ ಸಿದ್ಧಿಯಿಂದ ಸಂಪನ್ನನಾಗಿರುತ್ತಾನೆ. ಈ ಧಾರಣೆಯಿಂದ ಯೋಗಿಯು ಆಕಾಶದಲ್ಲಿ ಉಪಲಬ್ಧವಾಗುವ ವಿವಿಧ ಪ್ರಾಣಿಗಳ ಮಾತುಗಳನ್ನು ಕೇಳಿ-ತಿಳಿಯಬಲ್ಲನು. ॥ ೧೯ ॥ ಯಾವ ಯೋಗಿಯು ಕಣ್ಣುಗಳನ್ನು ಸೂರ್ಯನಲ್ಲಿ ಹಾಗೂ ಸೂರ್ಯನನ್ನು ಕಣ್ಣುಗಳಲ್ಲಿ ಸಂಯುಕ್ತಗೊಳಿಸುವನೋ ಮತ್ತು ಎರಡರ ಸಂಯೋಗದಲ್ಲಿ ಮನಸ್ಸಿನಲ್ಲೇ ನನ್ನನ್ನು ಧ್ಯಾನಿಸುವನೋ, ಅವನ ದೃಷ್ಟಿ ಸೂಕ್ಷ್ಮವಾಗಿ ಹೋಗುತ್ತದೆ. ಅವನಿಗೆ 'ದೂರದರ್ಶನ' ಎಂಬ ಸಿದ್ಧಿಯು ಪ್ರಾಪ್ತವಾಗುತ್ತದೆ. ಅವನು ಇಡೀ ಪ್ರಪಂಚವನ್ನು ನೋಡಬಲ್ಲನು. ॥ ೨೦ ॥ ಮನಸ್ಸು ಮತ್ತು ಶರೀರವನ್ನು ಪ್ರಾಣವಾಯು ಸಹಿತ ನನ್ನೊಡನೆ ಸಂಯುಕ್ತಗೊಳಿಸಿ, ನನ್ನ ಧಾರಣೆ ಮಾಡಿದರೆ ಇದರಿಂದ 'ಮನೋಜವ' ಎಂಬ ಸಿದ್ಧಿಯು ಪ್ರಾಪ್ತವಾಗುತ್ತದೆ. ಇದರ ಪ್ರಭಾವದಿಂದ ಆ ಯೋಗಿಯು ಎಲ್ಲಿಗಾದರೂ ಹೋಗುವ ಸಂಕಲ್ಪಮಾಡಿದರೆ, ಅಲ್ಲಿಗೆ ಅವನ ಶರೀರವು ಆಗಲೇ ತಲುಪುತ್ತದೆ. ॥ ೨೧ ॥

ಯದಾ ಮನ ಉಪಾದಾಯ ಯದ್ಯದ್ರೂಪಂ ಬುಭೂಷತಿ ।
ತತ್ತದ್ಭವೇನ್ಮನೋರೂಪಂ ಮದ್ಯೋಗಬಲಮಾಶ್ರಯಃ
॥ ೨೨ ॥

ಪರಕಾಯಂ ವಿಶನ್ ಸಿದ್ಧ ಆತ್ಮಾನಂ ತತ್ರ ಭಾವಯೇತ್ ।
ಪಿಂಡಂ ಹಿತ್ವಾ ವಿಶೇತ್ಪ್ರಾಣೋ ವಾಯುಭೂತಃ ಷಡಂಘ್ರಿವತ್
॥ ೨೩ ॥

ಪಾರ್ಷ್ಣ್ಯಾಽಽಪೀಡ್ಯ ಗುದಂ ಪ್ರಾಣಂ ಹೃದುರಃಕಂಠಮೂರ್ಧಸು ।
ಆರೋಪ್ಯ ಬ್ರಹ್ಮರಂಧ್ರೇಣ ಬ್ರಹ್ಮ ನೀತ್ವೋತ್ಸೃಜೇತ್ತನುಮ್
॥ ೨೪ ॥

ವಿಹರಿಷ್ಯನ್ಸುರಾಕ್ರೀಡೇ ಮತ್ಸ್ಥಂ ಸತ್ತ್ವಂ ವಿಭಾವಯೇತ್ ।
ವಿಮಾನೇನೋಪತಿಷ್ಠಂತಿ ಸತ್ತ್ವವೃತ್ತೀಃ ಸುರಸ್ತ್ರಿಯಃ
॥ ೨೫ ॥

ಯಥಾ ಸಂಕಲ್ಪಯೇದ್ಬುದ್ಧ್ಯಾ ಯದಾ ವಾ ಮತ್ಪರಃ ಪುಮಾನ್ ।
ಮಯಿ ಸತ್ಯೇ ಮನೋ ಯುಂಜನ್ ತಥಾ ತತ್ಸಮುಪಾಶ್ನುತೇ
॥ ೨೬ ॥

ಯೋ ವೈ ಮದ್ಭಾವಮಾಪನ್ನ ಈಶಿತುರ್ವಶಿತುಃ ಪುಮಾನ್ ।
ಕುತಶ್ಚಿನ್ನ ವಿಹನ್ಯೇತ ತಸ್ಯ ಚಾಜ್ಞಾ ಯಥಾ ಮಮ
॥ ೨೭ ॥

ಮದ್ಭಕ್ತ್ಯಾ ಶುದ್ಧಸತ್ತ್ವಸ್ಯ ಯೋಗಿನೋ ಧಾರಣಾವಿದಃ ।
ತಸ್ಯ ತ್ರೈಕಾಲಿಕೀ ಬುದ್ಧಿರ್ಜನ್ಮಮೃತ್ಯೂಪಬೃಂಹಿತಾ
॥ ೨೮ ॥

ಅಗ್ನ್ಯಾದಿಭಿರ್ನ ಹನ್ಯೇತ ಮುನೇರ್ಯೋಗಮಯಂ ವಪುಃ ।
ಮದ್ಯೋಗಶ್ರಾಂತಚಿತ್ತಸ್ಯ ಯಾದಸಾಮುದಕಂ ಯಥಾ
॥ ೨೯ ॥

ಮದ್ವಿಭೂತೀರಭಿಧ್ಯಾಯನ್ ಶ್ರೀವತ್ಸಾಸ್ತ್ರವಿಭೂಷಿತಾಃ ।
ಧ್ವಜಾತಪತ್ರವ್ಯಜನೈಃ ಸ ಭವೇದಪರಾಜಿತಃ
॥ ೩೦ ॥

ಯಾವಾಗ ಯೋಗಿಯು ಮನಸ್ಸನ್ನು ಉಪಾದಾನ ಕಾರಣವನ್ನಾಗಿಸಿ ಯಾರದಾದರೂ ರೂಪವನ್ನು ಧರಿಸಲು ಬಯಸಿದರೆ ತನ್ನ ಮನಸ್ಸಿಗನುಕೂಲವಾಗಿ ಅಂತಹುದೇ ರೂಪವನ್ನು ಧರಿಸಿಕೊಳ್ಳುವನು. ಇದರ ಕಾರಣ – ಅವನು ತನ್ನ ಚಿತ್ತವನ್ನು ನನ್ನೊಂದಿಗೆ ಸೇರಿಸಿರುವನು. ॥ ೨೨ ॥ ಇನ್ನೊಂದು ಶರೀರದಲ್ಲಿ ಪ್ರವೇಶಿಸಲು ಬಯಸುವ ಯೋಗಿಯು ನಾನು ಅದೇ ಶರೀರದಲ್ಲಿದ್ದೇನೆ ಹೀಗೆ ಭಾವಿಸಬೇಕು. ಹೀಗೆ ಮಾಡುವುದರಿಂದ ಅವನ ಪ್ರಾಣವು ವಾಯುರೂಪವನ್ನು ಧರಿಸಿ ಒಂದು ಹೂವಿನಿಂದ ಇನ್ನೊಂದು ಹೂವಿಗೆ ಹಾರುವ ದುಂಬಿಯಂತೆ ಅವನು ತನ್ನ ಶರೀರವನ್ನು ಬಿಟ್ಟು ಇನ್ನೊಂದು ಶರೀರದಲ್ಲಿ ಪ್ರವೇಶಿಸುತ್ತಾನೆ. ॥ ೨೩ ॥ ಯೋಗಿಗೆ ಶರೀರವನ್ನು ಪರಿತ್ಯಾಗ ಮಾಡಬೇಕೆಂದಾಗ ಹಿಮ್ಮಡಿಯಿಂದ ಗುದದ್ವಾರವನ್ನು ಒತ್ತಿ ಪ್ರಾಣವಾಯುವನ್ನು ಕ್ರಮವಾಗಿ ಹೃದಯ, ವಕ್ಷಸ್ಥಲ, ಕಂಠ, ಮಸ್ತಕಕ್ಕೆ ಕೊಂಡುಹೋಗಬೇಕು. ಮತ್ತೆ ಬ್ರಹ್ಮರಂಧ್ರದ ಮೂಲಕ ಅದನ್ನು ಬ್ರಹ್ಮನಲ್ಲಿ ಲೀನಗೊಳಿಸಿ ಶರೀರವನ್ನು ತ್ಯಜಿಸಿ ಬಿಡುತ್ತಾನೆ. ॥ ೨೪ ॥ ಅವನಿಗೆ ದೇವತೆಗಳ ವಿಹಾರಸ್ಥಳಗಳಲ್ಲಿ ಕ್ರೀಡಿಸಲು ಇಚ್ಛೆ ಉಂಟಾದರೆ, ನನ್ನ ಶುದ್ಧ ಸತ್ತ್ವಗುಣಮಯ ಸ್ವರೂಪವನ್ನು ಭಾವಿಸಬೇಕು ಹೀಗೆ ಮಾಡುವುದರಿಂದ ನನ್ನ ಸತ್ತ್ವಗುಣ ಅಂಶರೂಪೀ ಸುರ-ಸುಂದರಿಯರು ವಿಮಾನವನ್ನು ಹತ್ತಿ ಅವನ ಬಳಿಗೆ ಬಂದು ತಲುಪುತ್ತಾರೆ. ॥ ೨೫ ॥

ನನ್ನ ಪರಾಯಣನಾದ ಯೋಗಿಯು ಸತ್ಯಸಂಕಲ್ಪರೂಪೀ ನನ್ನಲ್ಲಿ ತನ್ನ ಚಿತ್ತವನ್ನು ಸ್ಥಿರಗೊಳಿಸಿದರೆ ಅವನಿಗೆ ಸಂಕಲ್ಪ ಸಿದ್ಧಿ ಉಂಟಾಗುತ್ತದೆ. ಮನಸ್ಸಲ್ಲಿ ಯಾವಾಗ ಎಂತಹ ಸಂಕಲ್ಪ ಮಾಡುವನೋ, ಆಗಲೇ ಅವನ ಆ ಸಂಕಲ್ಪವು ಸಿದ್ಧವಾಗಿ ಹೋಗುತ್ತದೆ. ॥ ೨೬ ॥ ನಾನು 'ಈಶಿತ್ವ' ಮತ್ತು 'ವಶಿತ್ವ' ಎಂಬ ಎರಡೂ ಸಿದ್ಧಿಗಳ ಒಡೆಯನಾಗಿದ್ದೇನೆ. ಅದಕ್ಕಾಗಿ ಎಂದೂ ಯಾರೂ ನನ್ನ ಆಜ್ಞೆಯನ್ನು ಉಲ್ಲಂಘಿಸಲಾರರು ಹಾಗೂ ಎಲ್ಲರೂ ನನ್ನ ಶಾಸನವನ್ನೇ ಒಪ್ಪಿಕೊಳ್ಳುವರು. ನನ್ನ ಆ ರೂಪವನ್ನು ಚಿಂತಿಸುತ್ತಾ ಅದೇ ಭಾವನೆಯಿಂದ ಯುಕ್ತನಾದವನು ನನ್ನಂತೆಯೇ ಅವನ ಆಜ್ಞೆಯನ್ನು ಯಾರೂ ಉಲ್ಲಂಘಿಸಲಾರರು. ॥ ೨೭ ॥ ನನ್ನ ಧಾರಣೆಯನ್ನು ಮಾಡುತ್ತಾ-ಮಾಡುತ್ತಾ , ನನ್ನ ಭಕ್ತಿಯ ಪ್ರಭಾವದಿಂದ ಶುದ್ಧವಾದ ಯೋಗಿಯ ಬುದ್ಧಿಯು ಜನ್ಮ-ಮೃತ್ಯು ಮುಂತಾದ ಅದೃಷ್ಟ ವಿಷಯಗಳನ್ನು ತಿಳಿದುಕೊಳ್ಳುತ್ತದೆ. ಇನ್ನೇನು ಭೂತ, ಭವಿಷ್ಯತ್ತು , ವರ್ತಮಾನ ಇವುಗಳ ಎಲ್ಲ ಮಾತುಗಳು ಅವನ ಅರಿವಿಗೆ ಬರುತ್ತವೆ. ॥ ೨೮ ॥ ನೀರಿನಲ್ಲಿರುವ ಪ್ರಾಣಿಗಳು ನೀರಿನಿಂದಾಗಿ ನಾಶವಾಗುವುದಿಲ್ಲವೋ ಹಾಗೆಯೇ ನನ್ನಲ್ಲೇ ಏಕೀಭಾವದಿಂದ ಸ್ಥಿರವಾದ ಚಿತ್ತವುಳ್ಳ ಯೋಗಿಯ ಯೋಗಮಯ ಶರೀರವನ್ನು ಅಗ್ನಿ, ಜಲ ಮುಂತಾದ ಯಾವ ವಸ್ತುಗಳೂ ನಾಶಮಾಡಲಾರವು. ॥ ೨೯ ॥ ಶ್ರೀವತ್ಸ ಮುಂತಾದ ಚಿಹ್ನೆಗಳಿಂದ ಕೂಡಿದ, ಶಂಖ, ಚಕ್ರ, ಗದಾ, ಪದ್ಮ ಮುಂತಾದ ಆಯುಧಗಳಿಂದ ವಿಭೂಷಿತವಾದ, ಧ್ವಜ, ಛತ್ರ, ಚಾಮರ ಮುಂತಾದವುಗಳಿಂದ ಸಂಪನ್ನವಾದ ನನ್ನ ಅವತಾರಗಳನ್ನು ಧ್ಯಾನಿಸುವ ಪುರುಷನು ಅಜೇಯನಾಗುತ್ತಾನೆ. ॥ ೩೦ ॥

ಉಪಾಸಕಸ್ಯ ಮಾಮೇವಂ ಯೋಗಧಾರಣಯಾ ಮುನೇಃ ।
ಸಿದ್ಧಯಃ ಪೂರ್ವಕಥಿತಾ ಉಪತಿಷ್ಠಂತ್ಯಶೇಷತಃ
॥ ೩೧ ॥

ಜಿತೇಂದ್ರಿಯಸ್ಯ ದಾಂತಸ್ಯ ಜಿತಶ್ವಾಸಾತ್ಮನೋ ಮುನೇಃ ।
ಮದ್ಧಾರಣಾಂ ಧಾರಯತಃ ಕಾ ಸಾ ಸಿದ್ಧಿಃ ಸುದುರ್ಲಭಾ
॥ ೩೨ ॥

ಅಂತರಾಯಾನ್ ವದಂತ್ಯೇತಾ ಯುಂಜತೋ ಯೋಗಮುತ್ತಮಮ್ ।
ಮಯಾ ಸಂಪದ್ಯ ಮಾನಸ್ಯ ಕಾಲಕ್ಷಪಣಹೇತವಃ
॥ ೩೩ ॥

ಜನ್ಮೌಷಧಿತಪೋಮಂತ್ರೈರ್ಯಾವತೀರಿಹ ಸಿದ್ಧಯಃ ।
ಯೋಗೇನಾಪ್ನೋತಿ ತಾಃ ಸರ್ವಾ
ನಾನ್ಯೈರ್ಯೋಗಗತಿಂ ವ್ರಜೇತ್
॥ ೩೪ ॥

ಸರ್ವಾಸಾಮಪಿ ಸಿದ್ಧೀನಾಂ ಹೇತುಃ ಪತಿರಹಂ ಪ್ರಭುಃ ।
ಅಹಂ ಯೋಗಸ್ಯ ಸಾಂಖ್ಯಸ್ಯ ಧರ್ಮಸ್ಯ ಬ್ರಹ್ಮವಾದಿನಾಮ್
॥ ೩೫ ॥

ಅಹಮಾತ್ಮಾಽಂತರೋ ಬಾಹ್ಯೋಽನಾವೃತಃ ಸರ್ವದೇಹಿನಾಮ್ ।
ಯಥಾ ಭೂತಾನಿ ಭೂತೇಷು ಬಹಿರಂತಃ ಸ್ವಯಂ ತಥಾ
॥ ೩೬ ॥

ನನ್ನ ಉಪಾಸನೆಯನ್ನು ಮಾಡುತ್ತಾ , ಯೋಗಧಾರಣೆಯ ಮೂಲಕ ನನ್ನನ್ನೇ ಚಿಂತಿಸುವ ವಿಚಾರಶೀಲ ಪುರುಷನ ಮುಂದೆ ಈ ಸಿದ್ಧಿಗಳು ಎಲ್ಲ ರೀತಿಯಿಂದ ಬಂದು ಅಣಿಯಾಗುತ್ತವೆ. ಇದನ್ನು ನಾನು ನಿನಗೆ ವರ್ಣಿಸಿರುವೆನು. ॥ ೩೧ ॥ ಪ್ರಿಯ ಉದ್ಧವನೇ! ಯಾರು ತನ್ನ ಪ್ರಾಣ, ಮನಸ್ಸು, ಇಂದ್ರಿಯಗಳ ಮೇಲೆ ವಿಜಯ ಸಾಧಿಸಿರುವನೋ ಯಾರು ಸಂಯಮಿಯಾಗಿರುವನೋ, ನನ್ನದೇ ಸ್ವರೂಪವನ್ನು ಧರಿಸಿರುವನೋ ಅವನಿಗಾಗಿ ಇಂತಹ ಯಾವ ಸಿದ್ಧಿಗಳು ದುರ್ಲಭವಲ್ಲ, ಅವನಿಗಾದರೋ ಎಲ್ಲ ಸಿದ್ಧಿಗಳು ಪ್ರಾಪ್ತವೇ ಇರುತ್ತವೆ. ॥ ೩೨ ॥ ಭಕ್ತಿಯೋಗ ಅಥವಾ ಜ್ಞಾನ ಯೋಗಾದಿ ಉತ್ತಮ ಯೋಗಗಳ ಅಭ್ಯಾಸ ಮಾಡುತ್ತಿರುವ ಜನರಿಗೆ, ನನ್ನಲ್ಲಿ ಒಂದಾಗಿರುವವರಿಗೆ ಈ ಸಿದ್ಧಿಗಳು ಪ್ರಾಪ್ತವಾಗುವುದು ಒಂದು ವಿಘ್ನವೇ ಆಗಿದೆ. ಏಕೆಂದರೆ, ಇವೆಲ್ಲವೂ ಭಗವಂತನ ಬಳಿಗೆ ಹೋಗಲು ವಿಳಂಬಮಾಡುತ್ತವೆ ಎಂದು ಶ್ರೇಷ್ಠ ಪುರುಷರು ಹೇಳುತ್ತಾರೆ. ॥ ೩೩ ॥ ಜನ್ಮ, ಔಷಧಿ, ತಪಸ್ಸು, ಮಂತ್ರಾದಿಗಳ ಮೂಲಕ ಪ್ರಾಪ್ತವಾಗುವ ಸಿದ್ಧಿಗಳೆಲ್ಲವೂ ಯೋಗದ ಮೂಲಕ ದೊರೆಯುವವು. ಆದರೆ ಭಗವಂತನ ಪ್ರಾಪ್ತಿಯು ಏಕಮಾತ್ರ ಭಗವಂತನಲ್ಲಿ ಚಿತ್ತವನ್ನು ತೊಡಗಿಸುವುದರಿಂದಲೇ ಪ್ರಾಪ್ತಿಯಾಗುತ್ತದೆ. ॥ ೩೪ ॥ ಬ್ರಹ್ಮವಾದಿಗಳು ಯೋಗ, ಸಾಂಖ್ಯ, ಧರ್ಮ ಮುಂತಾದ ಅನೇಕ ಸಾಧನೆಗಳನ್ನು ಹೇಳಿರುವರು. ಅವುಗಳ ಹಾಗೂ ಸಮಸ್ತಸಿದ್ಧಿಗಳ ಏಕಮಾತ್ರ ಹೇತು ಸ್ವಾಮಿ ಮತ್ತು ಒಡೆಯ ನಾನೇ ಆಗಿದ್ದೇನೆ. ॥ ೩೫ ॥ ಎಲ್ಲ ಪ್ರಾಣಿಗಳ ಒಳ-ಹೊರಗೆ, ಸರ್ವತ್ರ ಸೂಕ್ಷ್ಮ ಪಂಚ-ಮಹಾಭೂತಗಳು ಇರುವಂತೆಯೇ, ನಾನು ಸಮಸ್ತ ಪ್ರಾಣಿಗಳ ಒಳಗೆ ದೃಷ್ಟಾರೂಪದಿಂದ ಮತ್ತು ಹೊರಗೆ ದೃಶ್ಯರೂಪದಿಂದ ಸ್ಥಿತನಾಗಿದ್ದೇನೆ. ನನ್ನಲ್ಲಿ ಒಳ-ಹೊರಗೆ ಭೇದವೇ ಇಲ್ಲ, ಏಕೆಂದರೆ, ನಾನು ನಿರಾವರಣ, ಒಂದೇ – ಅದ್ವಿತೀಯ ಆತ್ಮಾ ಸರ್ವವ್ಯಾಪಕನಾಗಿದ್ದೇನೆ. ॥ ೩೬ ॥

ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಭಗವಂತನ ವಿಭೂತಿಗಳ ವರ್ಣನೆ

ಉದ್ಧವ ಉವಾಚ

ತ್ವಂ ಬ್ರಹ್ಮ ಪರಮಂ ಸಾಕ್ಷಾದನಾದ್ಯಂತಮಪಾವೃತಮ್ ।
ಸರ್ವೇಷಾಮಪಿ ಭಾವಾನಾಂ ತ್ರಾಣಸ್ಥಿತ್ಯಪ್ಯಯೋದ್ಭವಃ
॥ ೧ ॥

ಉಚ್ಚಾವಚೇಷು ಭೂತೇಷು ದುರ್ಜ್ಞೇಯಮಕೃತಾತ್ಮಭಿಃ ।
ಉಪಾಸತೇ ತ್ವಾಂ ಭಗವನ್ ಯಾಥಾತಥ್ಯೇನ ಬ್ರಾಹ್ಮಣಾಃ
॥ ೨ ॥

ಉದ್ಧವನೆಂದನು – ಓ ಭಗವಂತನೇ! ನೀನು ಸ್ವತಃ ಭಗವಂತನಾಗಿರುವೆ. ನಿನಗೆ ಆದಿಯಾಗಲೀ, ಅಂತ್ಯವಾಗಲೀ ಇಲ್ಲ. ನೀನು ಆವರಣರಹಿತ, ಅದ್ವಿತೀಯ ತತ್ತ್ವನಾಗಿರುವೆ. ಸಮಸ್ತ ಪ್ರಾಣಿಗಳ ಮತ್ತು ಪದಾರ್ಥಗಳ ಉತ್ಪತ್ತಿ , ಸ್ಥಿತಿ, ರಕ್ಷಣೆ ಪ್ರಳಯದ ಕಾರಣವೂ ನೀನೇ ಆಗಿರುವೆ. ನೀನು ಉಚ್ಚ-ನೀಚ ಎಲ್ಲ ಪ್ರಾಣಿಗಳಲ್ಲಿ ಸ್ಥಿತನಾಗಿರುವೆ. ಆದರೆ ತಮ್ಮ ಮನಸ್ಸನ್ನು ವಶಪಡಿಸಿಕೊಳ್ಳದ ಜನರು ನಿನ್ನನ್ನು ಅರಿಯಲಾರರು. ಆದರೆ ನಿನ್ನ ವಿಷಯದಲ್ಲಿ ಯಥಾರ್ಥವಾಗಿ ತಿಳಿದವರೇ ನಿನ್ನ ಉಪಾಸನೆಯನ್ನು ಮಾಡುತ್ತಾರೆ. ॥ ೧-೨ ॥

ಯೇಷು ಯೇಷು ಚ ಭಾವೇಷು ಭಕ್ತ್ಯಾ ತ್ವಾಂ ಪರಮರ್ಷಯಃ ।
ಉಪಾಸೀನಾಃ ಪ್ರಪದ್ಯಂತೇ ಸಂಸಿದ್ಧಿಂ ತದ್ವದಸ್ವ ಮೇ
॥ ೩ ॥

ಗೂಢಶ್ಚರಸಿ ಭೂತಾತ್ಮಾ ಭೂತಾನಾಂ ಭೂತಭಾವನ ।
ನ ತ್ವಾಂ ಪಶ್ಯಂತಿ ಭೂತಾನಿ ಪಶ್ಯಂತಂ ಮೋಹಿತಾನಿ ತೇ
॥ ೪ ॥

ಯಾಃ ಕಾಶ್ಚ ಭೂಮೌ ದಿವಿ ವೈ ರಸಾಯಾಂ
ವಿಭೂತಯೋ ದಿಕ್ಷು ಮಹಾವಿಭೂತೇ ।
ತಾ ಮಹ್ಯಮಾಖ್ಯಾಹ್ಯನುಭಾವಿತಾಸ್ತೇ
ನಮಾಮಿ ತೇ ತೀರ್ಥಪದಾಂಘ್ರಿಪದ್ಮಮ್ ॥ ೫ ॥

*ಶ್ರೀಭಗವಾನುವಾಚ*

ಏವಮೇತದಹಂ ಪೃಷ್ಟಃ ಪ್ರಶ್ನಂ ಪ್ರಶ್ನವಿದಾಂ ವರ ।
ಯುಯುತ್ಸುನಾ ವಿನಶನೇ ಸಪತ್ನೈರರ್ಜುನೇನ ವೈ
॥ ೬ ॥

ಜ್ಞಾತ್ವಾ ಜ್ಞಾತಿವಧಂ ಗರ್ಹ್ಯಮಧರ್ಮಂ ರಾಜ್ಯ ಹೇತುಕಮ್ ।
ತತೋ ನಿವೃತ್ತೋ ಹಂತಾಹಂ ಹತೋಽಯಮಿತಿ ಲೌಕಿಕಃ
॥ ೭ ॥

ಸ ತದಾ ಪುರುಷವ್ಯಾಘ್ರೋ ಯುಕ್ತ್ಯಾ ಮೇ ಪ್ರತಿಬೋಧಿತಃ ।
ಅಭ್ಯಭಾಷತ ಮಾಮೇವಂ ಯಥಾ ತ್ವಂ ರಣಮೂರ್ಧನಿ
॥ ೮ ॥

ಅಹಮಾತ್ಮೋದ್ಧವಾಮೀಷಾಂ ಭೂತಾನಾಂ ಸುಹೃದೀಶ್ವರಃ ।
ಅಹಂ ಸರ್ವಾಣಿ ಭೂತಾನಿ ತೇಷಾಂ ಸ್ಥಿತ್ಯುದ್ಭವಾಪ್ಯಯಃ
॥ ೯ ॥

ಅಹಂ ಗತಿರ್ಗತಿಮತಾಂ ಕಾಲಃ ಕಲಯತಾಮಹಮ್ ।
ಗುಣಾನಾಂ ಚಾಪ್ಯಹಂ ಸಾಮ್ಯಂ ಗುಣಿನ್ಯೌತ್ಪತ್ತಿಕೋ ಗುಣಃ
॥ ೧೦ ॥

ಗುಣಿನಾಮಪ್ಯಹಂ ಸೂತ್ರಂ ಮಹತಾಂ ಚ ಮಹಾನಹಮ್ ।
ಸೂಕ್ಷ್ಮಾಣಾಮಪ್ಯಹಂ ಜೀವೋ ದುರ್ಜಯಾನಾಮಹಂ ಮನಃ
॥ ೧೧ ॥

ಹಿರಣ್ಯಗರ್ಭೋ ವೇದಾನಾಂ ಮಂತ್ರಾಣಾಂ ಪ್ರಣವಸ್ತ್ರಿವೃತ್ ।
ಅಕ್ಷರಾಣಾಮಕಾರೋಽಸ್ಮಿ ಪದಾನಿಚ್ಛಂದಸಾಮಹಮ್
॥ ೧೨ ॥

ದೊಡ್ಡ-ದೊಡ್ಡ ಋಷಿ-ಮಹರ್ಷಿಗಳು ನಿನ್ನ ಯಾವ ರೂಪಗಳನ್ನು ಮತ್ತು ವಿಭೂತಿಗಳನ್ನು ಪರಮ ಭಕ್ತಿಯಿಂದ ಉಪಾಸಿಸಿ ಸಿದ್ಧಿಯನ್ನು ಪಡೆಯುತ್ತಾರೋ ಅವನ್ನು ನೀನು ನನಗೆ ಹೇಳುವ ಕೃಪೆಮಾಡು. ॥ ೩ ॥ ಸಮಸ್ತ ಪ್ರಾಣಿಗಳ ಜೀವನದಾತೃವಾದ ಪ್ರಭುವೇ! ನೀನು ಸಮಸ್ತ ಪ್ರಾಣಿಗಳ ಅಂತರಾತ್ಮನಾಗಿರುವೆ. ನೀನು ಅವುಗಳಲ್ಲಿ ನಿನ್ನನ್ನು ಗುಪ್ತವಾಗಿರಿಸಿಕೊಂಡು ಲೀಲೆಮಾಡುತ್ತಿರುವೆ. ನೀನಾದರೋ ಎಲ್ಲರನ್ನು ನೋಡುತ್ತೀಯೆ, ಆದರೆ ಜಗತ್ತಿನ ಪ್ರಾಣಿಗಳು ನಿನ್ನ ಮಾಯೆಯಿಂದ ಮೋಹಿತರಾಗಿ ನಿನ್ನನ್ನು ನೋಡಲಾರರು. ॥ ೪ ॥ ಅಚಿಂತ್ಯ ಐಶ್ವರ್ಯ ಸಂಪನ್ನ ಪ್ರಭೋ! ಪೃಥಿವಿ, ಸ್ವರ್ಗ, ಪಾತಾಳ ಹಾಗೂ ದಶದಿಕ್ಕುಗಳಲ್ಲಿ ನಿನ್ನ ಪ್ರಭಾವದಿಂದ ಕೂಡಿದ ಯಾವ-ಯಾವ ವಿಭೂತಿಗಳು ಇವೆಯೋ, ಅವನ್ನು ನೀನು ದಯಾಮಾಡಿ ನನಗೆ ವರ್ಣಿಸಿ ಹೇಳು. ಸ್ವಾಮಿ! ಸಮಸ್ತ ತೀರ್ಥಗಳನ್ನು ಕೂಡ ತೀರ್ಥವಾಗಿಸುವ ನಿನ್ನ ಈ ಚರಣ ಕಮಲಗಳನ್ನು ನಾನು ವಂದಿಸುತ್ತೇನೆ. ॥ ೫ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವಾ! ನೀನು ಪ್ರಶ್ನೆಯ ಮರ್ಮವನ್ನು ತಿಳಿಯುವವರಲ್ಲಿ ಶ್ರೇಷ್ಠನಾಗಿರುವೆ. ಕುರುಕ್ಷೇತ್ರದಲ್ಲಿ ಕೌರವ-ಪಾಂಡವರಿಗೆ ಯುದ್ಧವು ಸನ್ನದ್ಧವಾದಾಗ ಶತ್ರುಗಳೊಡನೆ ಯುದ್ಧಕ್ಕಾಗಿ ತತ್ಪರನಾದ ಅರ್ಜುನನು ನನ್ನಲ್ಲಿ ಹೀಗೆಯೇ ಪ್ರಶ್ನಿಸಿದ್ದನು. ॥ ೬ ॥

ಕುಟುಂಬದವರನ್ನು ರಾಜ್ಯಕ್ಕಾಗಿ ಕೊಲ್ಲುವುದು ಬಹಳ ನಿಂದನೀಯವೂ, ಅಧರ್ಮವೂ ಆಗಿದೆ ಎಂಬ ಧೋರಣೆ ಅರ್ಜುನನ ಮನಸ್ಸಿನಲ್ಲಿ ಉಂಟಾಗಿತ್ತು. ಸಾಧಾರಣ ಜನರಂತೆ 'ನಾನು ಕೊಲ್ಲುವವನೂ, ಇವರೆಲ್ಲ ಸಾಯುವವರಾಗಿದ್ದಾರೆ' ಹೀಗೆ ಯೋಚಿಸುತ್ತಾ ಅವನು ಯುದ್ಧದಿಂದ ನಿವೃತ್ತನಾಗಲು ಬಯಸಿದ್ದನು. ॥ ೭ ॥ ಆಗ ನಾನು ರಣಭೂಮಿಯಲ್ಲಿ ಬಹಳಷ್ಟು ಯುಕ್ತಿಗಳಿಂದ ವೀರವರ ಅರ್ಜುನನಿಗೆ ತಿಳಿಸಿಹೇಳಿದ್ದೆ. ಆಗಲೂ ಅರ್ಜುನನು ನೀನು ನನ್ನಲ್ಲಿ ಪ್ರಶ್ನಿಸಿದಂತೆ ಪ್ರಶ್ನಿಸಿದ್ದನು. ॥ ೮ ॥ ಎಲೈ ಉದ್ಧವನೇ! ನಾನು ಸಮಸ್ತ ಪ್ರಾಣಿಗಳ ಆತ್ಮಾ, ಹಿತೈಷಿ, ಸುಹೃದ್, ಈಶ್ವರ – ನಿಯಾಮಕನಾಗಿದ್ದೇನೆ. ನಾನೇ ಈ ಸಮಸ್ತ ಪ್ರಾಣಿ-ಪದಾರ್ಥಗಳ ರೂಪದಲ್ಲಿದ್ದೇನೆ. ಇವುಗಳ ಉತ್ಪತ್ತಿ, ಸ್ಥಿತಿ ಮತ್ತು ಪ್ರಳಯದ ಕಾರಣನೂ ನಾನೇ ಆಗಿದ್ದೇನೆ. ॥ ೯ ॥ ಗತಿಶೀಲ ಪದಾರ್ಥಗಳ ಗತಿಯು ನಾನೇ ಆಗಿದ್ದೇನೆ. ಗಣನೆ ಮಾಡುವವರಲ್ಲಿ ಕಾಲವು, ಗುಣಗಳ ಸಾಮ್ಯಾವಸ್ಥಾ ಪ್ರಕೃತಿ, ಗುಣಿಗಳ ನೈಸರ್ಗಿಕ ಗುಣಗಳು ನಾನೇ ಆಗಿದ್ದೇನೆ. ॥ ೧೦ ॥ ಗುಣಗಳಲ್ಲಿ ಕ್ಷೋಭೆ ಉಂಟಾಗಿ ಕ್ರಿಯಾಶಕ್ತಿ ಪ್ರಧಾನ ಸೂತ್ರಾತ್ಮಾ, ಜ್ಞಾನಶಕ್ತಿ ಪ್ರಧಾನ ಮಹತ್ತತ್ತ್ವ, ಸೂಕ್ಷ್ಮಗಳಲ್ಲಿಯೂ ಕೂಡ ಜೀವರೂಪದಿಂದ ನಾನೇ ಆಗಿರುವೆನು. ಕಷ್ಟವಾಗಿ ವಶಕ್ಕೆ ಬರುವಂತಹ ಮನಸ್ಸೂ ನಾನೇ ಆಗಿದ್ದೇನೆ. ॥ ೧೧ ॥ ವೇದಗಳ ಅಭಿವ್ಯಕ್ತಿಸ್ಥಾನ ಹಿರಣ್ಯಗರ್ಭನೂ, ಮಂತ್ರಗಳಲ್ಲಿ 'ಅ, ಉ, ಮ್' ಈ ಮೂರು ಮಾತ್ರೆಗಳಿಂದ ಕೂಡಿದ ಪ್ರಣವವೂ, ಅಕ್ಷರದಲ್ಲಿ ಅಕಾರವೂ, ಛಂದಸ್ಸುಗಳಲ್ಲಿ ತ್ರಿಪದಾ ಗಾಯತ್ರಿಯೂ ನಾನೇ ಆಗಿದ್ದೇನೆ. ॥ ೧೨ ॥